# ಸಮಗ್ರ ದಾಸ ಸಾಹಿತ್ಯ

ಸಂಪುಟ : ೩೩



# ಕವಿ ಪರಮದೇವ ಮತ್ತು ಇತರ ಅದ್ವೈತ ಹರಿದಾಸರ ಕೀರ್ತನೆಗಳು

ಸಮಗ್ರ ದಾಸ ಸಾಹಿತ್ಯ

ಸಂಪುಟ : ೩೩

# ಕವಿ ಪರಮದೇವ ಮತ್ತು ಇತರ ಅದ್ವೈತ ಹರಿದಾಸರ ಕೀರ್ತನೆಗಳು

(ಕವಿ ಪರಮದೇವ, ಕರ್ಕಿ ಕೇಶವದಾಸರು
ಬೇಟೆರಾಯ ದೀಕ್ಷಿತರು, ಶಂಕರಭಟ್ಟ ಅಗ್ನಿಹೋತ್ರಿ
ಹಾಗೂ ಭಟಕಳ ಅಪ್ಪಯ್ಯ ಅವರ ಕೀರ್ತನೆಗಳು)

*ಸಂಪಾದಕರು*

ಡಾ. ಕೆಳದಿ ವೆಂಕಟೇಶ ಜೋಯಿಸ್

ಡಾ. ಡಿ. ಆರ್. ಪಾಂಡುರಂಗ

ಕರ್ನಾಟಕ ಸರ್ಕಾರ

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

ಬೆಂಗಳೂರು

**SAMAGRA DASA SAHiTYA VOLUME - 33** :
*Kavi Pamadeva Mattu Itara Advaitha Haridasara Keerthanegalu* (*Kavi Pamadeva, Karki Keshavadasa, Beteraya Deekshitharu, Shankara Bhatta Agnihothri & Bhatakala Appayya* ), Edited by Keladi Venkatesha Jois and Dr. D. R. Panduranga and Published by Sri. Y. K. Muddukrishna, Director, Directorate of Kannada and Culture, Kannada Bhavana, J.C. Road, Bangalore - 560 002.

ಪುಟಗಳು : 66 + ೪೪೦


ಪ್ರಥಮ ಮುದ್ರಣ : ೨೦೦೩
ಪ್ರತಿ : ೧೨೫೦

ಬಿಡಿ ಪ್ರತಿ ಬೆಲೆ : ರೂ. ೬೦=೦೦
ಸಮಗ್ರ ಸಂಪುಟಗಳ ಬೆಲೆ : ರೂ. ೨೪೦೦=೦೦

**ಮುದ್ರಣ ನಿರ್ವಹಣೆ :**

ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿಟೆಡ್
೩೬, ಕನ್ನಿಂಗ್ ಹ್ಯಾಮ್ ರಸ್ತೆ
ಬೆಂಗಳೂರು – ೫೬೦ ೦೫೨.

**ಮುದ್ರಕರು :**

ಮೆ. ಡಾಟ್ಸ್
೧೨೪, ಸುಲ್ತಾನ್‌ಪೇಟೆ
ಬೆಂಗಳೂರು – ೫೬೦ ೦೫೩.

# ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆ

## ಮುನ್ನುಡಿ

ಹರಿದಾಸ ಸಾಹಿತ್ಯ ಕನ್ನಡ ಸಂಸ್ಕೃತಿ ಪರಂಪರೆಯ ಮಹತ್ವಪೂರ್ಣ ಭಾಗವಾಗಿದೆ. ದೇಶೀಯತೆ ಹಾಗೂ ಗೇಯತೆಗಳೆರಡನ್ನೂ ಮೇಳವಿಸಿಕೊಂಡು, ಕನ್ನಡ ಸಾಹಿತ್ಯವಾಹಿನಿಗೆ ಇದು ಹೊಸತನವನ್ನು ನೀಡಿದೆ. ಮನುಜಮತ, ಸಾಹಿತ್ಯಪಥ ಹಾಗೂ ಭಕ್ತಿಸಿದ್ಧಾಂತದ ತ್ರಿವೇಣಿಯಾಗಿರುವ ಈ ಪ್ರಜಾಸಾಹಿತ್ಯವನ್ನು ಪ್ರಜೆಗಳಿಗೆ ಮುಟ್ಟಿಸುವುದು ಪ್ರಜಾಸತ್ತಾತ್ಮಕ ಸರಕಾರದ ಆದ್ಯ ಕರ್ತವ್ಯವಾಗಿದೆ.

ಕನ್ನಡ ಭಾಷಿಕಶಕ್ತಿಯ ವಿವಿಧ ಆಯಾಮಗಳನ್ನು ಸೆಳೆದು ತೋರಿರುವ ಸಾಹಿತ್ಯ-ಸಂಗೀತಗಳ ಸಾಮರಸ್ಯವನ್ನು ಮೆರೆದಿರುವ ಈ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಜಾಗತಿಕ ಮಹತ್ವವನ್ನು ತಂದುಕೊಟ್ಟಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಮಾನವಾನುಕಂಪ, ಸಮಾಜಸುಧಾರಣೆ, ಲೋಕದ ಡೊಂಕುಗಳನ್ನು ನಗೆ ವಿಡಂಬನೆಗಳ ಮೂಲಕ ತಿದ್ದುವ ಕೌಶಲ ದಾಸಸಾಹಿತ್ಯದ ಪ್ರಮುಖ ಲಕ್ಷಣವಾಗಿದೆ.

ಆಧ್ಯಾತ್ಮಿಕ ಸಾಧನೆ, ಅನುಭವ – ಅನುಭಾವಗಳು ದಾಸಸಾಹಿತ್ಯದ ಪ್ರಮುಖ ಅಂಶವಾದರೂ, ಸುತ್ತಮುತ್ತಲಿರುವ ಜೀವನದ ಕಡೆಗೆ, ಮಾನವ ಸ್ವಭಾವದ ಕಡೆಗೆ ಕಣ್ಣು ಹರಿಸಿದ ಹರಿದಾಸರು ಸಾತ್ತ್ವಿಕ ಜೀವನ ನಿರ್ವಹಣೆಗೆ, ಮಾನವನ ಮೇಲ್ಮೆಗೆ, ನೈತಿಕ ಆಚರಣೆಗೆ ಒತ್ತು ನೀಡಿದವರು.

ಹರಿದಾಸ ಸಾಹಿತ್ಯ ಅಪಾರವಾದುದು ಹಾಗೂ ವೈವಿಧ್ಯವಾದುದು. ಈ ವಿಪುಲ ಸಾಹಿತ್ಯರಾಶಿಯನ್ನು ಒಂದೆಡೆ ಕ್ರೋಡೀಕರಿಸಿ, ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಕನ್ನಡ ಜನತೆಗೆ ನೀಡುತ್ತಿದೆ.

ಈ ಯೋಜನೆಗೆ ದುಡಿದ ಸಂಪಾದಕ ಮಂಡಳಿಯ ಶ್ರದ್ಧೆ ಹಾಗೂ ಮಾರ್ಗದರ್ಶನವನ್ನು, ವಿವಿಧ ಸಂಪುಟಗಳ ಸಂಪಾದಕರಾಗಿ ನಾಡಿನ ಅನೇಕ ವಿದ್ವಾಂಸರು ತೋರಿರುವ ಆಸಕ್ತಿ ಹಾಗೂ ನೆರವನ್ನು ಮತ್ತು ಈ ಸಂಪುಟದ ಸಂಪಾದಕರ ಶ್ರಮವನ್ನು ಸ್ಮರಿಸುತ್ತ ಕನ್ನಡ ಜನತೆಯ ಕೈಗೆ ಈ ಮೌಲಿಕ ಪ್ರಕಟಣೆಗಳನ್ನು ಸಂತೋಷದಿಂದ ಅರ್ಪಿಸುತ್ತೇನೆ.

**ಎಸ್. ಎಂ. ಕೃಷ್ಣ**
ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ

# ಎರಡು ಮಾತು

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕರ್ನಾಟಕದ ಸಾಹಿತ್ಯ, ಸಂಗೀತ, ಸಂಸ್ಕೃತಿಗಳನ್ನು ಪ್ರಭಾವಪೂರ್ಣವಾಗಿ ಸಮೃದ್ಧಿಗೊಳಿಸಿದವರು ಹರಿದಾಸರು. ಬದುಕಿನಲ್ಲಿ ನಿಷ್ಠೆ, ಸಾಹಿತ್ಯದಲ್ಲಿ ಬದುಕಿನ ತತ್ತ್ವಗಳನ್ನು ಅಡಗಿಸಿ ಜನಸಾಮಾನ್ಯರನ್ನು ಉನ್ನತ ಜೀವನದತ್ತ ಉದ್ದೀಪಿಸುವ ಮಹಾಕಾಯಕದಲ್ಲಿ ತೊಡಗಿದವರು ಹರಿದಾಸರು. ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯಾಗಿರುವ ಹರಿದಾಸ ಸಾಹಿತ್ಯ ಸಮಾಜದ ಮೌಢ್ಯವನ್ನು ಬಯಲಿಗೆಳೆದು, ಜಾತಿ, ಮತ, ಪಂಥಗಳನ್ನು ಮೀರಿ ನಿಂತ ಮಾನವೀಯ ಮೌಲ್ಯಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿತು.

ಹರಿದಾಸ ಸಾಹಿತ್ಯಕ್ಕೆ ಪ್ರೇರಣೆ ಭಕ್ತಿಯಾದರೂ, ಕರ್ನಾಟಕ ಸಂಗೀತಕ್ಕೆ ಸಮೃದ್ಧಿಯನ್ನು ನೀಡಿದವರು ಹರಿದಾಸರು. ಗ್ರಾಮ್ಯ ಮತ್ತು ದೇಶ್ಯ ಶಬ್ದಗಳಿಗೆ ಸಾಹಿತ್ಯದ ಮುದ್ರೆಯನ್ನು ಒತ್ತಿ, ಭಾಷೆಗೊಂದು ಪರಿಪಕ್ವತೆಯನ್ನೂ ತಂದುಕೊಟ್ಟರು. ಇಂಥ ಸಾಹಿತ್ಯ ಸಂಪತ್ತನ್ನು ರಕ್ಷಿಸುವುದು ಮತ್ತು ಪ್ರಸಾರ ಮಾಡುವುದು ನಮ್ಮ ಕರ್ತವ್ಯ. ಈ ದೃಷ್ಟಿಯಿಂದ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆಗೆ ಸಮಿತಿಯೊಂದನ್ನು ರಚಿಸಿದ್ದು, ಇದರಲ್ಲಿ ನಾಡಿನ ಅನೇಕ ವಿದ್ವಾಂಸರು ಸಂಪುಟ ಸಂಪಾದಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಈ ಸಂಪುಟಗಳು ಹೊರಬರಲು ಕಾರಣರಾದ

ಸಂಪಾದಕ ಮಂಡಳಿಯ ಸದಸ್ಯರಿಗೆ ಹಾಗೂ ಈ ಸಂಪುಟದ ಸಂಪಾದಕರಿಗೆ ನನ್ನ ಕೃತಜ್ಞತೆಗಳು.

ದಾಸರು ತಮ್ಮ ಸಾಹಿತ್ಯದಲ್ಲಿ ಸಾರ್ವಕಾಲಿಕ ಮೌಲ್ಯಗಳನ್ನು ಉಳಿಸಿ ಹೋಗಿದ್ದಾರೆ. ನಮ್ಮ ಸಾಮಾಜಿಕ ಜೀವನವನ್ನು ರೂಪಿಸುವಲ್ಲಿ ಈ ಕೀರ್ತನೆಗಳು ಮೌಲಿಕವಾದುವು. ಕನ್ನಡ ಜನತೆ ಈ ಕೃತಿಯ ಪ್ರಯೋಜನವನ್ನು ಪಡೆದರೆ ಪಟ್ಟ ಶ್ರಮ ಸಾರ್ಥಕವಾಗುತ್ತದೆ.

**ರಾಣಿ ಸತೀಶ್**

ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಯೋಜನೆಯನ್ನು ಕುರಿತು

ಕನ್ನಡ ಸಾಹಿತ್ಯ ಚರಿತ್ರೆಯ ಸಿರಿವಂತಿಕೆಯಲ್ಲಿ ಕೀರ್ತನ ಸಾಹಿತ್ಯದ ಕೊಡುಗೆ ವಿಪುಲವಾದುದು ; ವೈಶಿಷ್ಟ್ಯಪೂರ್ಣವಾದುದು. ಈ ಸಮಗ್ರ ಸಾಹಿತ್ಯದ ಸಂಗ್ರಹ ಮತ್ತು ಪ್ರಕಾಶನದ ಕಾರ್ಯ ಪೂರ್ಣವಾಗಿ ಆಗಿರಲಿಲ್ಲ. ಇದನ್ನು ಮನಗಂಡ ಸರ್ಕಾರ ಸಮಗ್ರ ದಾಸ ಸಾಹಿತ್ಯ ಪ್ರಕಟಣೆಯ ಕಾರ್ಯವನ್ನು ಕೈಗೆತ್ತಿಕೊಂಡಿತು.

ಸುಮಾರು ಒಂದು ನೂರ ಮೂವತ್ತೊಂಬತ್ತು ಜನ ದಾಸರ ಸುಮಾರು ಹದಿನಾರು ಸಾವಿರ ಕೀರ್ತನೆಗಳ ಬೃಹತ್ ಸಾಹಿತ್ಯ ಸಾಮಗ್ರಿ ದೊರಕಿತು. ಹೀಗೆ ಸಾಂಪ್ರದಾಯಿಕ ರೀತಿಯಲ್ಲಿ ಸಂಗ್ರಹಿಸಿ, ಸಂಪಾದಿಸಿದ ಕೀರ್ತನ ಸಾಹಿತ್ಯವನ್ನು ಸಂಪುಟಗಳಲ್ಲಿ ಮುದ್ರಿಸುವುದು ಕಷ್ಟವೇನಾಗಿರಲಿಲ್ಲ. ಆದರೆ, ಅದನ್ನು ಮಾಹಿತಿ ತಂತ್ರಜ್ಞಾನದ ಇವತ್ತಿನ ಸಂದರ್ಭದಲ್ಲಿ ಬಹು ಉಪಯೋಗಿ ನೆಲೆಯಲ್ಲಿ ಬಹುಮಾಧ್ಯಮದಲ್ಲಿ ಹೊರತರಬೇಕೆಂಬ ಕನಸು ರೋಮಾಂಚಕಾರಿ ಅನುಭವವೇ ಸರಿ. ಇದನ್ನು ಕೃತಿ ರೂಪಕ್ಕಿಳಿಸುವ ಹಾದಿಯಲ್ಲಿ ಎದುರಾದ ತಾಂತ್ರಿಕ ಸವಾಲು ಬಹು ಕ್ಲಿಷ್ಟಕರವಾಗಿಯೇ ಕಂಡಿತು.

ದಿಟ, ಈ ಸಮಗ್ರ ಸಾಹಿತ್ಯವನ್ನು ಕೇವಲ ಮುದ್ರಣದಲ್ಲಷ್ಟೇ ಅಲ್ಲ ಆಯ್ದ ಕೀರ್ತನೆಗಳನ್ನು ಗಾಯನಕ್ಕೆ ಅಳವಡಿಸಿ, ಸಿಡಿ ಮತ್ತು ಅಂತರ್ಜಾಲದಲ್ಲಿ ಹೊರತರ ಬೇಕೆಂದಾಗ ಬಳಕೆದಾರರ ಅವಶ್ಯಕತೆಯನ್ನು ಆಧರಿಸಿ ತಯಾರಿಸುವ ಅಗತ್ಯ ಇತ್ತು. ಆದರೆ ಇವುಗಳಲ್ಲಿ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಸರ್ಚ್ ಎಂಜಿನ್ (ಹುಡುಕುವಿಕೆ) ಇಲ್ಲದಿರುವುದು ಒಂದು ತಾಂತ್ರಿಕ ಸಮಸ್ಯೆಯೇ ಆಯಿತು.

ಈ ರೀತಿಯ ಪ್ರಯತ್ನ ಕನ್ನಡ ಭಾಷೆಯಲ್ಲಿ ಹಿಂದೆಂದೂ ಆಗದಿದ್ದುದರಿಂದ ತಂತ್ರಾಂಶವನ್ನು ಹೊಸದಾಗಿಯೇ ಅಭಿವೃದ್ಧಿ ಪಡಿಸಬೇಕಾದ ಸವಾಲನ್ನು ಕೈಗೆತ್ತಿ ಕೊಳ್ಳಲಾಯಿತು. ಇದಕ್ಕಾಗಿ ಕನ್ನಡ ಗಣಕ ಪರಿಷತ್ತು, ರಾಷ್ಟ್ರೀಯ ಮಾಹಿತಿ ಕೇಂದ್ರ (ಎನ್‌ಐಸಿ), ಮಾಹಿತಿ ಮತ್ತು ತಂತ್ರಜ್ಞಾನ ಇಲಾಖೆ, ಮಹಾಭಾರತ ಸಂಶೋಧನಾ ಪ್ರತಿಷ್ಠಾನ ಮುಂತಾದ ಹಲವಾರು ತಂತ್ರಾಂಶ ಸಂಸ್ಥೆಗಳೊಂದಿಗೆ ನಿರಂತರ ಸಮಲೋಚನೆ, ಚಿಂತನೆಗಳನ್ನು ನಡೆಸಲಾಯಿತು.

ಹೀಗೆ ಸಾಹಿತ್ಯ ಸಂಗ್ರಹ, ಸಂಪಾದನೆ, ಸಂಗೀತ ಸಂಯೋಜನೆ, ಧ್ವನಿಮುದ್ರಣ, ಬಹುಮಾಧ್ಯಮಕ್ಕೆ ಅಳವಡಿಸುವ ತಾಂತ್ರಿಕ ಕುಶಲತೆಯು ನಿರಂತರ ಕಾರ್ಯಾನುಷ್ಠಾನಕ್ಕೆ ಸಂಪಾದಕ ಮಂಡಳಿ ಸದಸ್ಯರು, ಸಂಪುಟ ಸಂಪಾದಕರು, ಇಲಾಖಾ ಅಧಿಕಾರಿಗಳು, ತಂತ್ರಜ್ಞರು, ಕೋರ್ ಸಮಿತಿ ಸದಸ್ಯರು, ಸಂಗೀತ ನಿರ್ದೇಶಕರು, ಗಾಯಕರು – ಈ ಎಲ್ಲರ ಪರಿಶ್ರಮ ಅಗಾಧವಾಗಿ ದೊರಕಿದೆ. ಈ ಶ್ರಮದ ಫಲವಾಗಿ ಬಹುಮಾಧ್ಯಮದಲ್ಲಿ ಸಮಗ್ರ ದಾಸ ಸಾಹಿತ್ಯ ಯೋಜನೆಯ ಬೃಹತ್ ಕಾರ್ಯ ಸಾಕಾರಗೊಂಡಿದೆ.

ಈ ವಿಪುಲ ಸಾಹಿತ್ಯವನ್ನು ಕನ್ನಡ ಅಕ್ಷರಜ್ಞಾನಿಗಳು ಪುಸ್ತಕ ರೂಪದಲ್ಲಿಯೂ, ಬಹುಗಾತ್ರದ ಸಾಹಿತ್ಯವನ್ನು ಕೈ ಅಳತೆಯ ಸಿಡಿ ರೂಪದಲ್ಲಿಯೂ ಈಗ ಪಡೆಯಬಹುದಾಗಿದೆ. ಅಲ್ಲದೆ, ಅಂತರ್ಜಾಲದ ಮೂಲಕ ವಿಶ್ವದ ಯಾವುದೇ ಮೂಲೆಯಲ್ಲಿರುವ ಆಸಕ್ತ ಜನತೆ ಕುಳಿತಲ್ಲಿಯೇ ಆರಾಮವಾಗಿ ವೀಕ್ಷಿಸುವ, ಕೇಳುವ ಹಾಗೂ ಕನ್ನಡ ಅಕ್ಷರ ಜ್ಞಾನವಿರದ ಭಾಷಿಕರು ಸಹಿತ ಸಂಗೀತವನ್ನು ಕೇಳಿ ಆಸ್ವಾದಿಸುವ ಅವಕಾಶವನ್ನು ಏಕಕಾಲದಲ್ಲಿ ಕಲ್ಪಿಸಲಾಗಿದೆ. ಪ್ರಕಾಶನದ ಇತಿಹಾಸದಲ್ಲಿಯೇ ದಾಖಲನೀಯವಾದ ಈ ಕಾರ್ಯ ಮುಂದೆ ಸರ್ಕಾರಿ ಸಂಸ್ಥೆಗಳಿಗಾಗಲಿ ಖಾಸಗಿ ಸಂಸ್ಥೆಗಳಿಗಾಗಲಿ ಮಾದರಿಯಾಗಬಹುದೆಂದು ನಂಬಲಾಗಿದೆ.

ನಮ್ಮ ಸಂಸ್ಕೃತಿಯನ್ನು ಬಿತ್ತರಿಸಲು ನಾಲ್ಕು ಗೋಡೆಗಳೊಳಗಿನ ರಂಗ ಮಂದಿರಗಳು, ವೇದಿಕೆಗಳು ಅಗತ್ಯವಿದೆ ದಿಟ. ಆದರೆ ಭವಿತವ್ಯದಲ್ಲಿ ವಿಶ್ವದ ಜನರನ್ನು ತಲಪಲು ಮತ್ತು ಮುಖ್ಯವಾಗಿ ಯುವಜನಾಂಗಕ್ಕೆ ನಮ್ಮ ಸಾಂಸ್ಕೃತಿಕ ಕ್ಷಿತಿಜದ ವಿಸ್ತಾರವನ್ನು ಪರಿಚಯಿಸಲು ಸೂಕ್ಷ್ಮ ಸಂವೇದನಾಶೀಲವಾದ ಸಾಹಿತ್ಯವನ್ನು ಬಹುಮಾಧ್ಯಮದಲ್ಲಿ ಅಳವಡಿಸುವುದು ಅತ್ಯಾವಶ್ಯಕ. ಈ ನಿಟ್ಟಿನಲ್ಲಿ ಇದೊಂದು ವಿನೂತನ ಪ್ರಯೋಗ; ಈ ಪ್ರಯೋಗದ ಫಲ ಎಲ್ಲರಿಗೂ ಲಭ್ಯವಾಗಲೆಂಬುದು ನಮ್ಮ ಆಶಯ.

**ಸಿ. ಎಸ್. ಕೇದಾರ್**

ಸರ್ಕಾರದ ಕಾರ್ಯದರ್ಶಿ

# ಪ್ರಕಾಶಕರ ಮಾತು

ಕರ್ನಾಟಕದ ಧಾರ್ಮಿಕ, ಸಾಂಸ್ಕೃತಿಕ ಇತಿಹಾಸದಲ್ಲಿ ಹರಿದಾಸರ ಸ್ಥಾನ ವಿಶಿಷ್ಟವಾದದ್ದು. ಸಾವಿರಾರು ವರ್ಷಗಳಿಂದ ಭಾರತದಲ್ಲಿ ಅವಿರತವಾಗಿ ಹರಿದುಬಂದ ಜೀವನಮೌಲ್ಯಗಳನ್ನು ಜನಸಾಮಾನ್ಯರ ಆಡುಭಾಷೆಯಲ್ಲಿ ಮುಟ್ಟಿಸಿ, ಲೌಕಿಕ ವಿಡಂಬನೆಯ ಮೂಲಕ ಅವರ ಮಾನಸಿಕ ವಿಕಾಸವನ್ನು ಯಶಸ್ವಿಯಾಗಿ ಸಾಧಿಸಿದವರು ಹರಿದಾಸರು. ಪಾಂಡಿತ್ಯ, ಲೋಕಾನುಭವಗಳ ಹಿನ್ನೆಲೆಯಿಂದಾಗಿ, ಆಡುಭಾಷೆಯ ಸೊಗಡಿನಿಂದಾಗಿ ಇವರು ಹಾಡಿದ್ದೆಲ್ಲ ಸಾಹಿತ್ಯವಾಯಿತು, ಕಾವ್ಯವಾಯಿತು, ಕೇಳುಗರನ್ನು ಸೆರೆಹಿಡಿಯಿತು. ಗೇಯಗುಣವುಳ್ಳ, ನೃತ್ಯಕ್ಕೆ ಅಳವಡುವ, ಛಂದೋಬದ್ಧವಾದ, ಜನತೆಯ ಮಧ್ಯದಲ್ಲಿಯೇ ಸಂದರ್ಭಾನುಸಾರ ಹುಟ್ಟಿದ ಹರಿದಾಸ ಸಾಹಿತ್ಯ ವೈಶಿಷ್ಟ್ಯಪೂರ್ಣವೆನಿಸಿತು. ಕನ್ನಡ ವಾಙ್ಮಯದಲ್ಲಿ ದಾಸಸಾಹಿತ್ಯ ಒಂದು ವಿಶೇಷ ಸ್ಥಾನ ಪಡೆಯಿತು. ಹೀಗೆ ಸಾಹಿತ್ಯ, ಸಂಗೀತ ಮತ್ತು ಸಾಮಾಜಿಕ ಕ್ಷೇತ್ರಕ್ಕೆ ದಾಸಸಾಹಿತ್ಯದ ಕೊಡುಗೆ ಗಣನೀಯವಾದುದು.

ಸುಮಾರು ನೂರಮುವ್ವತ್ತೊಂಬತ್ತು ಜನ ದಾಸರು ಆಗಿಹೋಗಿದ್ದು, ಅವರ ಕೀರ್ತನೆಗಳ ಸಂಖ್ಯೆ ಸುಮಾರು ಹದಿನಾರು ಸಾವಿರಕ್ಕೂ ಅಧಿಕ. ಈವರೆಗೆ ಕೆಲವು ದಾಸರ ಕೀರ್ತನೆಗಳು ಬಿಡಿ ಬಿಡಿಯಾಗಿ ಪ್ರಕಟವಾಗಿವೆಯಾದರೂ, ಇನ್ನೂ ಅನೇಕ ದಾಸವರೇಣ್ಯರ ಕೀರ್ತನೆಗಳು ಹಸ್ತಪ್ರತಿ ರೂಪದಲ್ಲಿಯೇ ಉಳಿದುಕೊಂಡಿವೆ. ಅವುಗಳನ್ನು ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸಿ, ಸಮಗ್ರ ದಾಸಸಾಹಿತ್ಯವು ಕನ್ನಡಿಗರಿಗೆ ಒಂದೆಡೆ ಲಭ್ಯವಾಗುವಂತೆ ಮಾಡುವ ಉದ್ದೇಶದಿಂದ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಸಮಗ್ರ ದಾಸಸಾಹಿತ್ಯ ಪ್ರಕಟಣೆಯ ಬೃಹತ್ ಯೋಜನೆಯನ್ನು ಹಾಕಿಕೊಂಡಿದೆ. ಈ ಉದ್ದೇಶಕ್ಕಾಗಿ ಕಾರ್ಯನಿರ್ವಾಹಕ ಸಂಪಾದಕರಾದ ಡಾ. ಶ್ರೀನಿವಾಸ ಹಾವನೂರ, ಡಾ. ಟಿ. ಎನ್. ನಾಗರತ್ನ, ಪ್ರೊ. ವಸಂತ ಕುಷ್ಟಗಿ, ಸದಸ್ಯರಾದ ಡಾ. ಎಂ. ಎಂ. ಕಲಬುರ್ಗಿ, ಡಾ. ಬಸವರಾಜ ಸಬರದ, ಪ್ರೊ. ಸುಧಾಕರ, ಡಾ. ಕೃಷ್ಣ ಕೊಲ್ಹಾರಕುಲಕರ್ಣಿ, ಡಾ. ಮಂದಾಕಿನಿ (ಈಗ ದಿವಂಗತರು), ಹಾಗೂ ಪ್ರೊ. ಎಂ. ರಾಜಗೋಪಾಲಾಚಾರ್ಯ (ಈಗ ದಿವಂಗತರು) ಅವರನ್ನೊಳಗೊಂಡಂತೆ ಸಂಪಾದಕ ಸಮಿತಿಯನ್ನು ರಚಿಸಲಾಯಿತು. ಇಲಾಖಾ ನಿರ್ದೇಶಕರು ಸಮಿತಿಯ ಸದಸ್ಯ–ಕಾರ್ಯದರ್ಶಿ ಗಳಾಗಿರುತ್ತಾರೆ. ಇದರಲ್ಲಿ ನಾಡಿನ ಅನೇಕ ವಿದ್ವಾಂಸರ ನೆರವನ್ನು ಬಳಸಿಕೊಳ್ಳಲಾಗುತ್ತಿದೆ.

ಈ ಯೋಜನೆಯನ್ವಯ 'ಸಮಗ್ರ'ವಾಗಿ ದಾಸರ ಕೀರ್ತನೆಗಳನ್ನು ಸಂಗ್ರಹಿಸಿ ಪ್ರಕಟಿಸುವುದಿದ್ದರೂ, ಕೆಲವು ಹರಿದಾಸರ ರಚನೆಗಳು ಬಿಟ್ಟು ಹೋಗಿರುವ ಸಾಧ್ಯತೆ ಇರುತ್ತದೆ. ಅಂಥ ಹರಿದಾಸರ ಕೀರ್ತನೆಗಳು ದೊರೆತಲ್ಲಿ ಮುಂದೆ ಪರಿಷ್ಕರಣ ಸಂದರ್ಭದಲ್ಲಿ ಪ್ರಕಟಿಸಲು ಕ್ರಮಕೈಗೊಳ್ಳಲಾಗುವುದು.

ಸಮಗ್ರ ದಾಸಸಾಹಿತ್ಯ ಯೋಜನೆಯಡಿ ಪ್ರಕಟವಾಗುತ್ತಿರುವ ಆಯಾ ಸಂಪುಟಗಳ ಸಂಪಾದಕರಿಗೆ ಹಾಗೂ ಈ ಕಾರ್ಯದಲ್ಲಿ ನಮ್ಮೊಡನೆ ಸಹಕರಿಸಿದ ಸಂಪಾದಕ ಮಂಡಳಿಯವರಿಗೆ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರಾದ ಶ್ರೀ ಕೆ.ಸಿ. ರಾಮಮೂರ್ತಿ, ಶ್ರೀ ಸಿ. ಸೋಮಶೇಖರ ಅವರಿಗೆ, ಜಂಟಿ ನಿರ್ದೇಶಕರಾದ ಶ್ರೀ ಕಾ.ತ. ಚಿಕ್ಕಣ್ಣ ಅವರಿಗೆ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಹಾಗೂ ಡಾ. ಮಂಜುಳ ಅವರಿಗೆ ಕೃತಜ್ಞತೆಗಳು.

ಹರಿದಾಸರ ಕೀರ್ತನೆಗಳನ್ನು ಆಯ್ದು ಸಂಗೀತಕ್ಕೆ ಆಯ್ಕೆ ಮಾಡಲು ನೆರವಾದ ಶ್ರೀ ವಿನಾಯಕ ತೊರವಿ, ಶ್ರೀ ಮೈಸೂರು ಸುಬ್ರಮಣ್ಯಂ, ಶ್ರೀ ಆರ್. ಕೆ. ಪದ್ಮನಾಭ, ಶ್ರೀ ಬಾನಂದೂರು ಕೆಂಪಯ್ಯ ಹಾಗು ಶ್ರೀಮತಿ ಮಾಲತಿ ಶರ್ಮರವರಿಗೆ, ಸಂಗೀತ ನಿರ್ದೇಶಕರಿಗೆ ಹಾಗೂ ಗಾಯಕರಿಗೆ ಕೃತಜ್ಞತೆಗಳು.

ಸಂಪುಟಗಳನ್ನು ಮುದ್ರಣಕ್ಕೆ ಅನುಗೊಳಿಸುವ ಕಾರ್ಯ ನಿರ್ವಹಿಸಿದ ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಅನಂತ ಪದ್ಮನಾಭರಾವ್ ಮತ್ತು ಪ್ರೊ. ನಾ. ಗೀತಾಚಾರ್ಯ ಇವರಿಗೂ ಸಹ ಕೃತಜ್ಞತೆಗಳು.

ಈ ಸಮಗ್ರ ದಾಸಸಾಹಿತ್ಯ ಸಂಪುಟಗಳ ಮುದ್ರಣ ಕಾರ್ಯವನ್ನು ನಿರ್ವಹಿಸಿದ ಎಂ.ಎಸ್.ಐ.ಎಲ್. ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಅಶೋಕ್ ವಿ. ಡೇವಿಡ್ ಹಾಗೂ ವಿಶೇಷಾಧಿಕಾರಿಗಳಾದ ಶ್ರೀ ಎಂ. ರವಿಶಂಕರ್ ಅವರಿಗೆ ನನ್ನ ಕೃತಜ್ಞತೆಗಳು. ಸಮಗ್ರ ದಾಸಸಾಹಿತ್ಯವನ್ನು ಪ್ರಕಟಿಸುವುದು ಹರಿದಾಸರಿಗೂ ಕನ್ನಡ ಜನತೆಗೂ ನಾವು ಸಲ್ಲಿಸಬೇಕಾದ ಸೇವೆಯೆಂದು ಭಾವಿಸಿದ್ದೇನೆ. ಪಂಡಿತ ಪಾಮರರನ್ನು ಏಕ ಕಾಲಕ್ಕೆ ಆಕರ್ಷಿಸಬಲ್ಲ ವಿಶಿಷ್ಟ ಸಾಮರ್ಥ್ಯ ದಾಸಸಾಹಿತ್ಯದ್ದು ಎಂದರೆ ತಪ್ಪಾಗಲಾರದು. ಕನ್ನಡ ಜನತೆಯು ಈ ಪ್ರಕಟಣೆಯ ಸದುಪಯೋಗ ಪಡೆದುಕೊಂಡೀತು ಎಂದು ಆಶಿಸಿದ್ದೇನೆ.

**ವೈ. ಕೆ. ಮುದ್ದುಕೃಷ್ಣ**

ನಿರ್ದೇಶಕರು

# ಸಂಪಾದಕ ಮಂಡಳಿಯ ನುಡಿ

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಓದಲಾರದ ಕನ್ನಡ ಜನಕ್ಕೆ ಪಂಪನಂತಹ ಪ್ರೌಢಕವಿಗಳು ಗೊತ್ತಿರಲಿ ಬಿಡಲಿ, ದಾಸರ ಹಾಡುಗಳು ಗೊತ್ತಿಲ್ಲದವರು ಮಾತ್ರ ಅಪರೂಪ. ಜನರ ಮೇಲೆ ನಿರಂತರ ಪ್ರಭಾವವನ್ನು ಬೀರುವ ಜನಸಮ್ಮುಖತೆ ದಾಸಸಾಹಿತ್ಯದ ಪ್ರಮುಖ ಲಕ್ಷಣಗಳಲ್ಲಿ ಒಂದು. ಇಂತಹ ದಾಸರ ಹಾಡುಗಳು ಜ್ಞಾನಸಂಪದ ಹಾಗೂ ಭಕ್ತಿಸಂಪದಗಳ ಸಾರ್ವತ್ರಿಕ ಹಬ್ಬುಗೆಗೆ ಸಾಧನವಾಗಿ ಪರಿಣಮಿಸಿವೆ.

ಕನ್ನಡ ನಾಡಿನಾದ್ಯಂತ ಎಲ್ಲ ಸ್ತರಗಳಲ್ಲಿ ವರ್ಗ–ವರ್ಣಗಳ ಭೇದವಿಲ್ಲದೆ, ಜನರ ಬಾಯಲ್ಲಿ ಉಳಿದುಕೊಂಡು ಬಂದ ಈ ಸಾಹಿತ್ಯವನ್ನು ಮೊಟ್ಟಮೊದಲಿಗೆ ಪ್ರಕಟಿಸಿದ ಶ್ರೇಯಸ್ಸು ಬಾಸೆಲ್ ಮಿಶನ್ನಿನ ರೆ. ಹರ್ಮನ್ ಮೊಗ್ಲಿಂಗ್‌ರಿಗೆ ಸೇರುತ್ತದೆ. ಇವರು ತಮ್ಮ ಇಲ್ಲಿಯ ವಾಸ್ತವ್ಯದಲ್ಲಿ (೧೮೩೬ರಿಂದ), ನಾಲ್ಕುನೂರಕ್ಕೂ ಮಿಕ್ಕಿದ ದಾಸರ ಪದಗಳನ್ನು ಸಂಗ್ರಹಿಸಿದ್ದರು. ಅವುಗಳಲ್ಲಿಯ ಒಂದು ನೂರು ಪದಗಳ ಸಂಗ್ರಹವನ್ನು 'ದಾಸರ ಪದಗಳು' ಎಂಬ ಹೆಸರಿನಿಂದ ಕ್ರಿ. ಶ. ೧೮೫೦ರಲ್ಲಿ, ಮತ್ತೆ ಕ್ರಿ.ಶ. ೧೮೫೨ರಲ್ಲಿ ೧೭೪ ಪದಗಳುಳ್ಳ ಸಂಕಲನವನ್ನು ಮಂಗಳೂರಿನಲ್ಲಿ ಕಲ್ಲಚ್ಚಿನಲ್ಲಿ ಛಾಪಿಸಿ ಪ್ರಕಟಿಸಿದರು. ಈ ವಿಷಯವನ್ನು ೧೮೭೩ರಲ್ಲಿ ಪ್ರಕಟವಾದ ಇಂಡಿಯನ್ ಎಂಟಿಕ್ವೆರಿಯ 'On the Karnataka Vaishnava Dasas' – ಎಂಬ ತಮ್ಮ ಲೇಖನದಲ್ಲಿ ರೆ. ಕಿಟೆಲ್ಲರು ಕಾಣಿಸಿದ್ದಾರೆ. ಇದರಿಂದ ಕಿಟೆಲ್‌ರಂಥವರು ಕೂಡ ದಾಸರ ಪದಗಳ ಮಹತ್ವವನ್ನು ಮತ್ತು ಜನಪ್ರಿಯತೆಯನ್ನು ಗುರುತಿಸಿದ್ದರು ಎಂಬುದು ಗೊತ್ತಾಗುತ್ತದೆ. ಪ್ರಾಸಂಗಿಕವಾಗಿ ಇದುವೆ ದಾಸಸಾಹಿತ್ಯದ ಕುರಿತಾದ ಮೊದಲ ಲೇಖನವೂ ಆಗಿದೆ.

ಆನಂತರದ ದಿನಗಳಲ್ಲಿ ಈ ಕ್ಷೇತ್ರದಲ್ಲಿ ಹಲವಾರು ಜನರು ಕೆಲಸವನ್ನು ಮುಂದುವರಿಸಿದರು. ರೆ. ಮೊಗ್ಲಿಂಗರ 'ದಾಸರ ಪದಗಳು' ಇದರ ದ್ವಿತೀಯ ಆವೃತ್ತಿಯನ್ನು ೧೮೭೧ರಲ್ಲಿ ಜಾನ್ ಗ್ಯಾರೆಟರ ಸೂಚನೆಯ ಮೇರೆಗೆ ಹೊಳಕಲ್ಲು ನರಸಿಂಹಯ್ಯನವರು ಬೆಂಗಳೂರಿನಿಂದ ಪ್ರಕಟಿಸಿದರು. ೧೮೭೩ರಲ್ಲಿ ಹಿಂದೂ ಭಾಷಾ ಸಂಜೀವಿನೀ ಮುದ್ರಣ ಶಾಲೆಯಲ್ಲಿ 'ಹರಿಭಜನೆ, ಕೀರ್ತನೆ' ಎಂಬ ಸಂಗ್ರಹ ಪ್ರಕಟವಾಯಿತು. ೧೮೯೦ನೆ ದಶಕದಲ್ಲಿ ಬೆಳಗಾವಿಯ ಆಬಾಜಿ ರಾಮಚಂದ್ರ ಸಾವಂತ ಇವರು ದೇವನಾಗರಿ ಲಿಪಿಯಲ್ಲಿ "ದಾಸರ ಪದಗಳ ಸಂಗ್ರಹವು" ಎಂಬುದಾಗಿ ಎರಡು ಭಾಗಗಳಲ್ಲಿ ಪ್ರಕಟಿಸಿದರು. ಆ ದಶಕದಲ್ಲಿಯೇ ಮಡಕಶಿರಾದ ಬಾಲಕೃಷ್ಣರಾಯರು ೧೮೯೪ರಲ್ಲಿ 'ಪುರಂದರ ದಾಸರು ಮೊದಲಾದ ಅಪರೋಕ್ಷ ಜ್ಞಾನಿಗಳ ಪದಗಳು' ಎಂಬ ಪುಸ್ತಕವನ್ನು ತೆಲುಗು ಲಿಪಿಯಲ್ಲಿ ಮುದ್ರಿಸಿದ್ದು ಗಮನಾರ್ಹವಾಗಿದೆ. ಮತ್ತೆ ೧೯೦೮ರಲ್ಲಿ ಅವರೇ ಇನ್ನೊಂದು ಸಂಕಲನವನ್ನೂ ಪ್ರಕಟಿಸಿದ್ದಾರೆ.

ಹೀಗೆ ೧೮೫೦ರಷ್ಟು ಹಿಂದೆಯೇ ಪ್ರಾರಂಭವಾದ ದಾಸರ ಪದಗಳ ಸಂಗ್ರಹ ಹಾಗೂ ಪ್ರಕಟಣೆಯ ಕಾರ್ಯಕ್ಕೆ ಒಂದು ವ್ಯವಸ್ಥಿತ ರೂಪವನ್ನು ಕೊಟ್ಟು, ನಾಡಿನಾದ್ಯಂತ ಹರಿದು ಹಂಚಿಹೋದ, ಜನರ ಬಾಯಲ್ಲಿ ಉಳಿದುಕೊಂಡು ಬಂದ ವಿವಿಧ ದಾಸರ ಪದಗಳನ್ನು ಸಂಗ್ರಹಿಸಿ ಪ್ರಕಟಿಸಲು ಪ್ರಾರಂಭಿಸಿದವರು ಉಡುಪಿಯ ಪಾವಂಜೆ ಗುರುರಾಯರು. ಅವರು ೧೯೧೪ರಲ್ಲಿ ಪ್ರಕಟಿಸಿದ ಮೊದಲ ಸಂಕಲನದ ಹೆಸರು 'ಉದಯರಾಗವು' ಎಂಬುದು. ಅನಂತರದ ದಿನಗಳಲ್ಲಿ ಪುರಂದರದಾಸರ ಕೀರ್ತನೆಗಳನ್ನು ಐದು ಸಂಪುಟಗಳಲ್ಲಿ ಮತ್ತು ಉಳಿದ ದಾಸರ ಕೃತಿಗಳನ್ನು ಬಿಡಿಬಿಡಿಯಾಗಿ ಪ್ರಕಟಿಸಿದರು. ಹೀಗೆ ನಾಡಿನ ದಕ್ಷಿಣದ ಅಂಚಿನ ಉಡುಪಿಯಲ್ಲಿ ಪ್ರಾರಂಭವಾದ ಕೆಲಸವನ್ನು ಉತ್ತರದ ಅಂಚಿನ ಲಿಂಗಸುಗೂರಿನಲ್ಲಿ ಗೊರಾಬಾಳ ಹಣಮಂತರಾಯರು 'ವರದೇಂದ್ರ ಸಾಹಿತ್ಯ ಮಾಲೆ'ಯನ್ನು ಪ್ರಾರಂಭಿಸಿ ತಮ್ಮ ಇಡೀ ಜೀವನವನ್ನೇ ಹರಿದಾಸ ಸಾಹಿತ್ಯದ ಸಂಗ್ರಹ ಮತ್ತು ಪ್ರಕಟಣೆಗೆ ಮೀಸಲಾಗಿರಿಸಿದರು. ಇತ್ತ ಮೈಸೂರು ಭಾಗದಲ್ಲಿ ಸುಪ್ರಸಿದ್ಧ ದಾಸರ ಹಾಡುಗಳನ್ನು ತಕ್ಕಮಟ್ಟಿಗೆ ಶಾಸ್ತ್ರಶುದ್ಧವಾಗಿ ಪ್ರಕಟಿಸಲು ಸುಬೋಧ ರಾಮರಾಯರು ಮುಂದಾದರು. ಇದೇ ಬಗೆಯ ಕೆಲಸವನ್ನು ಧಾರವಾಡ ಪ್ರದೇಶದಲ್ಲಿ ನಾರಾಯಣರಾವ ಕಲಮದಾನಿ, ಹುಚ್ಚರಾವ ಬೆಂಗೇರಿ

ಹಾಗೂ ಬೆಟಗೇರಿ ಕೃಷ್ಣಶರ್ಮರು ಮಾಡಿದರು. ಇದರೊಂದಿಗೆ, ಭಜನೆಯ ದೃಷ್ಟಿಯಿಂದ ಅನುಕೂಲವಾಗುವಂತೆ ನಾಡಿನ ವಿವಿಧ ಭಾಗಗಳಲ್ಲಿ ದಾಸಸಾಹಿತ್ಯಾಸಕ್ತರು ತಮತಮಗೆ ಬೇಕಾದ ಪದಗಳ ಸಂಗ್ರಹವನ್ನು ಪ್ರಕಟಿಸತೊಡಗಿದರು. ಇದರಿಂದಾಗಿ ನಾಡಿನ ಬಹುತೇಕ ಭಾಗಗಳಲ್ಲಿ ಬೇರೆ ಬೇರೆ ದಾಸರು ಇದ್ದುದು ಮತ್ತು ಅವರು ಹಾಡುಗಳನ್ನು ಬರೆದಿದ್ದಾರೆ ಎಂಬುದು ಗಮನಕ್ಕೆ ಬಂದಿತು. ಅದು 'ದಾಸ-ಪೀಳಿಗೆ' ಯನ್ನು ಗುರುತಿಸಲು ಸಹಾಯವಾಯಿತು.

ಶ್ರೀಪಾದರಾಜರಿಂದ ಪ್ರಾರಂಭವಾದ ಕೀರ್ತನೆಗಳ ರಚನೆಯ ಸಂಪ್ರದಾಯವು ಈ ಐದುನೂರು ವರ್ಷಗಳಲ್ಲಿ ಸುಮಾರು ಮುನ್ನೂರು ಜನ ದಾಸರು ಹುಟ್ಟಿ ಮೂವತ್ತು ಸಾವಿರಕ್ಕೂ ಮಿಕ್ಕ ಕೀರ್ತನೆಗಳನ್ನು ರಚಿಸಿದ್ದಾರೆಂದರೆ ಅವುಗಳ ಮಹತ್ವ ಗೊತ್ತಾಗದೇ ಇರದು.

ಇಡಿಯಾಗಿ-ಬಿಡಿಬಿಡಿಯಾಗಿ ವ್ಯಕ್ತಿಗಳಿಂದ, ಸಂಘ ಸಂಸ್ಥೆಗಳಿಂದ ದಾಸರ ಪದಗಳು ಪ್ರಕಟವಾಗುತ್ತ ಬರುತ್ತಿರುವಾಗಲೇ ಪುರಂದರ ಕನಕದಾಸರ ಚತುಃಶತಮಾನೋತ್ಸವ ಸಂದರ್ಭಗಳಲ್ಲಿ ಅವರ ಸಮಗ್ರ ಕೃತಿಗಳು ಸರ್ಕಾರದಿಂದ ಹಾಗೂ ವಿವಿದ ಸಂಘ ಸಂಸ್ಥೆಗಳಿಂದ ಪ್ರಕಟವಾದವು. ಆದರೆ ಸಮಗ್ರ ದಾಸಸಾಹಿತ್ಯದ ಪ್ರಕಟಣೆ ಈವರೆಗೆ ಆಗಲೇ ಇಲ್ಲವೆಂದು ಹೇಳಬಹುದು. ಇಂಥದೊಂದು ಪ್ರಯತ್ನವನ್ನು ಮೂರು ದಶಕಗಳ ಹಿಂದೆ ಮೈಸೂರು ವಿಶ್ವವಿದ್ಯಾನಿಲಯವು ಕೈಗೊಂಡಿತು. ವೈಜ್ಞಾನಿಕ ರೀತಿಯಲ್ಲಿ ಶಾಸ್ತ್ರ ಶುದ್ಧವಾಗಿ ದಾಸಸಾಹಿತ್ಯವನ್ನು ಪ್ರಕಟಿಸುವುದರ ಅಡಿಗಲ್ಲನ್ನು ಹಾಕಿದ ಶ್ರೇಯಸ್ಸು ಆ ಮಾಲೆಯ ಸಂಪಾದಕರಾಗಿದ್ದ ಡಾ. ಜಿ. ವರದರಾಜರಾವ್ ಅವರಿಗೆ ಸಲ್ಲಬೇಕು. ಇದುವರೆಗೆ ಕೆಲವು ಸಂಪುಟಗಳು ಮಾತ್ರ ಬಂದಿವೆ. ಆದರೆ ಹಸ್ತಪ್ರತಿಗಳಲ್ಲಿ ವಿಪುಲ ದಾಸಸಾಹಿತ್ಯವನ್ನು ಸಂಗ್ರಹಿಸಲಾಗಿದೆ. ಅದೇ ರೀತಿಯಲ್ಲಿ ಲಿಂಗಸುಗೂರಿನಲ್ಲಿ, ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಾಗೂ ತಿರುಪತಿಯ ದಾಸಸಾಹಿತ್ಯ ಪ್ರೊಜೆಕ್ಟದಲ್ಲಿ ಕೂಡ ವಿಪುಲ ಹಸ್ತಪ್ರತಿಗಳ ಸಂಗ್ರಹವಿದೆ. ಇವರೆಲ್ಲರ ಸಹಕಾರದಿಂದ ಈಗ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸಿ ಪ್ರಕಟಿಸುವ ಸಾಹಸದ ಕಾರ್ಯವನ್ನು ಮಾಡುತ್ತಿದೆ.

## ಸಂಪುಟ ಯೋಜನೆ

ದಾಸಸಾಹಿತ್ಯದ ಪರಿಷ್ಕರಣ ಕಾರ್ಯ ತುಂಬ ಜಟಿಲವಾದುದೆಂಬುದು ಸಂಪಾದಕ ಮಂಡಳಿಯ ಪ್ರಥಮ ಸಭೆಯಲ್ಲಿಯೇ ಅನುಭವಕ್ಕೆ ಬಂದಿತು. ಕಳೆದ ಐದು ಶತಮಾನಗಳಿಂದ ನಿರಂತರ ಹರಿದು ಬಂದ ದಾಸಸಾಹಿತ್ಯ ರಚನೆಯಲ್ಲಿಯ ದಾಸರ ಹಾಗೂ ದಾಸರ ಪದಗಳ ಸಂಖ್ಯಾಬಾಹುಳ್ಯವನ್ನು ಗಮನಿಸಿ ಅದಕ್ಕೊಂದು ಕಾಲಮಿತಿಯನ್ನು ಹಾಕಿಕೊಳ್ಳುವುದು ಅನಿವಾರ್ಯವಾಯಿತು. ಹಾಗೆ ದಾಸಸಾಹಿತ್ಯದ ಪ್ರಾರಂಭ ಕಾಲದಿಂದ ೧೯ನೆಯ ಶತಮಾನದ ಅಂತ್ಯದ ವರೆಗೆ ರಚಿತಗೊಂಡ ವೈದಿಕ ಪರಂಪರೆಯ ದಾಸರ ಪದಗಳನ್ನು ಸಂಗ್ರಹಿಸುವುದೆಂದು, ಅದರಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಪರಂಪರೆಯ ಲಭ್ಯವಿದ್ದ ಹಾಡುಗಳನ್ನು ಸೇರಿಸಿಕೊಂಡು ೩೫ ಸಂಪುಟಗಳಲ್ಲಿ ಪ್ರಕಟಿಸುವುದೆಂದು ನಿರ್ಧರಿಸಲಾಯಿತು.

ಈ ೩೫ ಸಂಪುಟಗಳನ್ನು*, ಸಂಪಾದಕ ಮಂಡಳಿಯ ಸದಸ್ಯರಲ್ಲದೆ ನಾಡಿನ ಹಲವಾರು ವಿದ್ವಾಂಸರನ್ನು ಸಂಪಾದಿಸಿ ಕೊಡಲು ಕೇಳಿಕೊಳ್ಳಲಾಯಿತು.

ಇಂಥದೊಂದು ಬೃಹತ್ ಕಾರ್ಯವನ್ನು ಕೈಗೊಂಡಾಗ ಕೆಲವು ಮಾರ್ಗದರ್ಶಿ ಸೂತ್ರಗಳನ್ನು ಅನುಸರಿಸುವುದು ಅನಿವಾರ್ಯವಾಗುತ್ತದೆ. ಅನ್ಯ ಮತ–ಪಂಥಗಳ ಟೀಕೆಗಳು ಬಂದಿದ್ದರೆ ಅಂಥ ಹಾಡುಗಳನ್ನು ಕೈಬಿಡಬೇಕು. ಒಂದೇ ಹಾಡು ಇಬ್ಬರು ದಾಸರ ಅಂಕಿತದಲ್ಲಿ ಪ್ರಚಲಿತದಲ್ಲಿದ್ದರೆ, ಎರಡೂ ಕಡೆಗೆ ಅವುಗಳನ್ನು ಕೊಟ್ಟು ಕೆಳಗೆ ' ಈ ಕೀರ್ತನೆ . . . . ದಾಸರ ಅಂಕಿತದಲ್ಲೂ ಇದೆ' ಎಂದೂ ಸೂಚಿಸಬೇಕು. ದ್ವೈತ ಸಂಪ್ರದಾಯದ ಕೀರ್ತನೆಗಳನ್ನು ಪ್ರಕಟಿಸುವಾಗ ದೇವ–ಗುರು ತಾರತಮ್ಯವನ್ನು ಪಾಲಿಸಬೇಕು ; ಉಳಿದೆಡೆ ಗಣೇಶ ಪ್ರಾರ್ಥನೆ, ಭಗವಂತನ ನಾಮಸಂಕೀರ್ತನೆ, ಆತ್ಮನಿವೇದನೆ, ಲೋಕನೀತಿ, ತಾತ್ವಿಕ, ಕಥನಾತ್ಮಕ, ಸಂಪ್ರದಾಯ ಹಾಗೂ ವಿಶೇಷ ಹಾಡುಗಳೆಂದು ಮುಂತಾಗಿ ವಿಂಗಡಿಸಿ ಕೊಡಬೇಕು – ಎಂಬುದಾಗಿ ನಿರ್ಧರಿಸಿತು.

---

*ಇವುಗಳಲ್ಲಿ ಕೆಲವುಗಳಿಗೆ ಎರಡು ಮೂರು ಭಾಗಗಳಿವೆ.

ಪ್ರತಿಯೊಂದು ಸಂಪುಟದ ಪ್ರಾರಂಭದಲ್ಲಿ ಹಾಡುಗಳ ಪರಿವಿಡಿಯನ್ನು ಕೊಟ್ಟು ಪ್ರಸ್ತಾವನೆಯಲ್ಲಿ ಆಯಾ ದಾಸರ ಸಂಕ್ಷಿಪ್ತ ಜೀವನ ಚರಿತ್ರೆ, ಕೃತಿಗಳ ಸಮೀಕ್ಷೆ, ಶೈಲಿ ಇತ್ಯಾದಿಗಳನ್ನು ವಿವರಿಸಿ, ಗ್ರಂಥಸಂಪಾದನೆಯ ಆಕರಗಳನ್ನೂ ಕೊಡಲು ಪ್ರಯತ್ನಿಸಲಾಗಿದೆ. ಕೊನೆಯಲ್ಲಿ ಬರುವ ಅನುಬಂಧಗಳಲ್ಲಿ ಕಠಿಣ ಶಬ್ದಗಳ ಅರ್ಥ, ಟಿಪ್ಪಣಿ ಮತ್ತು ವಿಶಿಷ್ಟ ಅಂಕಿತನಾಮಗಳ ಸೂಚಿ ಹಾಗೂ ಹಾಡುಗಳ ಅಕಾರಾದಿಯನ್ನು ಕೊಡಲಾಗಿದೆ.

ಈ ಸಂಪುಟಗಳು ಜನಪ್ರಿಯ ಆವೃತ್ತಿಗಳಾಗಿರುವುದರಿಂದ ಲಭ್ಯವಿರುವ ಪಾಠಾಂತರಗಳಲ್ಲಿ ಯೋಗ್ಯವಾದುದನ್ನು ಸ್ವೀಕರಿಸಿದೆ. ಅನ್ಯ ಪಾಠಗಳನ್ನು ಅಡಿಯಲ್ಲಿ ನಮೂದಿಸಿಲ್ಲ. ಆದರೂ ಇವು ವಿದ್ವಜ್ಜನಪ್ರಿಯ ಆವೃತ್ತಿಗಳೂ ಆಗಬೇಕೆಂಬ ರೀತಿಯಲ್ಲಿ ಈ ಸಂಪುಟಗಳನ್ನು ರೂಪಿಸಲು ಪ್ರಯತ್ನಿಸಿದ್ದೇವೆ.

## ಕೃತಜ್ಞತೆಗಳು

ಕಳೆದ ನೂರೈವತ್ತು ವರ್ಷಗಳಿಂದ ಪಾಶ್ಚಾತ್ಯ ಮಿಶನರಿಗಳಿಂದ ಹಿಡಿದು ಈ ಮೊದಲು ಉಲ್ಲೇಖಿಸಿದ ನಾಡಿನ ಅನೇಕ ವಿದ್ವಜ್ಜನರು, ಸಂಘ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ದಾಸಸಾಹಿತ್ಯ ಕುರಿತು ನಿರಂತರ ದುಡಿದು ವಿಪುಲ ಸಾಮಗ್ರಿಯನ್ನು ಪ್ರಕಟಿಸಿದ್ದಾರೆ. ಈ ಎಲ್ಲ ವ್ಯಕ್ತಿಗಳಿಗೂ ಸಂಘ ಸಂಸ್ಥೆಗಳಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತವೆ.

ಈ ಯೋಜನೆ ಅಸ್ತಿತ್ವಕ್ಕೆ ಬಂದುದೂ ಒಂದು ವಿಶಿಷ್ಟ ಸಂದರ್ಭದಲ್ಲಿ ಎಂಬುದನ್ನು ಇಲ್ಲಿ ನಮೂದಿಸಬೇಕು. ಕರ್ನಾಟಕ ಸರ್ಕಾರವು ನಾಡಿನ ಖ್ಯಾತ ಸಂಶೋಧಕರಾದ ಡಾ. ಎಂ. ಎಂ. ಕಲಬುರ್ಗಿ ಅವರ ಪ್ರಧಾನ ಸಂಪಾದಕತ್ವದಲ್ಲಿ ಸಮಗ್ರ ವಚನಸಾಹಿತ್ಯವನ್ನು ಪ್ರಕಟಿಸಿತಷ್ಟೇ. ಅವರೇ 'ದಾಸಸಾಹಿತ್ಯ' ಯೋಜನೆಯನ್ನು ರೂಪಿಸಿ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥರ ಮೂಲಕ ಈ ಯೋಜನೆಯತ್ತ ಸರ್ಕಾರದ ಗಮನ ಸೆಳೆದರು. ಇದನ್ನು ಅರಿತ ಅಂದಿನ ಮುಖ್ಯಮಂತ್ರಿಗಳೂ ಅನಂತರ ಭಾರತದ ಪ್ರಧಾನಮಂತ್ರಿಗಳೂ ಆಗಿದ್ದ ಸನ್ಮಾನ್ಯ ಶ್ರೀ ಹೆಚ್. ಡಿ. ದೇವೇಗೌಡರು ಮುಧೋಳದಲ್ಲಿ (೧೯೯೫) ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸರ್ಕಾರವು ಸಮಗ್ರ

ದಾಸಸಾಹಿತ್ಯವನ್ನು ಪ್ರಕಟಿಸಲು ಒಪ್ಪಿಕೊಂಡಿದೆ ಎಂದು ಘೋಷಿಸಿದರು. ಅದರಂತೆ ಸರ್ಕಾರವು ಒಂಬತ್ತು ಜನರ ಸಂಪಾದಕ ಮಂಡಳಿಯನ್ನು ರಚಿಸಿತು. ಅದರಲ್ಲಿ ಡಾ. ಶ್ರೀನಿವಾಸ ಹಾವನೂರ, ಡಾ. ಟಿ.ಎನ್. ನಾಗರತ್ನ ಮತ್ತು ಪ್ರೊ. ವಸಂತ ಕುಷ್ಟಗಿ ಅವರನ್ನು ಸಮಿತಿಯ ಕಾರ್ಯನಿರ್ವಾಹಕ ಸಂಪಾದಕರೆಂದು ನಿಯಮಿಸಿತು. ಜೊತೆಗೆ ಈ ಮೊದಲು ಇಂಥ ಕಾರ್ಯವನ್ನು ಯಶಸ್ವಿಯಾಗಿ ಮಾಡಿದ ಅನುಭವಿ ಡಾ. ಎಂ. ಎಂ. ಕಲಬುರ್ಗಿ, ದಾಸಸಾಹಿತ್ಯದಲ್ಲಿ ನುರಿತ ವಿದ್ವಾಂಸರುಗಳಾದ ಪ್ರೊ. ಎಂ. ರಾಜಗೋಪಾಲಾಚಾರ್ಯ, ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ, ಡಾ. ಮಂದಾಕಿನಿ, ಪ್ರೊ. ಸುಧಾಕರ ಮತ್ತು ಡಾ. ಬಸವರಾಜ ಸಬರದ ಅವರನ್ನು ಸಂಪಾದಕ ಮಂಡಳಿಯ ಸದಸ್ಯರನ್ನಾಗಿ ನಿಯಮಿಸಿತು. ಅವರುಗಳ ನಿರಂತರ ಪರಿಶ್ರಮದ ಫಲವೇ ಈ ಸಮಗ್ರ ದಾಸಸಾಹಿತ್ಯದ ಪ್ರಕಟಣಾ ಕಾರ್ಯ. ಈ ಪ್ರಕಟಣಾ ಕಾರ್ಯದಲ್ಲಿ ಅವರುಗಳೊಂದಿಗೆ ೩೫ ಸಂಪುಟಗಳನ್ನು ಸಿದ್ಧಪಡಿಸುವಲ್ಲಿ ಸರ್ವಶ್ರೀ ಅರಳುಮಲ್ಲಿಗೆ ಪಾರ್ಥಸಾರಥಿ, ಡಾ. ಡಿ. ಆರ್. ಪಾಂಡುರಂಗ, ಡಾ. ಅನಂತಪದ್ಮನಾಭರಾವ್, ಪ್ರೊ. ಬಿ. ಆರ್. ಕುಲಕರ್ಣಿ, ಡಾ. ಕೆ. ಜಿ. ವೆಂಕಟೇಶ್, ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಕೆ. ಗೋಕುಲನಾಥ, ಡಾ. ಕೆ. ಎಂ. ಕೃಷ್ಣರಾವ್, ಶ್ರೀ ಹಣಮಂತ ತಾಸಗಾಂವಕರ್, ಪ್ರೊ. ನಾ. ಗೀತಾಚಾರ್ಯ, ಡಾ. ಸ್ವಾಮಿರಾವ್ ಕುಲಕರ್ಣಿ, ಶ್ರೀ ಹನುಮನಗೌಡ, ಶ್ರೀ ಎ. ಎನ್. ಅನಂತಸ್ವಾಮಿರಾವ್, ಶ್ರೀ ನಾರಾಯಣಾಚಾರ್ಯ ಧೂಳಖೇಡ, ಶ್ರೀ ಶಾಶ್ವತಸ್ವಾಮಿ ಮುಕ್ಕುಂದಿಮಠ, ಶ್ರೀ ಕೆ. ಎಸ್. ವೆಂಕಟೇಶ್ ಮತ್ತು ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ ಅವರುಗಳು ಹಾಗೂ ಶ್ರೀಮತಿಯರಾದ ನಳಿನಿ ವೆಂಕಟೇಶ್, ಮೀನಾರಾವ್, ಲೀಲಾವತಿ ಎಸ್. ರಾವ್, ಡಾ. ಜಯಲಕ್ಷ್ಮಿ ಮಂಗಳಮೂರ್ತಿ, ಡಾ. ಅಕ್ಕಮಹಾದೇವಿ, ಶೀಲಾ ದಾಸ್, ಡಾ. ರಮಾ ಕಲ್ಲೂರಕರ, ಡಾ. ಸೀತಾ ಗುಡೂರ ಕುಲಕರ್ಣಿ, ಹೆಚ್. ಎಸ್. ಪದ್ಮಾ ಮೂರ್ತಿ, ಮತ್ತು ರುಕ್ಮಿಣಿ ಗಿರಿಮಾಜಿ ಅವರುಗಳು ತುಂಬ ಶ್ರಮವಹಿಸಿ ಸಂಪುಟಗಳನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಅವರುಗಳಿಗೆ ಸಂಪಾದಕ ಮಂಡಳಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಈ ಮಧ್ಯೆ ಸಂಪಾದಕ ಸಮಿತಿಯ ಸದಸ್ಯರಲ್ಲೊಬ್ಬರಾದ ಪ್ರೊ. ಎಂ. ರಾಜಗೋಪಾಲಾಚಾರ್ಯರು ಮತ್ತು ಡಾ. ಮಂದಾಕಿನಿ ಹಾಗೂ ಸಂಪುಟ ಸಂಪಾದಕರಲ್ಲಿ ಒಬ್ಬರಾದ ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ, ಡಾ. ಕೆ.ಎಂ. ಕೃಷ್ಣರಾವ್, ಶ್ರೀಮತಿ ಪದ್ಮಾ ಮೂರ್ತಿ ಹಾಗೂ ಶ್ರೀ ಹನುಮನಗೌಡ ಮಾನ್ವಿ ಅವರು ನಮ್ಮನ್ನು ಅಗಲಿದ್ದು ದುಃಖದ ವಿಷಯವಾಗಿದೆ.

ಆಯಾ ಕಾಲದಲ್ಲಿ ಈ ಯೋಜನೆಗೆ ಸಹಕರಿಸಿದ ಹಾಗೂ ಈ ಯೋಜನೆಯ ಪರಿಕಲ್ಪನೆ ಯಶಸ್ವಿಯಾಗಿ ಕಾರ್ಯಾನುಷ್ಠಾನಕ್ಕೆ ಬರುವ ದಿಸೆಯಲ್ಲಿ ಸಹಕರಿಸಿದ ಈ ಹಿಂದಿನ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳಿಗೆ ಹಾಗೂ ವಿಶೇಷವಾಗಿ ಇಂದಿನ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಸ್. ಎಂ. ಕೃಷ್ಣ ಅವರಿಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರಿಗೆ, ಇಲಾಖೆಯ ಹಿಂದಿನ ಕಾರ್ಯದರ್ಶಿಗಳಾದ ಶ್ರೀ ಚಂದ್ರಹಾಸ ಗುಪ್ತ ಮತ್ತು ಈಗಿನ ಕಾರ್ಯದರ್ಶಿಗಳಾದ ಶ್ರೀ ಸಿ. ಎಸ್. ಕೇದಾರ್ ಅವರಿಗೆ ನಮ್ಮ ನಮನಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ಈ ಯೋಜನೆಗೆ ನೆರವಾದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರುಗಳು ಹಾಗೂ ಈಗಿನ ನಿರ್ದೇಶಕರಾದ ಶ್ರೀ ವೈ. ಕೆ. ಮುದ್ದುಕೃಷ್ಣ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಮತ್ತು ಡಾ. ಮಂಜುಳಾ ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ನೆರವಾದ ಎಂ. ಎಸ್. ಐ. ಎಲ್. ಸಂಸ್ಥೆಯ ಅಧಿಕಾರಿ ಹಾಗೂ ಸಿಬ್ಬಂದಿವರ್ಗಕ್ಕೆ, ವಿಶೇಷವಾಗಿ ಶ್ರೀ ಎಂ. ರವಿಶಂಕರ್, ವಿಶೇಷಾಧಿಕಾರಿ, ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಇದು ಒಂದು ದೊಡ್ಡ ಯೋಜನೆ. ಇದರ ಸಂಪಾದನೆಯ ಸಮಸ್ಯೆಗಳು ದೊಡ್ಡವು. ಪಾಠಾಂತರ, ರೂಪಾಂತರ, ಪ್ರಕ್ಷಿಪ್ತತೆ ಇತ್ಯಾದಿಗಳ ಗೊಂದಲಕ್ಕೆ ಗುರಿಯಾಗುತ್ತ ಬಂದ ವ್ಯಾಪಕ ಪ್ರಮಾಣದ ಈ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸುವುದು, ಪುನರುಕ್ತಿಗಳನ್ನು ಗುರುತಿಸುವುದು, ಅಂಕಿತ ಪಲ್ಲಟಗಳನ್ನು ಸರಿಪಡಿಸುವುದು, ಪ್ರಕ್ಷಿಪ್ತಗಳನ್ನು ದೂರೀಕರಿಸುವುದು, ಕೊನೆಯದಾಗಿ ಕೀರ್ತನೆಗಳನ್ನು ಶುದ್ಧೀಕರಿಸುವುದು ಎಂಥವರನ್ನೂ ಧೈರ್ಯಗೆಡಿಸುವ ಕೆಲಸ. ಹೀಗಿದ್ದೂ ದಾಸಸಾಹಿತ್ಯದ ಮೇಲಿನ ಗೌರವ ಪ್ರೀತಿಗಳು ನಮ್ಮಿಂದ ಈ ಕೆಲಸ ಮಾಡಿಸಿದೆ. ನಮ್ಮ ಶಕ್ತಿಗೆ ಮೀರಿ ಉಳಿದಿರಬಹುದಾದ ದೋಷಗಳನ್ನು ಮನ್ನಿಸಬೇಕೆಂದು ಕೋರುತ್ತೇವೆ. ಈ ಮೂವತ್ತೈದು ಸಂಪುಟಗಳನ್ನು ಸಹೃದಯ ಲೋಕಕ್ಕೆ ಅರ್ಪಿಸುತ್ತೇವೆ. ಸಮಗ್ರ ದಾಸಸಾಹಿತ್ಯವು ಸುಲಭ ಬೆಲೆಯಲ್ಲಿ ಕನ್ನಡಿಗರ ಮನೆ–ಮನಗಳಲ್ಲಿ ಬೆಳಗಲೆಂದು ಹಾರೈಸುತ್ತೇವೆ.

ಸಂಪಾದಕ ಮಂಡಳಿ

# ಪರಿವಿಡಿ

# ಪ್ರಸ್ತಾವನೆ

ಈ ಸಂಪುಟದಲ್ಲಿ ಅದ್ವೈತ ಕೃತಿಕಾರರಾದ ಕವಿ ಪರಮದೇವ, ಬೇಟೆರಾಯ ದೀಕ್ಷಿತ, ಶಂಕರಭಟ್ಟ ಅಗ್ನಿಹೋತ್ರಿ, ಕರ್ಕಿ ಕೇಶವದಾಸ ಮತ್ತು ಭಟಕಳದ ಅಪ್ಪಯ್ಯ– ಈ ಐವರ ಹಾಡುಗಳನ್ನು ಸಂಗ್ರಹಿಸಲಾಗಿದೆ. ಕವಿ ಪರಮದೇವರು ಶಿವಮೊಗ್ಗ ಜಿಲ್ಲೆಯವರು. ಬೇಟೆರಾಯ ದೀಕ್ಷಿತರು ತುಮಕೂರು ಜಿಲ್ಲೆಯವರು. "ದೇವ" ಅಂಕಿತದಿಂದ ಪರಿಚಿತರಾಗಿದ್ದ ಶಂಕರಭಟ್ಟ ಅಗ್ನಿಹೋತ್ರಿಯವರು ಧಾರವಾಡ ಜಿಲ್ಲೆಯವರು. ಕರ್ಕಿ ಕೇಶವದಾಸರು ಹೊನ್ನಾವರ ತಾಲೂಕಿನವರು. ಭಟಕಳದ ಅಪ್ಪಯ್ಯ ಅವರು ಉತ್ತರ ಕನ್ನಡದವರು. ಇವರುಗಳು ಶಿವನನ್ನೆ ಆರಾಧ್ಯದೈವವಾಗಿಟ್ಟುಕೊಂಡಿದ್ದರಾದರೂ ವಿಷ್ಣುವನ್ನು ಕಡೆಗಣಿಸಿದವರಲ್ಲ. ಮತ್ತೊಂದೆಂದರೆ ದಾಸ ದೀಕ್ಷೆಯನ್ನು ಹೊಂದುವುದರ ಮೂಲಕ ಇವರು ಹಾಡುಗಳನ್ನು ರಚಿಸಿದವರಲ್ಲ. ಅನೇಕ ಕಡೆಗಳಲ್ಲಿ ಇವರುಗಳ ಕೃತಿಗಳಲ್ಲಿ ಭಕ್ತಿಭಾವದ ಅಭಿವ್ಯಕ್ತಿಯ ಸಾಮ್ಯವನ್ನು ಗುರುತಿಸಬಹುದಾಗಿದೆ. ಇವರುಗಳ ಹಾಡುಗಳನ್ನು ಜೊತೆಗೂಡಿಸಿ ಒಂದೇ ಕಡೆ ಕೊಡುವುದರಿಂದ ಅದ್ವೈತ ಪರಂಪರೆಯ ದಾಸರ ಕೃತಿಗಳನ್ನು ಅಧ್ಯಯನ ಮಾಡುವವರಿಗೆ ಪ್ರಯೋಜನ– ವಾಗುವುದರಲ್ಲಿ ಅನುಮಾನವಿಲ್ಲ.

## ೧. ಕವಿ ಪರಮದೇವ

ಪರಮದೇವ ಕವಿ ಮೂಲತಃ ಈಗಿನ ಹೊಸನಗರ ತಾಲ್ಲೂಕಿನ ನಿಟ್ಟೂರಿನ ಸಮೀಪವಿರುವ ಸುಳಗೋಡಿನವನು. ಇವನು ಹವ್ಯಕ ಬ್ರಾಹ್ಮಣ ಪಂಗಡದವನು.

ನಿಜನಾಮ ಪರಮೇಶ್ವರ ಎಂಬುದಾಗಿ. ತಂದೆ ಶಂಕರ ನಾರಾಯಣಯ್ಯ. ತಾಯಿ ಮಹಾಲಕ್ಷ್ಮಿ. ದೈವ ಬಲದಿಂದ ಹುಟ್ಟಿದ ಒಬ್ಬನೇ ಮಗ. ತಂದೆ ವಿದ್ವಾಂಸರು, ಜ್ಯೋತಿಷಿಗಳು, ದೈವಭಕ್ತರು, ಯಕ್ಷಗಾನ ವೇಷಧಾರಿಯೂ, ತಾಳಮದ್ದಳೆಯ ಅರ್ಥದಾರಿಗಳೂ ಹಾಗೂ ಸೂರ್ಯೋಪಾಸಕರೂ ಆಗಿದ್ದರು. ರಾಮಾಯಣ ಮಹಾಭಾರತಗಳು ಅವರಿಗೆ ಕರತಲಾಮಲಕವಾಗಿದ್ದಿತು. ತಾಯಿ ದೈವಭಕ್ತೆ. ಇವರುಗಳ ಜೀವನಕ್ಕೆ ಕೃಷಿ ಮುಖ್ಯ ಆಧಾರ. ಪರಮದೇವನ ಮನೆದೇವರು ಕೊಲ್ಲೂರ ಮೂಕಾಂಬಿಕೆ. ಪರಮದೇವನು ಜನಿಸಿದ್ದು ಕ್ರಿ.ಶ. ೧೭೭೧ರಲ್ಲಿ. ತಂದೆ ತಾಯಿಯವರ ಮಾರ್ಗದರ್ಶನದಿಂದ ತಮ್ಮ ಹದಿನೇಳನೆಯ ವಯಸ್ಸಿನಲ್ಲಿಯೇ ಭಾಗವತ ವೇಷಧಾರಿಯಾಗಿ, ಅರ್ಥವಾದಿಯಾಗಿ ಹೆಸರುಗಳಿಸಿದ್ದ ಪರಮದೇವನು ತನ್ನ ಇಪ್ಪತ್ತನೇ ವಯಸ್ಸಿನಲ್ಲಿ ಭಾಗೀರಥಿ ಎಂಬ ಕನ್ಯೆಯನ್ನು ವಿವಾಹವಾದನು. ಶಂಕರಯ್ಯ, ಕೃಷ್ಣಯ್ಯ ಎಂಬಿಬ್ಬರು ಮಕ್ಕಳನ್ನು ಪಡೆದನು. ಗೃಹಸ್ಥಜೀವನದ ನಡು ನಡುವೆ ಪಾರಮಾರ್ಥದ ಕಡೆಗೆ ಅವನ ಗಮನ ಆಗಾಗ್ಗೆ ಹರಿಯುತ್ತಿತ್ತು. ಪತಿಯ ಲೌಕಿಕತ್ವವನ್ನು ಅರ್ಥೈಸಿಕೊಂಡಿದ್ದ ಧರ್ಮಪತ್ನಿ ಭಾಗೀರಥಿಯೇ ಸಂಸಾರದ ನಿರ್ವಹಣೆಯನ್ನು ನೋಡಿಕೊಂಡಳು. ಆರ್ಥಿಕ ತೊಂದರೆ ಪರಮದೇವನನ್ನು ಸುಳಗೋಡಿನಲ್ಲಿ ಇರಗೊಡಲಿಲ್ಲ. ತಮ್ಮ ಜಮೀನನ್ನು ಮಾರಿ ಇಕ್ಕೇರಿ ಅಘೋರೇಶ್ವರ ದೇವಾಲಯದ ಪಕ್ಕದಲ್ಲಿರುವ ಟಂಕಸಾಲೆ ಗಣಪತಿ ದೇವರ ಪರಿಚಾರಕರಾಗಿ, ಚಿಪ್ಪಳಿ ನಾರಾಯಣಯ್ಯನವರ ಮೂಲಕ ಚಿಪ್ಪಳಿ ವೇಣುಗೋಪಾಲ ಹಾಗೂ ಕೇದಿಗೆಸರಹು(ಕೇಡಲಸರ)ನ ಮಹಾಗಣಪತಿ ದೇವಾಲಯದ, ಅರ್ಚಕ ವೃತ್ತಿಯಿಂದ ತಮ್ಮ ಜೀವನ ಸಾಗಿಸಿದನು. ಚಿಪ್ಪಳಿಯ ಲಕ್ಷ್ಮೀನಾರಾಯಣಯ್ಯನು ಪರಮದೇವನಿಂದ ಅನೇಕ ಕಾವ್ಯ, ಶಾಸ್ತ್ರಗ್ರಂಥ, ಪುರಾಣಾದಿಗಳನ್ನು ಪ್ರತಿ ಮಾಡಿಸಿದರು. ಅಲ್ಲದೆ ಕಾವ್ಯವಾಚನ, ಪುರಾಣ – ಪ್ರವಚನಗಳನ್ನು ನಡೆಸಲು ಪ್ರೇರೇಪಿಸಿದರು. ಇದು ಪರಮದೇವನ ಜೀವನಕ್ಕೆ ಹೊಸ ತಿರುವನ್ನು ನೀಡಲು ಕಾರಣವಾಯಿತು. ತಮ್ಮ ೮೪ನೇ ವಯಸ್ಸಿನಲ್ಲಿ ಅಂದರೆ ಕ್ರಿ.ಶ. ೧೮೦೫ರಲ್ಲಿ ಇವರು ನಿಧನರಾದರು.

ಕವಿ ಪರಮದೇವನು ರಚಿಸಿದ ಕೃತಿಗಳೆಂದರೆ "ತುರಂಗಭಾರತ". ಇದರಲ್ಲಿ ೪೭೨೫ ವಾರ್ಧಕ ಷಟ್ಪದಿಗಳಿವೆ. ಈ ಕೃತಿ "ತುರಂಗಲಯ" ಗಣದಿಂದ ಕೂಡಿರುವುದರಿಂದಾಗಿ "ತುರಂಗ ಭಾರತ" ಎಂದು ಹೆಸರು ಬಂದಿರಬೇಕು. ಈ ಕಾವ್ಯದಲ್ಲಿ ವ್ಯಾಸ ಭಾರತದ ಕಥೆಯಲ್ಲದೆ, ಜನಪದ ಭಾರತದ ಮೌಖಿಕವಾದ ಕಥೆಗಳೂ ದಾಖಲಾಗಿವೆ. ಇದಲ್ಲದೆ "ನಾರಾಯಣಾಕ್ಷರ ಮಾಲಿಕಾಸ್ತೋತ್ರ" ಎಂಬ ೫೨ ಶ್ಲೋಕಗಳ ಹೊತ್ತಿಗೆ ಮತ್ತು "ತತ್ತ್ವಚೌಪದಿ" ಎಂಬ ೫೪ ಪದ್ಯಗಳ ಅದ್ವೈತ ತತ್ವವನ್ನು ನಿರೂಪಿಸುವ ಕಾವ್ಯವನ್ನು ಬರೆದಿದ್ದಾನೆ.

ಪರಮದೇವ ಕವಿಯಾದಂತೆಯೇ ಕೀರ್ತನಕಾರನೂ ಹೌದು. ಈತನ ಕೀರ್ತನೆಗಳ ಅಧ್ಯಯನ ಮಾಡಿದಾಗ ಪುರಂದರದಾಸ, ಕನಕದಾಸ, ವಿಮಲಾನಂದ ದಾಸ, ಜಗನ್ನಾಥದಾಸ ಮುಂತಾದ ಕೀರ್ತನಕಾರರ ಪ್ರಭಾವ ಸಾಕಷ್ಟಾಗಿದೆ. ತಾತ್ವಿಕವಾದ ವಿಚಾರ ಪ್ರಾಣಾಳಿಕೆಯನ್ನು ಕೀರ್ತನೆಗಳ ಮೂಲಕ ತಿಳಿಸುವಲ್ಲಿ ಚಿದಾನಂದಾವಧೂತರ ಪ್ರಭಾವವೂ ಆಗಿದೆ. ಯಕ್ಷಗಾನ ಪರಿಸರದಲ್ಲಿ ನೆಲಸಿ ಕಾವ್ಯವಾಚನ, ವ್ಯಾಖ್ಯಾನಾದಿಗಳನ್ನು ನಡೆಸಿಕೊಡುತ್ತಿದ್ದ ಕವಿಗೆ ಸಂಗೀತದ ಜ್ಞಾನವೂ ಇದ್ದುದರಿಂದ ಈತನ ಕೀರ್ತನೆಗಳು ತಾಳ, ಲಯ ಪ್ರಧಾನವಾಗಿವೆ. ಈ ಕವಿಯಿಂದ ರಚನೆಗೊಂಡ ಕೀರ್ತನೆಗಳು ಒಟ್ಟು ೧೪೭. ಇದರಲ್ಲಿ ವೈವಿಧ್ಯ ತುಂಬಿದೆ. ಈತನ ಹೆಚ್ಚಿನ ಕೀರ್ತನೆಗಳು ದೇವ – ದೇವತೆಗಳ ಸ್ತುತಿ ರೂಪವಾದವುಗಳು. ಕೀರ್ತನೆಗಳ ಮೂಲಕ ಗಣಪತಿ, ಶಾರದೆ, ಲಕ್ಷ್ಮೀನಾರಾಯಣ, ಗೋಪಾಲಕೃಷ್ಣ, ಮೂಕಾಂಬಿಕೆ, ಈಶ್ವರ ಮೊದಲಾದ ದೇವರುಗಳನ್ನು ಭಜಿಸುತ್ತಾನೆ. ಇದಲ್ಲದೆ ಐತಿಹಾಸಿಕ ಘಟನೆ, ತಾತ್ವಿಕ ನಿಲುವು, ಆತ್ಮನಿವೇದನೆ, ಅನನ್ಯ ಭಕ್ತಿ, ಸಂಸಾರದ ಅನಿತ್ಯತೆ, ನೀತಿ ಭೋಧನೆ, ಮುಂತಾದ ಸಾಮಾಜಿಕ ಗುಣಗಳನ್ನು ಅಭಿವ್ಯಕ್ತ ಪಡಿಸಿದ್ದಾನೆ.

ಈತನ ಕೀರ್ತನೆಗಳು ಭಕ್ತಿ ಪಾರಮ್ಯವನ್ನು ನಿರೂಪಿಸುವಂಥವು. ದೇವ – ದೇವತೆಗಳ ವರ್ಣನೆಯನ್ನು ಕಣ್ಣಿಗೆ ಕಟ್ಟುವಂತೆ, ದೃಶ್ಯ ನಿರ್ಮಾಣವಾಗುವಂತೆ ವರ್ಣಿಸಿದ್ದಾನೆ. ಗಣೇಶನನ್ನು ಸ್ತುತಿಸುತ್ತಾ........

ಏನು ಕಡಿಮೆ ನಿನಗೆ ಗಣಪತಿ ಜ್ಞಾನವ ಕೊಡು ಎನಗೆ ಪ

ಕಾಲಲಂದಿಗೆ ಮೆರವ ಕಿರುಗೆಜ್ಜೆ ಮೇಲೆ ಸರಪಳಿರವವ
ನೀಲ ಮೇಘದ ಕಾಂತಿ ಬಾಲಕೇಳಿ ವಿಲಾಸ
ನೀಲಕಂಠನ ಸುತ ಸ್ಥೂಲ ಶರೀರ;

ಎಂದು ವರ್ಣಿಸುತ್ತಾನೆ.

ಶಾರದೆಯ ಅಲಂಕಾರ ವರ್ಣನೆ ಮಾಡುತ್ತಾ

ಸುತ್ತಿದ ಮುಂಗೈ ಸರಿಗೆಯು ನಾನಾ ವಿಚಿತ್ರದಿ ಮೆರೆವ
ಚೂಡವು ಕೈಚಳಕಗೆ.
ಕೆತ್ತಿದ ಹರಳಿನ ವಡ್ಯಾಣ ನಡುವಿಗೆ ಅಳವಟ್ಟು ರೂಡಿಸಿ.................

ದೈವಭಕ್ತನಾದವಗೆ ಇಹ, ಪರಲೋಕಗಳಲ್ಲಿ ಆನಂದವೇ ತುಂಬಿರುತ್ತದೆ. ಇದನ್ನು ಹಲವಾರು ಕೀರ್ತನೆಗಳ ಮೂಲಕ ನಿರೂಪಿಸುತ್ತ ತನ್ನ ದೃಢ ನಿಲುವನ್ನು ಸಮರ್ಥಿಸುತ್ತಾ ಸಾಗುತ್ತಾನೆ. ಹೆಚ್ಚಿನ ಕೀರ್ತನೆಗಳಲ್ಲಿ ಈ ಭಾವ ವ್ಯಕ್ತವಾಗಿದೆ.

"ಸ್ವಾಮಿ ಪಾದವನಂಬಿದೆ ನಿನ್ನಿಂದ ನಿನ್ನ ನಾಮವು ಘನವಾಗಿದೆ. ಕಾಮಿತ ಫಲಗಳನೀವ ಮಹಾಗುಣನಾಮವ ನೆನೆವರ ಕಾವ ಕರುಣಿಯೆಂದು. ಭೀಮನ ಕೋಣೆ ಲಕ್ಷ್ಮೀನಾರಾಯಣನು ಕಾರುಣ್ಯದಿಂದ ಸನ್ಮತಿಯ ನೀಡಿ ಭಕ್ತರನ್ನು ಸಂರಕ್ಷಿಸುತ್ತಾನೆ."

ಬಾಲಗೋಪಾಲನ ಬಾಲಲೀಲೆಗಳು, ಯಶೋದೆಯ ಸಂತಸ ಭಾವಗಳನ್ನು ಕವಿ ಭಾವಪೂರ್ಣವಾಗಿ ಸೆರೆಹಿಡಿದಿದ್ದಾನೆ.

ಕೇಳೆ ನಂದನ ಕಾಂತೆ ಹೇಳೆ ಮಗಗೆ ಬುದ್ಧಿ
ಬಾಲೆಯರನು ಇರಗೊಡನೆ ದಮ್ಮಯ್ಯ ಪ

ಕುತ್ತಿಗೆಯೊಳಗಣ ಮುತ್ತಿನ ಸರಗಳ
ಕಿತ್ತು ಹರಿದು ಚೆಲ್ಲಿ ಪೋದ ದಮ್ಮಯ್ಯ
ಕಟ್ಟಿದ ಕರುಗಳ ಬಿಟ್ಟು ಒಲೆಯ ಮೇಲೆ
ಇಟ್ಟ ಪಾಲ್ಗಳನೆಲ್ಲ ಕುಡಿದ ಗೋಪಮ್ಮ

ಇಂಥ ಸಂದರ್ಭದಲ್ಲಿ ತಾಯಿಯ ಬುದ್ಧಿವಾದವೆಂದರೆ "ಬೇಡವೋ ರಂಗ ಹೆಂಗಳ ಬಳಿ, ಹೋಗಬೇಡವೋ" ಎಂಬುದಾಗಿ ಮಾತ್ರ.

ತಾನು ಬದುಕಿದ್ದ ಸಮಕಾಲೀನವಾದ ಇತಿಹಾಸದ ವಿವರಗಳನ್ನು ಕೀರ್ತನೆಗಳ ಮೂಲಕ ಕವಿ ಕೊಡುತ್ತಾನೆ. ಕ್ರಿ.ಶ. ೧೭೯೧ರಲ್ಲಿ ಪರಶುರಾಮ ಭಾವೂನ ನೇತೃತ್ವದಲ್ಲಿ ಮರಾಠಿಗರ ದಂಡು ಬಂದು ಇಕ್ಕೇರಿ ಪ್ರಾಂತದ ಹಲವು ಭಾಗಗಳಲ್ಲಿ ಕೊಳ್ಳೆ ಹೊಡೆಯುತ್ತದೆ. ದಾಳಿಕಾರರ ಆಕ್ರಮಣ, ಲೂಟಿ, ಕೊಲೆ, ಸುಲಿಗೆಗಳ ಚಿತ್ರಣವನ್ನು ಕೀರ್ತನೆಗಳ ಮೂಲಕ ತಿಳಿಸುತ್ತಾನೆ. ಅವರ ಲೂಟಿಯ ತೀವ್ರತೆಯನ್ನು ಹೇಳುತ್ತಾ.

ಹೋಯಿತು ಪರಶುರಾಮನ ದಂಡಲಿ ನಷ್ಟ
ವಾಯಿತು ಜನರೆಲ್ಲ ಹೊಡೆತ ಕಡೆತದಿ
ಕೊಟ್ಟದೊಳಗೆ ಇಟ್ಟವಸ್ತು ವಡವೆಯೆಲ್ಲ
ನಷ್ಟವಾಯಿತು ಹಾರೆ ಕೊಡಲಿ ಗುದ್ದಲಿ ಕುಳ
ಬಟ್ಟಲು ಹಂಡೆ ಕೊಪ್ಪರಿಗೆ ಇಕ್ಕುವ ಗುಂಡಿ
ಹುಟ್ಟು ಚಲುಕದ ಮಣಿ ಮರಿಗೆ ಸರ್ವಸ್ವವು.

ಈ ರೀತಿಯಲ್ಲಿ ಕೊಳ್ಳೆ ಹೊಡೆದಿದ್ದರಿಂದಾದ ಪರಿಣಾಮವೆಂದರೆ ದುರ್ಭಿಕ್ಷ, ಬಡತನ, ಬರಗಾಲ ಪ್ರಾಪ್ತವಾಗಿ ಜನರು ಕಂಗಾಲಾದರು. ಇಂಥ ಸಂದರ್ಭದಲ್ಲಿ "ಹರಿನಂದನಕೋಣೆ ಲಕ್ಷ್ಮೀಶನೊಬ್ಬನೆ ದಾರಿತೋರಬಲ್ಲ" ಎಂದು ದೇವರಿಗೆ ಮೊರೆ ಇಡುತ್ತಾರೆ.

ಕವಿ ಸಂಸಾರ ಬಂಧನ, ಅದರಿಂದ ಒದಗುವ ಮಾನಸಿಕ ಯಾತನ ತಾಳಲಾರದೆ "ಸಾಕು ಸಾಕು ರಂಗನಾಥ ಮನುಜ ಜನ್ಮವು ಲೋಕದೊಳಗೆ ಜನಿಸಲಾರೆ ಸಾಕು." ಎಂದು ಒಂದು ಕಡೆ ಮುಕ್ತಿಗೆ ಹಾತೊರೆದರೆ "ಮರಳಿ ಜನಿಸದಂದಲೆನ್ನ ಕರುಣಿಸೋ" ಎಂದು ಪದೇ ಪದೇ ಬೇಡುತ್ತಾನೆ. ಆತ್ಮನಿವೇದನೆಯ ಕೀರ್ತನೆಗಳಲ್ಲಿಯೂ ಸಂಸಾರದ ಕೋಟಲೆಯಿಂದ ಮುಕ್ತಿ ನೀಡೆಂದು ದೈನ್ಯಭಕ್ತಿಯಿಂದ ನಿವೇದಿಸಿಕೊಳ್ಳುವ ಸಂದರ್ಭಗಳೇ ಅಧಿಕ. ತಾತ್ವಿಕವಾದ ಕೀರ್ತನೆಗಳು ಆಧ್ಯಾತ್ಮ ಸಂಪತ್ತಿನಿಂದ ಕೂಡಿರುವಂಥವು. ಲೋಕದ ಸಿರಿ, ಸಂಪತ್ತುಗಳೆಲ್ಲ ಅಶಾಶ್ವತ. ದೇಹವೂ ನಶ್ವರ, ಬ್ರಹ್ಮವೊಂದೇ ಶಾಶ್ವತ. ಹಾಗಾಗಿ ಪರಬ್ರಹ್ಮನನ್ನು ಕಾಣುವುದೇ ಜೀವನದ ಗುರಿಯಾಗಬೇಕೆಂದು ಸಲಹೆ ನೀಡುತ್ತಾನೆ. ಅದಕ್ಕಾಗಿ ಭಕ್ತಿ, ಚಿತ್ತ, ಶುದ್ಧಿ, ಧ್ಯಾನಗಳಿಗೆ ತಮ್ಮನ್ನು ಒಡ್ಡಿಕೊಳ್ಳಬೇಕೆಂದು ನಿರೂಪಿಸುತ್ತಾನೆ. "ಯಾರು ಇದ್ದರೇನೊ ನಿನ್ನ ಪಥಕೆ ಬಾರರೋ" ಎನ್ನುತ್ತಾ "ಏನು ಇದ್ದರೇನು ನಿನ್ನ ಸಂಗಡ ಬಾರದೇನು ದಾನಧರ್ಮವ ಮಾಡಿದ್ದೊಂದು ಬೆನ್ನ ಬಿಡದದೇನು." ಅದಕ್ಕಾಗಿ ಸುಮ್ಮನೆ ದಿನವನು ಕಳೆಯದೆ ನೀ ಪರಬೊಮ್ಮನ ಧ್ಯಾನಿಸು ಕಂಡ್ಯ' ಎಂದು ಸೂಚಿಸುತ್ತಾನೆ. ಮತ್ತೆ ಹುಟ್ಟು–ಸಾವು ಎಂಬ ಭವಚಕ್ರದಲ್ಲಿ ಸಿಲುಕಿ ಒದ್ದಾಡುವುದರಿಂದ ಜೀವನ ಚರ್ವಿತ ಚರ್ವಣವಾಗುತ್ತದೆ. ಇದನ್ನೆ 'ಸಾರಿ ಸಾರಿ ಹೇಳುತ್ತೀನಿ, ಕಡ್ಡಿ ಮುರಿದು ನಾನು ಬಾರಿ ಬಾರಿಗೆ ಸತ್ತು ಹುಟ್ಟುತಲಿಹೆ ನೀನು. ಕಾನ ಕಪಿಗಳಂತೆ ನೆರೆದು ಮಡದಿ ಮಕ್ಕಳೆಂದು ಈಗ ಪ್ರಾಣವನ್ನು ತಿನಲು ಬಂದ ನರಿಗಳಿವದಿರು ದಾರಿ ಹೋಕರಿವರುಗಿನ್ನ ಋಣವು ತೀರಿ ಹೋದ ಬಳಿಕ ಯಾರಿಗಾರೂ ಇಲ್ಲ ನಿನಗೆ ನೀನದಲ್ಲದೆ' ಎಂಬ ವಸ್ತು ಸ್ಥಿತಿಯನ್ನು ತಿಳಿಸಿಕೊಡುತ್ತಾನೆ. ಕವಿಯ ಭಾಷೆ ಪ್ರೌಢ, ಆದರೆ ಪ್ರಸಾರಗುಣ ಹೆಚ್ಚು.

ಪರಮದೇವ ಜೀವನದ ಅನುಭವಗಳನ್ನು ಕಷ್ಟ ಕಾರ್ಪಣ್ಯಗಳನ್ನು, ಸುಖ – ದುಃಖಗಳನ್ನು ನೇರವಾಗಿ ಕಂಡು ಅನುಭವಿಸಿದವನು. ಆತನಲ್ಲಿ ಆಧ್ಯಾತ್ಮ ವಿಚಾರವೂ ಅನುಭವದಿಂದಲೇ ಹುಟ್ಟಿಕೊಂಡಿದೆ. ಭಕ್ತಿ, ದೈವೋಪಾಸನೆ, ಪರಿಸರದ ದೈವಗಳ ಬಗ್ಗೆ ಆರಾಧನಾಭಾವ. ಸಾಂಸಾರದ ಅನಿತ್ಯತೆ, ಲೋಕ ಸುಖದ ಭ್ರಮೆ. ಪರಮ ಸುಖದ ಮಾರ್ಗ ಮುಂತಾದ ವಿಚಾರಗಳನ್ನು ಪೌರಾಣಿಕ ದೃಷ್ಟಾಂತಗಳ ಮೂಲಕವೂ ವಿಶದಪಡಿಸುವುದು ಕವಿಯ ವೈಶಿಷ್ಟ್ಯವಾಗಿದೆ.

## ೨. ಬೇಟೆರಾಯ ದೀಕ್ಷಿತರು

ಬೇಟೆರಾಯ ದೀಕ್ಷಿತರು ತುರುವೇಕೆರೆಯವರು. ಕ್ರಿ.ಶ. ೧೮೬೬ ರಲ್ಲಿ ಇವರು ಜನಿಸಿದರು. ತಮ್ಮ ಪ್ರಾರಂಭದ ಅಭ್ಯಾಸವನ್ನು ಸಂಸ್ಕೃತದಲ್ಲಿ ಮಾಡಿದರು. ಕುಣಿಗಲ್ಲು ಅವರ ಅಧ್ಯಯನ ಕೇಂದ್ರವಾಗಿದ್ದಿತು. ತಮ್ಮ ವ್ಯಾಸಂಗದ ನಂತರ ತುರುವೇಕೆರೆಯ ಎ. ವಿ. ಸ್ಕೂಲಿನಲ್ಲಿ ಅಧ್ಯಾಪಕ ವೃತ್ತಿಯನ್ನು ಪ್ರಾರಂಭಿಸಿದರು. ಅದೇ ಸ್ಥಳದಲ್ಲಿದ್ದ ವಯಲಿನ್ ಮತ್ತು ಸಂಗೀತದಲ್ಲಿ ಅನುಭವಿಗಳಾಗಿದ್ದ ಶ್ರೀ ಶಂಕರಪ್ಪನವರು ಇವರ ನಿಕಟವರ್ತಿಗಳಾಗಿದ್ದರು. ಇದರಿಂದ ದೀಕ್ಷಿತರಿಗೆ ಸಂಗೀತದಲ್ಲಿಯೂ ಹೆಚ್ಚಿನ ಪರಿಣತಿ ಪಡೆಯಲು, ಆಸಕ್ತಿ ಬೆಳೆಯಲು ಕಾರಣವಾಯಿತು. ಪ್ರಾರಂಭದಲ್ಲಿ ದೀಕ್ಷಿತರು ಭಕ್ತರಿಗಾಗಿ ದೇವರ ನಾಮಗಳನ್ನು ರಚಿಸಿ ಹೇಳಿಕೊಡುತ್ತಿದ್ದರು. ಬೇಟೆರಾಯ ದೀಕ್ಷಿತರು ಹರಿಕಥಾ ವಿದ್ವಾಂಸರಾಗಿ ಕಾಣಿಸಿಕೊಳ್ಳುವುದರ ಮೂಲಕ, ಕೀರ್ತನಕಾರರಾಗಿ ಬೆಳೆದ ಪಾವಂಜೆ ಪರಂಪರೆಯ ಹರಿದಾಸರನ್ನಾಗಿ ಗುರುತಿಸಬಹುದಾದಂತಹ ಒಬ್ಬ ಗಮನಾರ್ಹ ಕೀರ್ತನಕಾರರಾಗಿ ಬೆಳೆದಿದ್ದಾರೆ. ದೀಕ್ಷಿತರಿಗೆ ತಮ್ಮ ಆರಾಧ್ಯದೈವ ತುರುವೆಕೆರೆಯ ಬೇಟೆರಾಯ ಸ್ವಾಮಿಯ ಹಿನ್ನೆಲೆಯಲ್ಲಿಯೇ 'ಬೇಟೆರಾಯ' ಎಂಬ ನಾಮ ಅಂಟಿಕೊಂಡಿದೆ. ದಾಖಲೆಗಳಲ್ಲಿ ಟಿ. ಬೇಟೆರಾಯ ದೀಕ್ಷಿತ, ಟಿ.ಬಿ.ದೀಕ್ಷಿತರೆಂದು ಇದೆ.

ಬೇಟೆರಾಯ ದೀಕ್ಷಿತರ ತಂದೆ – ತಾಯಿಯರ ಹೆಸರು, ಇತರ ವಿವರ ಅವರ ಪ್ರಕಟಿತ ಕೃತಿಗಳಲ್ಲಿ ದೊರೆಯುವುದಿಲ್ಲ. ಇವರ ಧರ್ಮಪತ್ನಿ ಬೆಳ್ಳೂರಿನವರೆಂದು ತಿಳಿಯುತ್ತದೆ. ಇವರ ಗುರುಗಳು ಕುಣಿಗಲ್ ಈಶ್ವರ ಶಾಸ್ತ್ರಿಗಳು. ಸಂಸ್ಕೃತ ಕಾವ್ಯ, ಚಂಪೂ ಕಾವ್ಯ, ನಾಟಕ, ಸಾಹಿತ್ಯ, ವ್ಯಾಕರಣ, ಅಲಂಕಾರ, ತರ್ಕ, ಮೀಮಾಂಸಗಳನ್ನು ಶಾಸ್ತ್ರಿಗಳಿಂದ ಅಭ್ಯಾಸಮಾಡಿದ್ದರು. ಬೆಳ್ಳಾವೆ ನರಹರಿ ಶಾಸ್ತ್ರಿಗಳಿಗೆ ಸಂಸ್ಕೃತ ಸಾಹಿತ್ಯ, ವ್ಯಾಕರಣ ಹೇಳಿಕೊಟ್ಟಿದ್ದರೆಂದು ತಿಳಿದುಬರುತ್ತದೆ. ದೀಕ್ಷಿತರು ೧೯೩೭ ನೆ ನವಂಬರ್ ೯ ರಂದು ನಿಧನರಾದರು.

ಬೇಟೆರಾಯ ದೀಕ್ಷಿತರು ರಾಮಾಯಣ ಅಧ್ಯಯನ ಮತ್ತು ಪ್ರವಚನವನ್ನು ವೃತ್ತಿಯಾಗಿ ಪ್ರವೃತ್ತಿಯಾಗಿ ಮಾಡಿಕೊಂಡಿದ್ದರು. ತಮ್ಮನ್ನು ಪ್ರವಚನದಲ್ಲಿ ತೊಡಗಿಸಿಕೊಂಡ ಮೇಲೆ ಬೇರಾವ ಕೃತಿಗಳನ್ನು ರಚಿಸಿರುವಂತೆ ಕಂಡುಬರುವುದಿಲ್ಲ. ' ರಾಮಾಯಣದ ದೀಕ್ಷಿತ 'ರೆಂದೇ ಇವರನ್ನು ಕರೆಯುವುದು ರೂಢಿಯಲ್ಲಿತ್ತು. ಇವರ ಈ ಸಾಧನೆಗಾಗಿ ಚಾಮರಾಜನಗರದ ಮಹಾಜನಗಳು ರಾಮ ಪಂಚಾಯತನದಿಂದ ಕೂಡಿದ ಚಿನ್ನದ ಕಡಗವನ್ನು ಕೊಟ್ಟರೆ, ಧಾರವಾಡ, ಬೆಳಗಾವಿಗಳಲ್ಲಿ 'ನಿರುಪಮ ವಾಣಿ', 'ರಾಮಕಥಾಭೂಷಣ' ಎಂಬ ಬಿರುದುಗಳು ಕೊಡಲ್ಪಟ್ಟಿತ್ತು. ರಾಮಾಯಣದ ಜೊತೆಯಲ್ಲಿಯೇ ಶ್ರೀಶಂಕರವಿಜಯ, ಅನಸೂಯ ಚರಿತ್ರೆ, ಹನುಮದ್ವಿಜಯವಿಲಾಸ ಮೊದಲಾದ ಕಥಾಕಾಲಕ್ಷೇಪವನ್ನು ನಡೆಸುತ್ತಿದ್ದರು, ಅವರ ಮಗ ಹೈದರಾಬಾದಿನ ಉಸ್ಮಾನಿಯ ವಿವಿಯ ನಿವೃತ್ತ ಕನ್ನಡ ಪ್ರಾಧ್ಯಾಪಕರೂ, ವಿದ್ವಾಂಸರೂ ಆದ ಪ್ರೊ. ಬಿ. ರಾಮಸ್ವಾಮಿಯವರು ಹೇಳುವಂತೆ "ದೀಕ್ಷಿತರು ನಡೆಸುತ್ತಿದ್ದ ಪ್ರವಚನಗಳು ಕೇವಲ ಮಡಿವಂತರ ಪುರಾಣ ಶ್ರವಣವಾಗಿರಲಿಲ್ಲ. ಅವರದೇ ಆದ ವಿಶಿಷ್ಟ ಶೈಲಿ ಅಲ್ಲಿತ್ತು. ರಾಮಾಯಣದ ಕಥಾಂಶಗಳನ್ನೊಳಗೊಂಡ ಹಾಡುಗಳನ್ನು ಅವರೇ ಸಮಯೋಚಿತವಾಗಿ ರಚಿಸುತ್ತಿದ್ದರು. ದೀಕ್ಷಿತರು ಪ್ರವಚನಗಳಿಗೆ ತಕ್ಕಂತೆ ಕೆಲವು ಕೀರ್ತನೆಗಳನ್ನು ಆಶುಕವಿತೆಯ ರೂಪದಲ್ಲಿ ರಚಿಸುತ್ತಿದ್ದರು. ಅಲ್ಲದೆ ಭಾವಾವೇಶವಾದಾಗ, ಹಬ್ಬ ಹರಿದಿನಗಳಲ್ಲಿ ಆರತಿ ಹಸೆ ಹಾಡುಗಳನ್ನು, ತಾವು ಬೇರೆ-ಬೇರೆ ಸ್ಥಳಗಳಿಗೆ ಸಂದರ್ಶನ ಮಾಡಿದಾಗ ಅಲ್ಲಿಯ ದೇವರನ್ನು ಕುರಿತು ಹಾಡುಗಳನ್ನು ರಚಿಸುತ್ತಿದ್ದರು. ಅವರ ಹಾಡುಗಳು ಅನಾಯಾಸವಾಗಿ ಮೂಡಿಬಂದ ರಚನೆಗಳಾಗಿರುವಂತಿದೆ. ಅನುಭವಜನ್ಯವಾಗಿ ಮೂಡಿಬಂದ ಕೀರ್ತನೆಗಳಂತಿವೆ." ಬೇಟೆರಾಯ ದೀಕ್ಷಿತರು ತಮ್ಮ ಕೃತಿಗಳಲ್ಲಿ 'ಧೇನುಪುರೀಶ' ಎಂಬ ಇಷ್ಟದೈವವನ್ನು ಅಂಕಿತವಾಗಿ ಬಳಸಿಕೊಂಡಿದ್ದಾರೆ (ಧೇನುಪುರೀಶ ಎಂದರೆ ತುರುವೇಕೆರೆ). ಅವರ ಕೃತಿಗಳಲ್ಲಿ ಆತ್ಮನಿವೇದನೆ ಅಷ್ಟಾಗಿ ಕಂಡು ಬರುವುದಿಲ್ಲ. ದೀಕ್ಷಿತರ ಪ್ರಧಾನಗುರಿ ಪ್ರವಚನ-ಹರಿಸಂಕೀರ್ತನೆ ಆಗಿರುವುದರಿಂದ ಅದರಲ್ಲಿ

ಸಂತಸವನ್ನು, ದರ್ಶನವನ್ನು ನೈಪುಣ್ಯತೆ ಸ್ವಾನುಭವಗಳನ್ನು ಕಂಡುಕೊಳ್ಳುತ್ತಿದ್ದು ದರಿಂದ ಹರಿದಾಸರಂತೆ ಕೀರ್ತನೆಗಳು ಇವರಿಗೆ ಮಾಧ್ಯಮಗಳಾಗದೆ ಕೇವಲ ಸಂದರ್ಭ – ಸನ್ನಿವೇಶ ಚಿತ್ರಣಗಳ ವರ್ಣನೆಯ ಪ್ರಸಾರವಾದವು ಎನ್ನಬಹುದು. ಈ ಹಿನ್ನೆಲೆಯಲ್ಲಿ ದೀಕ್ಷಿತರ ಕೀರ್ತನೆಗಳು ನೇರವಾಗಿ ದೈವಸ್ತುತಿಗಳೇ ಆಗಿವೆ. ದೇವ ದೇವಿಯರನ್ನು ವೈವಿಧ್ಯವಾಗಿ ವರ್ಣಿಸುವುದರ ಮೂಲಕ ಅವರು ಸಾರ್ಥಕತೆಯನ್ನು ಪಡೆಯುತ್ತಾರೆ. ಅದ್ವೈತ ತತ್ವದ ಪ್ರತಿಪಾದನೆಯ ಪ್ರತೀಕವಾಗಿ ಹರಿಹರ ಬೇಧವನ್ನು ಇಲ್ಲಿ ಗಮನಿಸಬಹುದಾಗಿದೆ. ಹಾಗಿದ್ದೂ ವಿಷ್ಣು ಪರವಾದ ಸ್ತುತಿಗಳೇ ಇಲ್ಲಿ ಹೆಚ್ಚಾಗಿವೆ. ಶ್ರೀರಾಮ, ಹರಿಯನ್ನು ವರ್ಣಿಸುವುದರಲ್ಲಿ ದೀಕ್ಷಿತರು ಹೆಚ್ಚು ಒಲವು ತೋರಿದ್ದಾರೆ, ಇವರು ರಚಿಸಿದ ೮೮ ಕೀರ್ತನೆಗಳು ಲಭ್ಯವಾಗಿದೆ. ಅದರಲ್ಲಿ ಗಂಗೆ, ಗೌರಿ, ಲಕ್ಷ್ಮೀ, ಸರಸ್ವತಿ ಮತ್ತು ತುಳಸಿ ಮೊದಲಾದ ದೇವ-ದೇವತಾ ಸ್ತುತಿಗಳು ಗಣನೀಯ ಪ್ರಮಾಣದಲ್ಲಿವೆ. ಸಂಪ್ರದಾಯ ಹಾಡುಗಳು ಇದರಲ್ಲಿವೆ. ಇವರು ಚೂರ್ಣಿಕೆಗಳನ್ನೂ ಬರೆದಿದ್ದಾರೆ. ಭಾಷಾ ಪ್ರೌಢಿಮೆಯನ್ನು ಇವರ ಕೀರ್ತನೆಗಳಲ್ಲಿ ಕಾಣಬಹುದಾಗಿದೆ.

ನಾದಗಾಂಭೀರ್ಯ, ಅರ್ಥಗಾಂಭೀರ್ಯವೂ ಸಂದರ್ಭೋಚಿತವಾದ ಶಬ್ದ ಪ್ರಯೋಗದಿಂದ ಹೇಳುವಾಗ ಭಾವ ಪರವಶವನ್ನಾಗಿಸುತ್ತದೆ.

ಈ ಪರಿಯ ಸೊಬಗನ್ನಾವ ದೇವರೊಳುಕಾಣೆ
ಈಶ ಪರಮೇಶ ಜಗದೀಶ ಶ್ರೀಶಿವನ ॥

ಮೊದಲಾದ ಕೀರ್ತನೆಗಳನ್ನು ಗಮನಿಸುವಾಗ ಇವರ ಮೇಲೆ ಪುರಂದರದಾಸರ ಛಾಪನ್ನು ಕಾಣಬಹುದು.

ಅವರ ಕಾಲ ಚಕ್ರವನೇರಿ ಭಾಸಿಪ। ಬಾಲಸೂರ್ಯನ ವಂದಿಪೆ ।
ರಾಮನನ್ನ ಭಜನೆಗೈಯುವೆ । ಕೌಮಾರಿ ಮಿತ್ರ ಶ್ರೀಕಾಂತ –
ನಿನ್ನ ನಂಬಿದೆ ನಾ ಕೇಶ ವಂದ್ಯ ॥

ಮುಂತಾದ ಕೀರ್ತನೆಗಳು ಮನೋಜ್ಞವಾಗಿವೆ. ಕೀರ್ತನೆಗಳಿಂದ ಸಂಗೀತ ಜ್ಞಾನವನ್ನು ಶಾಸ್ತ್ರೀಯವಾಗಿ ಅಳವಡಿಸಿಕೊಂಡಿರುವುದರಿಂದ ಅವು ರಾಗಬದ್ಧವಾಗಿವೆ. ಕೀರ್ತನೆಗಳಲ್ಲಿ ಪಲ್ಲವಿ ಮಾತ್ರವಿದೆ. ಪಾವಂಜೆ ಹಾಗೂ ಇವರು ಸಮಕಾಲೀನರಾಗಿದ್ದರು. ಹಾಗಿದ್ದು ಒಮ್ಮೆಯೂ ಅವರಿಬ್ಬರು ಭೇಟಿಯಾಗದಿದ್ದರೂ ಒಂದೇ ರೀತಿಯ ಅದ್ವೈತ, ಭಾಗವತ ಕೀರ್ತನಕಾರರಾಗಿ ಕಾಣಿಸಿಕೊಂಡಿದ್ದಾರೆ. ದಾಸರು ಉಭಯ ಭಾಷಾಪಂಡಿತರು. ಸಂಗೀತ ಶಾಸ್ತ್ರಜ್ಞರು. ಗಾಯನಪಟು ಎಂಬುದು ಅವರ ರಚನೆಗಳಿಂದ ಸ್ವಯಂ ವೇದ್ಯವಾಗುತ್ತದೆ. ಅವು ವಿವಿಧ ರಾಗ ತಾಳಗಳಿಗೆ ಅತ್ಯಂತ ಅಚ್ಚುಕಟ್ಟಾಗಿ ಮೂಡಿಬರುತ್ತದೆ. ದೀಕ್ಷಿತರು ಹರಿಕಥೆ ಮಾಡುವುದರಿಂದ ಅನೇಕ ವೇಳೆ ಅರ್ಥ ಭಾಗಗಳಿಗಿಂತ ಹೆಚ್ಚಾಗಿ ಶ್ರವಣ ಸುಭಗತೆಗೆ ಹೆಚ್ಚಿನ ಪ್ರಾಧಾನ್ಯ ಕೊಟ್ಟಿರುವಂತೆ ಕಾಣುತ್ತದೆ. "ಈ ಶ್ರವಣ ಸುಭಗತೆಯ ಪರಿಣಾಮ ರಮಣೀಯತೆಗೆ ಅವರು ಲಯ, ವೈವಿಧ್ಯವನ್ನು, ಪ್ರಾಸಾನುಪ್ರಾಸಗಳನ್ನು ಭಾಷೆಯ ಗುಣ ಹಾಗೂ ನಾದವನ್ನು ಪರಿಣಾಮಕಾರಿಯಾಗಿ ಉಪಯೋಗಿಸಿ ಕೊಂಡಿದ್ದಾರೆ." ಎಂಬ ಪಾವಂಜೆಯವರ ಕುರಿತು ಎಂ. ವಿ. ಸೀತಾರಾಮಯ್ಯನವರು ಹೇಳಿದ ಮಾತುಗಳು ದೀಕ್ಷಿತರಿಗೂ ಅನ್ವಯಿಸುತ್ತದೆ.

ದೀಕ್ಷಿತರು 'ಸಾರಂಗಧರ, ಕರ್ನಾಟಕ ಶಾಕುಂತಲ' ಮುಂತಾದ ಯಕ್ಷಗಾನ ನಾಟಕ ಕೃತಿಗಳನ್ನು ರಚಿಸಿ ಪ್ರಕಟಿಸಿದ್ದಾರೆ ಎಂಬ ಉಲ್ಲೇಖಗಳಿವೆ. ಆದರೆ ಅವುಗಳಲ್ಲಿ ಕೆಲವು ದೊರೆತಿರುವುದಿಲ್ಲ. ದೀಕ್ಷಿತರ ಕೀರ್ತನೆಗಳು ಹರಿದಾಸ ಸಾಹಿತ್ಯಕ್ಕೆ ಅಮೂಲ್ಯ ಕಾಣಿಕೆಯಾಗಿವೆ. 'ಹರಿದಾಸ ಲಕ್ಷಣ ಬದ್ಧವಾಗಿರುವ ಕೃತಿಗಳನ್ನು ನೀಡಿರುವುದರಿಂದ ಇವರನ್ನು ಹರಿದಾಸರು, ಕೀರ್ತನಕಾರರು ಎಂದರೆ ತಪ್ಪಾಗಲಾರದು' ಎಂದು ಹೇಳಿರುವ ಪ್ರೊ. ನಾ. ಗೀತಾಚಾರ್ಯರ ಅಭಿಪ್ರಾಯ ಸ್ವೀಕಾರಾರ್ಹವಾಗಿದೆ. 'ಬೇಟೆರಾಯ ದೀಕ್ಷಿತರ ದೇವರ ನಾಮಗಳು ಮತ್ತು ಸಂಪ್ರದಾಯದ ಹಾಡುಗಳು' ಎಂಬ ಸಂಕಲನವನ್ನು ಅವರ ಮಗ ಪ್ರೊ. ಬಿ. ರಾಮಸ್ವಾಮಿಯವರು ಸಂಪಾದಿಸಿದ್ದು ಬಿ.ಎಂ.ಶ್ರೀ. ಪ್ರತಿಷ್ಠಾನದಿಂದ ೧೯೯೬ರಲ್ಲಿ ಪ್ರಕಟವಾಗಿದೆ.

## ೩. ಶ್ರೀ ಶಂಕರಭಟ್ಟ ಅಗ್ನಿ ಹೋತ್ರಿ

ಶ್ರೀ ಶಂಕರಭಟ್ಟ ಅಗ್ನಿಹೋತ್ರಿಯವರು ಫೆಬ್ರವರಿ ೧೮, ೧೮೯೭ರಲ್ಲಿ ಧಾರವಾಡ ಜಿಲ್ಲೆಯ ಗದಗ ತಾಲೂಕಿನ ಹೊಂಬಳದಲ್ಲಿ ಜನ್ಮತಾಳಿದರು. ತಂದೆ ವೇ. ಮೂ. ಶ್ರೀನಿವಾಸಭಟ್ಟ ಜೋಷಿ. ಇವರು ವೃತ್ತಿಯಿಂದ ಶಿಕ್ಷಕರು. ತಾಯಿ ಶ್ರೀಮತಿ ಅಂಬವ್ವನವರು. ತಾಯಿಯ ಸಂಬಂಧಿಗಳಾದ ಶ್ರೀ ದತ್ತಂಭಟ್ಟ ತೀರ್ಥಭಟ್ಟ ಮತ್ತು ಶ್ರೀಮತಿ ಲಕ್ಷ್ಮಮ್ಮನವರು ಇವರನ್ನು ದತ್ತು ತೆಗೆದುಕೊಂಡಿದ್ದರು. ಇವರುಗಳು ಚಿಕ್ಕವಯಸ್ಸಿನಲ್ಲಿಯೇ ನಿಧನರಾದುದರಿಂದ ಶ್ರೀ ಶಂಕರಭಟ್ಟರು ತಮ್ಮ ಜನ್ಮದಾತರೊಂದಿಗೇ ಜೀವನ ಸಾಗಿಸಿದರು. ದತ್ತಕ ತಂದೆಯವರು ಅಗ್ನಿಹೋತ್ರಿ ಮನೆತನಕ್ಕೆ ಸೇರಿದವರಾದುದರಿಂದ ಶಂಕರಭಟ್ಟರ ಅಡ್ಡಹೆಸರು 'ಅಗ್ನಿಹೋತ್ರಿ' ಎಂದು ಬದಲಾಯಿತು. ಶಂಕರಭಟ್ಟರಿಗೆ ಇಬ್ಬರು ಅಕ್ಕಂದಿರು ಒಬ್ಬತಂಗಿ ಇಬ್ಬರು ತಮ್ಮಂದಿರು ಇದ್ದರು.

ಶಂಕರಭಟ್ಟರು ತಮ್ಮ ಬಾಲ್ಯದ ಅರ್ಧಭಾಗ ಹೊಂಬಳದಲ್ಲಿ ಅರ್ಧಭಾಗ ನವಲಗುಂದದಲ್ಲಿ ಕಳೆದರು. ಅವರು ೭ನೆಯ ತರಗತಿಯವರೆಗೆ ಓದಿದ್ದರು. ಮುಲ್ಕಿ ಪರೀಕ್ಷೆ ಮುಗಿಸಿದವರಿಗೆ ಕರೆದು ಕೆಲಸಕೊಡುವ ಕಾಲ ಅದಾಗಿತ್ತು. ಅದರಂತೆ ೧೯೧೪ರಲ್ಲಿ ಅಂದರೆ ತಮ್ಮ ಹದಿನೇಳನೇ ವಯಸ್ಸಿನಲ್ಲಿ ಧಾರವಾಡದ ಶಿಕ್ಷಕರ ತರಬೇತಿ ವಿದ್ಯಾಲಯಕ್ಕೆ ಸೇರಿದರು. ಎರಡು ವರ್ಷಗಳ ತರಬೇತಿ ನಂತರ ೧೯೧೭-ತಮ್ಮ ಇಪ್ಪತ್ತನೆಯ ವಯಸ್ಸಿನಲ್ಲಿ ಹೊಂಬಳದ ಕನ್ನಡ ಶಾಲೆಯಲ್ಲಿ ಶಿಕ್ಷಕ ವೃತ್ತಿಯನ್ನು ಪ್ರಾರಂಭಿಸಿದರು. ಅನಂತರದಲ್ಲಿ ನವಲಗುಂದ, ಕೀರೇಸೂರು, ಪಡೆಸೂರು, ಭೈರಿಕೊಪ್ಪ, ವೆಂಕಟಾಪುರ ಈ ಸ್ಥಳಗಳಲ್ಲಿ ಸೇವೆ ಸಲ್ಲಿಸಿದರು. ತಮಗೆ ನೌಕರಿ ಸಿಗುವ ಒಂದು ವರ್ಷ ಮೊದಲು ಅಂದರೆ ೧೯೧೮ ಡಿಸೆಂಬರ್‌ನಲ್ಲಿ ಪಾರ್ವತಿಬಾಯಿ ಎಂಬ ಕನ್ಯೆಯನ್ನು ಇವರು ವಿವಾಹವಾಗಿದ್ದರು. ಇವರಿಗೆ ಸುಂದರಬಾಯಿ ಮತ್ತು ಗಣಪತಿ ಎಂಬಿಬ್ಬರು ಮಕ್ಕಳು.

ತಮ್ಮ ೩೪ ವರ್ಷಗಳ ಸೇವೆಯ ನಂತರ ೧೯೫೧ರಲ್ಲಿ ವೆಂಕಟಾಪುರದಲ್ಲಿ ಶಿಕ್ಷಕ ವೃತ್ತಿಯಿಂದ ನಿವೃತ್ತಿಹೊಂದಿದರು. ೧೯೭೦ರಲ್ಲಿ ಶ್ರೀ ಶಂಕರಭಟ್ಟರಿಗೆ ಪತ್ನಿ ವಿಯೋಗವಾಯಿತು. ಜುಲೈ ೨೪, ೧೯೮೭ರಲ್ಲಿ ಶಂಕರಭಟ್ಟ ಅಗ್ನಿಹೋತ್ರಿಯವರು ನಿಧನರಾದರು.

ಶ್ರೀ ಶಂಕರಭಟ್ಟರು ಮೊದಲು ಕರ್ಮಠರು. ಅವರಿಗೆ ಭಾವ ಉಗ್ರಶಂಕರ ಭಟ್ಟರಲ್ಲಿ ವೈದಿಕ ಕರ್ಮಾಂಗದ ಅಧ್ಯಯನವಾಗಿತ್ತು. ವ್ರತ ಕರ್ಮಾದಿಗಳನ್ನು ಶ್ರೀ ಭಟ್ಟರು ಮಾಡಿಸುತ್ತಿದ್ದರು. ಶ್ರೀ ಶಂಕರಭಟ್ಟರವರಿಗೆ ಮೊದಲಿನಿಂದಲೂ ಪಾರಾಯಣ ಮಾಡುವುದರಲ್ಲಿ ವಿಶೇಷ ಒಲವು. ಇದಕ್ಕೆ ಅವರ ಸೋದರಮಾವ ಹುಬ್ಬಳ್ಳಿಯ ವೇ. ಮೂ. ತಮ್ಮಣ್ಣಶಾಸ್ತ್ರಿಗಳು ಪ್ರಭಾವ ಬೀರಿದ್ದರು. ತಮ್ಮ ಪಾರಾಯಣ, ಪ್ರವಚನಕ್ಕೆ ಸಾಮಾನ್ಯವಾಗಿ ಚೂಡಾಲಾಖ್ಯಾನ, ಕಠವಲ್ಲೀ ಶತಶ್ಲೋಕ, ಪಂಚದಶೀ ಜ್ಞಾನಶತಕ, ಹೇಮಚೂಡಾಖ್ಯಾನ, ಹಂಸಗೀತಾ, ಈಶೋಪನಿಷತ್ತು, ಉಪದೇಶಸಾಹಸ್ರಿ, ಭಗವದ್ಗೀತಾ, ಶ್ರೀಮದ್ಭಾಗವತ, ಅನುಭವಾಮೃತ, ವಿವೇಕಚೂಡಾಮಣಿ, ಕಪಿಲಗೀತಾ, ಆತ್ಮಬೋಧಾ, ಪ್ರಭುದೇವರ ವಚನಗಳು, ಕನ್ನಡ ಜ್ಞಾನೇಶ್ವರಿ, ಶುಕಮುನಿವೃತ್ತಾಂತ, ಜನಕೋಪಾಖ್ಯಾನ, ಅವಧೂತಗೀತಾ, ಋಷಭಗೀತಾ, ತ್ರಿಪುರಾರಹಸ್ಯ, ಜ್ಞಾನಖಂಡ ಈ ಮೊದಲಾದ ವಿಷಯಗಳನ್ನು ಆಯ್ದುಕೊಳ್ಳುತ್ತಿದ್ದರು. ಅರ್ಧಶತಮಾನದ ಸುದೀರ್ಘ ಅವಧಿಯಲ್ಲಿ ನಿರಂತರವಾಗಿ ಕನ್ನಡನಾಡಿನ ನಾನಾ ಭಾಗಗಳಲ್ಲಿ ನಾನಾ ವಿಷಯಗಳನ್ನು ಆಯ್ದುಕೊಂಡು ಸಾವಿರಾರು ಶಿಷ್ಯರಿಗೆ ಬೋಧಿಸಿದವರಲ್ಲಿ ಶ್ರೀ ಶಂಕರಭಟ್ಟರು ಅದ್ವಿತೀಯರು ಎಂದರೆ ಅತಿಶಯೋಕ್ತಿಯೇನಲ್ಲ. ಇವರದು ಒಟ್ಟು ೯೬ ಕೀರ್ತನೆಗಳು ದೊರಕಿವೆ.

ಶ್ರೀ ಶಂಕರಭಟ್ಟ ಅಗ್ನಿಹೋತ್ರಿಯವರು ಕೆಲವು ಆಧ್ಯಾತ್ಮಿಕ ಕೃತಿಗಳನ್ನು ವೇದಮಾತೆಗೆ ನೀಡಿದ್ದಾರೆ. ಅವುಗಳೆಂದರೆ ಬೋಧನಾರಾಯಣ, ಸಾಧನ ಪಂಚಕ, ಶ್ರೀಮದ್ಭಗವದ್ಗೀತಾಸಾರ, ವಿವೇಕವೈಭವ, ಪಂಚಪಾವನಗಂಗಾ,

ಬೋಧದೀಪಾವಲಿ ಮೊದಲಾದವು. ಬೋಧನಾರಾಯಣದಲ್ಲಿ ಆಧ್ಯಾತ್ಮಿಕ ವಿಷಯಗಳನ್ನು ಸರಳವಾಗಿ ನೇರವಾಗಿ ಪ್ರತಿಪಾದಿಸಿದ್ದಾರೆ. ಓದುಗರಿಗೆ ವಿಷಯ ಸುಲಭವಾಗಿ ಮನದಟ್ಟಾಗುವಂತೆ ಸರಳ ಶೈಲಿಯನ್ನು ಯಾವುದೇ ಬಗೆಯ ಆಡಂಬರವಿಲ್ಲದೆ ಬರೆದಿದ್ದಾರೆ. ಉದಾ:

ಹಸಿವೆ- ನೀರಡಿಕೆಗಳಿಂದ ಕಸಿವಿಸಿಗೊಳುತಿಹನು ಜೀವ
ಬಡತನ - ಬಳಲಿಕೆ - ಬೇನೆಗಳಿಂದ ಬಾದೆಪಡುತಿಹನು ಜೀವ
ಮಡದಿ - ಮನೆ - ಮಕ್ಕಳಿಗಾಗಿ ಮಿಡುಕುತಿಹನು ಜೀವ
ಭೂರಿ ಭೋಗ ಭಾಗ್ಯಗಳಿಗಾಗಿ ಬಾಯಿ ಬಿಡುತಿಹನು ಜೀವ
ಜೀವ ಭಾವವನಳಿದು ದೇವಭಾವವುಳ್ಳನಿಗೆ
ಬಾಧೆಯೆಲ್ಲಿಯವೋ ಬೋಧನಾರಾಯಣ ?

ಶ್ರೀ ಮಧ್ವಂಕರಾಚಾರ್ಯ ವಿರಚಿತ ಕೃತಿಯನ್ನು ಕನ್ನಡದಲ್ಲಿ ಅರ್ಥವಿವರಣೆಯೊಂದಿಗೆ ಬರೆದಿರುವ ಕೃತಿ ಸಾಧನಪಂಚಕ ೧೯೮೩ರಲ್ಲಿ ಪ್ರಕಟವಾಯಿತು. ಸಾಧಕನು ಮಾಡಬೇಕಾದ ಸಾಧನಗಳ ಕುರಿತು ವಿವೇಚನೆ ಇದರಲ್ಲಿದೆ. ಸರಳ, ಸುಂದರ, ಅನುಭವಾರೂಢ ಉದಾಹರಣೆಗಳಿಂದ ಈ ಕೃತಿ ರಚಿಸಲ್ಪಟ್ಟಿದೆ.

ಶ್ರೀಮದ್ಭಗವದ್ಗೀತಾಸಾರದಲ್ಲಿ ಗೀತೆಯ ಹಿರಿಮೆ, ರಣವೀರನ ಮನೋದೌರ್ಬಲ್ಯ. ಆತ್ಮಾನಾತ್ಮವಿವೇಕ, ಕರ್ಮಚಕ್ರ, ನಿಷ್ಕಾಮಕರ್ಮ, ಭಕ್ತಿ ಅವತಾರ ರಹಸ್ಯ. ಕರ್ಮಾಕರ್ಮ ವಿವೇಕ, ತ್ರಿವಿಧ ಸನ್ಯಾಸಗಳು, ಅಂತಕಾಲ ಮುಕ್ತಿಮಂದಿರ, ಪ್ರವೇಶ, ಭಗವಂತನ ವಿಭೂತಿ ವಿಸ್ತಾರ, ವಿಶ್ವರೂಪೀ ಪರಮಾತ್ಮ ಮೊದಲಾಗಿ ಇಪ್ಪತ್ತು ವಿಷಯಗಳ ಮೇಲೆ ಭಗವದ್ಗೀತೆಯಲ್ಲಿನ ಶ್ಲೋಕಗಳೊಂದಿಗೆ ವಿವರಣೆ ಬರೆದಿದ್ದಾರೆ. ವಿವೇಕ ವೈಭವದಲ್ಲಿ ೪೮ ನುಡಿಮುತ್ತುಗಳಿದ್ದು ೧೨ ಭಾಗಗಳಿವೆ ಅಜ್ಞಾನ, ಮಾಯೆ, ವಿವೇಕ ಮೊದಲಾಗಿ ೧೨ ಪ್ರಕರಣಗಳನ್ನು ಸರಳ ಶೈಲಿಯಲ್ಲಿ

ರಚಿಸಲಾಗಿದೆ. ಉದಾಹರಣೆಗೆ

ಕೊಡುವವರಿಗೆ ಕೊಡತಿಹರು ದೇವತೆಗಳು ಕೊಡದವರಿಗೇನನ್ನು
ಕೊಡರು. ಕೊಡುಗೈಯ ದೊರೆ ಸದ್ಗುರುವು ಬೇಡಿದವರಿಗೆ
ಕೊಡುವ ಸುಮ್ಮನೆ ಮುಕ್ತಿ ಪದವ ॥

ಪಂಚಪಾವನ ಗಂಗಾ ಇದರಲ್ಲಿ ಸಿದ್ಧರೂಢರು ಸ್ತೋತ್ರ, ಶ್ರೀ ಶಂಕರರ ಆತ್ಮಬೋಧ, ವಿಶ್ವರೂಪದರ್ಶನ ಈ ಐದು ಕೃತಿಗಳಿವೆ. ವಿವೇಕ ವೈಭವದಂತೆ ನುಡಿಮುತ್ತುಗಳಿವೆ.

ಯುಕ್ತಿ ಇಲ್ಲದ ಶಕ್ತಿ ತೃಪ್ತಿಯಿಲ್ಲದ ಭಕ್ತಿ
ಮುಕ್ತಿ ಇಲ್ಲದ ಭಕ್ತಿ ಯುಕ್ತವಲ್ಲ ।

ಬೋಧದೀಪಾವಲಿಯಲ್ಲಿ ಶಂಕರರ ವೇದಾಂತ ಪಂಡಿತ, ಅಪರೋಕ್ಷಾನು ಭೂತಿ ಮತ್ತು ಮೋಹಮುದ್ಗರ ಎಂಬ ಚಿಕ್ಕ ಚಿಕ್ಕ ಕೃತಿಗಳ ಪದ್ಯಾನುವಾದ ಮಾಡಿದ್ದಾರೆ. ಆದ್ಯಾತ್ಮಗಳಿಗೆ ಸ್ವಾರಸ್ಯಕರವಾದ ಅನೇಕ ವಿಷಯಗಳು ಈ ಪುಟ್ಟ ಕೃತಿಯಲ್ಲಿ ದೊರೆಯುತ್ತದೆ.

ಹೊಂಬಳದಲ್ಲಿ ಜನಿಸಿ, ನವಲಗುಂದದಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಾ ಆದ್ಯಾತ್ಮ ಜ್ಞಾನವನ್ನು ಪಡೆದುಕೊಂಡು ಕರ್ನಾಟಕದ ತುಂಬಾ ಸಂಚರಿಸಿ ಜ್ಞಾನಜ್ಯೋತಿಯು ಬೆಳಗಿದ ಶ್ರೀ ಶಂಕರಅಗ್ನಿಹೋತ್ರಿಯುವರ ವ್ಯಕ್ತಿತ್ವ ಮರೆಯಲಾಗದಂತಹುದು.

## ೪. ಕರ್ಕಿ ಕೇಶವದಾಸ

ದಿ. ಶ್ರೀ ಕರ್ಕಿ ಕೇಶವದಾಸರ ನಿಜನಾಮ, ಶ್ರೀ ಈಶ್ವರ ಕೇಶವ ಭಟ್ಟ ಎಂಬುದಾಗಿ, ಕರ್ಕಿಯಲ್ಲಿ ಇ.ಕೆ. ಭಟ್ಟ ಎಂದೆ ಖ್ಯಾತರಾದವರು. ಕೇಶವ ದಾಸರು ೧೯೦೦ನೇ ಇಸವಿಯಲ್ಲಿ ಕರ್ಕಿಯಲ್ಲಿ ಜನ್ಮತಳೆದರು. ತಂದೆ ಶ್ರೀ ಕೇಶವ ಭಟ್ಟ ಭೈರವ ಭಟ್ಟ ಬುರ್ಡೆ. ತಾಯಿ ಲಕ್ಷ್ಮೀ ಎಂಬುವರು. ತಂದೆಯವರು ಪುರೋಹಿತರಾಗಿ ಮಂತ್ರವಿದರಾಗಿ ಸಂಪ್ರದಾಯಸ್ಥ ಮನೆತನದವರಾಗಿದ್ದರು. ಮಕ್ಕಳಲ್ಲೂ ಹಿಂದಿನ ಆಚಾರ ವಿಚಾರಗಳು, ಬೆಳೆಯಲು ಕಾರಣರಾಗಿದ್ದರು. ಬಾಲ್ಯದಿಂದಲೂ ದೈವ ಭಕ್ತಿ, ಭಜನೆ ಪೂಜೆಗಳಲ್ಲಿ ಕೇಶವದಾಸರಿಗೆ ಒಲವು ಹೆಚ್ಚಾಗಿದ್ದಿತು. ತಂದೆಯವರಿಗೆ ಹುಡುಗನ ದೈವಭಕ್ತಿ ಶ್ರದ್ಧೆಗಳನ್ನು ಕಂಡು ಸಂತೋಷವಾಗುತ್ತಿತ್ತು. ಕೇಶವ ಭಟ್ಟರು ಸಂಪ್ರದಾಯಸ್ತರಾಗಿದ್ದರೂ ಹೊನ್ನಾವರದಲ್ಲಿರುವ ಸೈಂಟ್ ಥಾಮಸ್ ಹೈಸ್ಕೂಲಿನಲ್ಲಿ ಶಿಕ್ಷಣ ಪಡೆಯಲು ಅವಕಾಶ ಮಾಡಿಕೊಟ್ಟರು. ಆಗ ಈ ಪ್ರೌಢಶಾಲೆ ಮುಂಬೈ ವಿಶ್ವ ವಿದ್ಯಾನಿಲಯದ ವ್ಯಾಪ್ತಿಗೆ ಸೇರಿದ್ದಿತು. ಅದೇ ಶಾಲೆಯಲ್ಲಿ ಈಶ್ವರ ಕೇಶವ ಭಟ್ಟರು ಎರಡು ವರ್ಷ ಅಭ್ಯಾಸ ಮಾಡಿ ಮ್ಯಟ್ರಿಕ್ ಪರೀಕ್ಷೆಯನ್ನು ಮುಗಿಸಿದರು. ಪರೀಕ್ಷೆಯಲ್ಲಿ ಉತ್ತೀರ್ಣರಾಗುವ ಕಾಲಕ್ಕೆ ಕಾಂಗ್ರೆಸ್ ಸ್ವಾತಂತ್ರ ಚಳುವಳಿಯ ಕರೆಕೊಟ್ಟಕಾಲ. ಹಾಗಾಗಿ ೧೯೨೦–೨೧ ಚಳುವಳಿಯ ಸಂದರ್ಭದಲ್ಲಿ ಕಾರ್ಯಕರ್ತರಾಗಿ ಹಲವು ಕಡೆ ಸಂಚಾರ ಮಾಡಿದರು. ಚಳುವಳಿಯು ಮುಗಿದ ನಂತರ ಉದ್ಯೋಗ ದೊರಕದ ಕಾರಣ ಮನೆಯ ಆರ್ಥಿಕಪರಿಸ್ಥಿತಿ ಉಲ್ಬಣ ಗೊಂಡಿತು. ಮನೆಯ ಪರಿಸ್ಥಿತಿಯನ್ನು ಮತ್ತು ತಮ್ಮ ನಿರುದ್ಯೋಗಸಮಸ್ಯೆಗಳಲ್ಲೂ ಸಹ ಸಿಕ್ಕ ಸಮಾಧಾನವೆಂದರೆ ಸತ್ಸಂಗದಲ್ಲಿ ಕಾಲ ಯಾಚನೆ, ಅದಕ್ಕಾಗಿ ಕರ್ಕಿಯಲ್ಲಿರುವ ಶ್ರೀ ಚನ್ನಕೇಶವ ದೇವಾಲಯದಲ್ಲಿ ವಾಸಮಾಡುತ್ತಿದ್ದರು. ಅಲ್ಲಿ ತಮ್ಮ ಗೆಳೆಯರೊಡನೆ, ಹೆಚ್ಚಿನ ಸಮಯ ಪೂಜೆ ಹಾಗೂ ಭಜನೆಯಲ್ಲಿ ತಲ್ಲೀನರಾಗಿರುತ್ತಿದ್ದರು. ಈ ಕಾಲದಲ್ಲಿ ಅವರು ಭಗವಂತನಾದ ಚೆನ್ನಕೇಶವನನ್ನು ಕುರಿತು ಸಾಕಷ್ಟು ಕೀರ್ತನೆಗಳನ್ನು ರಚಿಸಿದರು. ಊರಿನವರು ಇವರ ಕೀರ್ತನೆ ಹಾಗೂ ಭಕ್ತಿಯನ್ನು ಗಮನಿಸಿ ಗೌರವ ಕೊಡುತ್ತಿದ್ದರು. ದೇವರ ಬಗೆಗಿನ ಭಕ್ತಿ

ಶ್ರದ್ಧೆಗಳೇ ಇವರು ದಾಸರಾಗುವುದಕ್ಕೆ ಪ್ರೇರಣೆ ಒದಗಿಸಿತು. ಆಕಾಲದಲ್ಲಿ ಇವರು ಕೇಶವದಾಸರೆಂದೇ ಖ್ಯಾತರಾಗತೊಡಗಿದರು.

ಮುಂದೆ ಪಿ.ಜೆ. ಕರ್ಕಿಯವರ ಅಕ್ಕನ ಮಗಳು ವೆಂಕೂಬಾಯಿ ಎಂಬುವರೊಡನೆ ವಿವಾಹವಾಯಿತು. ಶ್ರೀ ಪಿ.ಜೆ. ಕರ್ಕಿಯವರು ಖ್ಯಾತ ವಕೀಲರಾಗಿದ್ದರು. ಶಂಕರ ಮಹಾಭಲ ಗೋಕರ್ಣ ಎನ್ನುವವರು ಶ್ರೀ ಕೇಶವ ದಾಸರ ಮಾವ. ಇವರು ಹವ್ಯಕ ಬ್ರಾಹ್ಮಣರಲ್ಲಿ ಆ ಪರಿಸರದ ಮೊದಲ ವಕೀಲರೆನಿಸಿದ್ದರು.

ಮುಂದೆ ಕೇಶವದಾಸರು ಪುಣೆಯಲ್ಲಿ ಭೊಪಟ್‌ಕರರು ನಡೆಸುತ್ತಿದ್ದ ವಕೀಲವೃತ್ತಿಗೆ ಅರ್ಹತೆಯ ಪರೀಕ್ಷೆಯನ್ನು ಪಡೆಯಲೋಸುಗ ಒಂದು ವರ್ಷ ಅಧ್ಯಯನಮಾಡಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ 'ಹೈಕೋರ್ಟ್ ಪ್ಲೀಡರ್' ಎಂಬ ಪ್ರಮಾಣ ಪತ್ರ ಪಡೆದುಕೊಂಡರು, ತಮ್ಮ ವಕೀಲಿ ವೃತ್ತಿಯನ್ನು ಹೊನ್ನಾವರದಲ್ಲಿ ಪ್ರಾರಂಭಿಸಿದರು.

ಕಾಂಗ್ರೇಸ್ ಕಾರ್ಯಕರ್ತರಾಗಿದ್ದ ತಾವು ೧೯೩೦-೩೧ರ ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದರಿಂದ ಜೈಲುವಾಸವನ್ನು ಅನುಭವಿಸಿದರು. ಮತ್ತೆ ೧೯೪೨ರ ಚಳುವಳಿಯಲ್ಲಿಯೂ ಜೈಲುವಾಸ ಅನುಭವಿಸಿದರು. ೧೯೪೭ರಲ್ಲಿ ಕಾಂಗ್ರೇಸ್ ಅಭ್ಯರ್ಥಿ ಎಸ್. ಎಸ್. ಶಾಸ್ತ್ರಿಗಳ ಜೊತೆಗೆ ಸೇರಿ ಅವರಿಗೆ ಸಹಾಯಕವಾಗಿ ಪ್ರಚಾರ ನಡೆಸಿದರು. ಮುಂಬೈ ಭೂಶಾಸನದ ವಿರುದ್ಧ ಸಣ್ಣ ಭೂಹಿಡುವಳಿದಾರರ ವತಿಯಿಂದ ಹೋರಾಟದಲ್ಲಿ ಪಾಲ್ಗೊಂಡರು. ಈ ರಾಜಕೀಯ ಸಂದರ್ಭದಲ್ಲಿ ಹಲವಾರು ಕೀರ್ತನೆಗಳು ರಚಿತವಾದವು. ೧೯೩೫ ರ ಕಾಲದಲ್ಲಿ ಹೊನ್ನಾವರದ ಪುರಸಭಾ ಸದಸ್ಯರಾಗಿ ಸಮಾಜ ಸೇವೆಯಲ್ಲಿ ತೊಡಗಿದರು. ನಿರಂತರ ೨೫ ವರ್ಷ ಜನಸೇವೆಯೆ ಜನಾರ್ಧನ ಸೇವೆಯೆಂದು ಕೆಲಸ ಮಾಡಿದರು. ಹವ್ಯಕ ಸಮಾಜದ ಸಹಕಾರಿ ಬ್ಯಾಂಕ್ ಸ್ಥಾಪಿಸಿ ಅದರ ಅಧ್ಯಕ್ಷರೂ ಆಗಿದ್ದರು. ಕರ್ಕಿಯಲ್ಲಿ ಶ್ರೀ ಚನ್ನಕೇಶವ ಸಹಕಾರಿ ಸಂಘವನ್ನು

ಸ್ಥಾಪಿಸಿದರು. ಶಾಲೆಯನ್ನು ಕಟ್ಟಿ ಬೆಳೆಸಿದರು. ಮತ್ತೇ ಹೊನ್ನಾವರದ ಸಮೀಪದಲ್ಲಿರುವ ಪುಣ್ಯ ತೀರ್ಥವಾದ ರಾಮ ತೀರ್ಥದಲ್ಲಿ ಶ್ರೀ ರಾಮೇಶ್ವರ ದೇವಸ್ಥಾನವನ್ನು ಕಟ್ಟಿಸಿದರು, ಅಲ್ಲಿ ದತ್ತಮಂದಿರವನ್ನು ನಿರ್ಮಿಸಿದರು.

ಕೇಶವದಾಸರ ತಂದೆ ಕೇಶವ ಭಟ್ಟರು ಕಾಲ್ನಡಿಗೆಯಲ್ಲಿಯೆ ರಾಮೇಶ್ವರಕ್ಕೆ ಹೋಗಿ ರಾಮೇಶ್ವರ ಲಿಂಗವನ್ನು ತಂದು ಪ್ರತಿಷ್ಠಾಪಿಸಿದರು. ಈ ದೇವಾಲಯ ಅರಬ್ಬಿ ಸಮುದ್ರಕ್ಕೆ ಮುಖವಾಗಿ ಕಟ್ಟಲ್ಪಟ್ಟಿದೆ. ಈ ದೇವಾಲಯದ ಅರ್ಚನೆಯನ್ನು ಕೇಶವದಾಸರೆ ನಿರ್ವಹಿಸುತ್ತಿದ್ದರು. ದೇವಾಲಯಕ್ಕೆ ದಿನಂಪ್ರತಿ ಬೆಳಿಗ್ಗೆ ೫ ಗಂಟೆಗೆ ಹೋಗಿ ರಾಮತೀರ್ಥದಲ್ಲಿ ಮಿಂದು, ಅರ್ಚನೆಮಾಡಿ ಮತ್ತೆ ಮನೆದೇವರಿಗೆ ಅರ್ಚನೆ ಸಲ್ಲಿಸುತ್ತಿದ್ದರು. ಶ್ರೀ ರಾಮತೀರ್ಥ, ಶ್ರೀ ದತ್ತರಾಮಲಿಂಗೇಶ್ವರ ದೇವರುಗಳ ಮೇಲೆ ಕೀರ್ತನೆಗಳು ಸಾಕಷ್ಟು ರಚನೆಯಾದವು.

ಪ್ರತಿನಿತ್ಯ ಮನೆಯಲ್ಲಿ ತಾವೆ ರಚಿಸಿದ ಅಷ್ಟೋತ್ತರ ಹಾಗೂ ದೇವಿಯ ಸ್ತೋತ್ರರೂಪವಾದ ಸಂಸ್ಕೃತ ಶ್ಲೋಕಗಳನ್ನು ಪಠಿಸುತ್ತಿದ್ದರು. ಈ ಕೃತಿ ಈಗಾಗಲೆ ಪ್ರಕಟಗೊಂಡು ಭಗವದ್ಭಕ್ತರ ಮನೆಗಳಲ್ಲಿವೆ.

ಕೇಶವದಾಸರದು ಭಕ್ತಿಯಿಂದ ಹಾಡುವ ಕೀರ್ತನೆಗಳಾಗಿವೆ. ಅವರು ನಾಲ್ಕು ಭಾಗಗಳಾಗಿ ಕೀರ್ತನೆಗಳನ್ನು ಮುದ್ರಿಸಿದ್ದಾರೆ. ಅವುಗಳಲ್ಲಿ ಎರಡು ಮತ್ತು ಮೂರನೇ ಸಂಪುಟವನ್ನುಳಿದು ಉಳಿದವು ಉಪಲಬ್ಧವಾಗಿಲ್ಲ.

ಈಗ ಅವರ ಉಪಲಬ್ಧವಾದ ಕೀರ್ತನೆಗಳು ಒಟ್ಟು ೬೫ ಮಾತ್ರ ಉಳಿದ ಭಾಗಗಳಲ್ಲಿ ಸುಮಾರು ೧೦೦ ಕೀರ್ತನೆಗಳು ಇವೆ. ಕೀರ್ತನೆಗಳು ಎಂಬ ಮುದ್ರಿತ ಸಂಗ್ರಹ ಕೃತಿಯಲ್ಲಿ ಶ್ರೀ ಅನಂತಶಯನ ಶ್ರೀ ಶ್ರೀಧರಸ್ವಾಮಿ, ಶ್ರೀ ಕೇಶವದಾಸ ಕರ್ಕಿಯವರ ಕೀರ್ತನೆಗಳಿವೆ. ಈ ಕೀರ್ತನೆಗಳು ಕೆಲವು ಸಂಸ್ಕೃತ ಸ್ತೋತ್ರ ರೂಪವಾಗಿಯು ಮತ್ತೆ ಕೆಲವು ಕೀರ್ತನ ರೂಪದಲ್ಲಿಯೂ ಇವೆ. ಇದರಲ್ಲಿ ರಾಮೇಶ್ವರಾಷ್ಟಕ, ರಾಮತೀರ್ಥಸ್ತವ:, ಶ್ರೀ ರಾಮೇಶ್ವರ ಪಂಚಾಕ್ಷರಿ ಸ್ತೋತ್ರಂ.

ಶ್ರೀ ದತ್ತಮೂರ್ತಿಗುರ್ವಷ್ಟಕಂ, ಮುಂತಾದ ಸಂಸ್ಕೃತ ರಚನೆಗಳಿವೆ. ದಾಸರ ಶ್ರೀ ಕರಿಕಾನ ಪರಮೇಶ್ವರಿ ಮಂಗಳಗೀತ, ಶ್ರೀಕರಿಕಾನ ಪರಮೇಶ್ವರಿ ವಂದನಾಷ್ಟಕಗಳೂ ಸಂಸ್ಕೃತ ಶ್ಲೋಕ ರೂಪದಲ್ಲಿಯೇ ಇವೆ. ಇದಲ್ಲದೆ 'ಶ್ರೀ ಕರಿಕಾನ ಪರಮೇಶ್ವರೀ ಸ್ತೋತ್ರಮಾಲಾ' ಕೃತಿಯೂ ಸಂಸ್ಕೃತ ಶ್ಲೋಕ ರೂಪದಲ್ಲಿಯೇ ಇದೆ.

ಕೇಶವದಾಸರು ಇಂಗ್ಲೀಷ್ ಭಾಷೆಯಲ್ಲಿ ಮಹಾಭಾರತದ ಹಿನ್ನೆಲೆಯ ಪ್ರಸಂಗ ರಚಿಸಿದ್ದಾರೆ. ಯಕ್ಷಗಾನ ಸಂಘ ಸ್ಥಾಪಿಸಿ ಪಾತ್ರದಾರಿಗಳಾಗಿದ್ದರು. ಈ ರೀತಿಯ ಬಹುಮುಖ ಸೇವೆಯ ಕರ್ಕಿ ಕೇಶವದಾಸರು, ಸಮಾಜ ಸೇವಕರಾಗಿ, ರಾಜಕೀಯ ಮುಂದಾಳುಗಳಾಗಿ, ಕಾಂಗ್ರೇಸ್ ಕಾರ್ಯಕರ್ತರಾಗಿ, ಹಲವಾರು ಸಂಘಗಳ ಸ್ಥಾಪಕರೂ ಪದಾಧಿಕಾರಿಗಳು ಆಗಿ ದೇವಾಲಯಗಳನ್ನು ಕಟ್ಟಿಸಿ ಕೀರ್ತನೆಗಳನ್ನು ರಚಿಸಿ, ಭಜನೆಯ ಆಸಕ್ತಿಯನ್ನು ಬೆಳಸಿ ದಿನಾಂಕ ೩೧ ಜನವರಿ ೧೯೭೫ರಲ್ಲಿ ದಿವಂಗತರಾದರು.

ಕೇಶವದಾಸರ ಕೀರ್ತನೆಗಳೆಲ್ಲ ಭಕ್ತಿ ಪ್ರಧಾನವಾದವು, ಪ್ರತಿನಿತ್ಯವೂ ಮನೆಯಲ್ಲಿ ಭಜಿಸಲು ಯೋಗ್ಯವಾದ ರೀತಿಯಲ್ಲಿ ಇಲ್ಲಿನ ಕೀರ್ತನೆಗಳಿವೆ. ಚೆನ್ನಕೇಶವನ ಎಲ್ಲಾ ಕೀರ್ತನೆಗಳು ನಾರಾಯಣನ ಭಕ್ತಿ ಸುಧೆಯನ್ನೇ ಹರಿಸುತ್ತದೆ. ಇವರ ಕೀರ್ತನೆಗಳಲ್ಲಿ ಭಗವದ್ಭಕ್ತಿ ಸಂಸಾರದ ತಾಪತ್ರಯ, ಅದರಿಂದ ಬಿಡಿಸಿ ಕೊಳ್ಳಲು ದೇವರಿಗೆ ಶರಣಾಗತಿ ಹೊಂದುವುದು, ಅನನ್ಯಧ್ಯಾನ, ಭಗವದ್ ಪ್ರೀತಿಯಿಂದ ಮಾನವ ಶಾಂತಿನೆಮ್ಮದಿಗಳನ್ನು ಪಡೆಯಬಲ್ಲನೆಂದು ನಿರೂಪಿಸುತ್ತಾರೆ. ಇವರ ಹೆಚ್ಚಿನ ಕೀರ್ತನೆಗಳು ಪೌರಾಣಿಕ ಸಂದರ್ಭಗಳನ್ನು ಉಲ್ಲೇಖಿಸಿ ಮುಕ್ತಿ ಪಡೆದುದನ್ನು ಉಲ್ಲೇಖಿಸುತ್ತಾ ಹೋಗುತ್ತವೆ. ದೈವ, ಭಕ್ತಿ, ಭಜನೆ ಇಹ ಜೀವನದ ಬಗೆಗಿನ ನಿರ್ಲಿಪ್ತತೆಗಳಿಂದಾಗಿ ಸಾಮಾಜಿಕ ಸಮಸ್ಯೆಗಳ ಬಗ್ಗೆ ಇವರು ಮನಹರಿಸಿದಂತಿಲ್ಲ. ವಕೀಲರಾಗಿದ್ದು ಹಲವು ಸಂಸ್ಥೆಗಳ ಪದಾಧಿಕಾರಿಗಳಾಗಿದ್ದು. ಚಳುವಳಿಯಲ್ಲಿ ಭಾಗವಹಿಸಿದ್ದರೂ ಆಗಿನ ಘಟನೆಗಳನ್ನು ಲೌಕಿಕವೆಂಬ ಕಾರಣಕ್ಕಾಗಿ ಕೇಶವದಾಸರು ಗಮನಿಸಿದಂತಿಲ್ಲ. ದೇವರು ಸರ್ವಾಂತರ್ಯಾಮಿ ಎಂದು ನಿರೂಪಿಸುತ್ತಾ

ಭೂತಾಳ ಪಾತಾಳ ಸಕಲ ಲೋಕಗಳಲ್ಲಿ
ಭೂತ ಪ್ರೇತಾಳ ಕ್ರಿಮಿ ಜಂತುಗಳಲ್ಲಿ
ಮಾತು ಚೇಷ್ಟೆಗಳಲ್ಲಿ ಕೆರೆ ಭಾವಿ ವನದಲ್ಲಿ
ಕೋತಿ ಖಗವೃಂದ ಪಶುವರ್ಗಂಗಳಲ್ಲಿ
ವೇದ ಶಾಸ್ತ್ರಗಳಲ್ಲಿ ಸರ್ವಧರ್ಮಗಳಲ್ಲಿ
ಭೋಧಕ ಮೋದಲಾದ ಗುರುವರ್ಗದಲ್ಲಿ
ಪಾದ ಪಾದಗಳಲ್ಲಿ ಸಾಧು ಸಜ್ಜನರಲ್ಲಿ
ವಾದ್ಯ ಮೃದಂಗಾವಿನಾದಂಗಳಲ್ಲಿ –

ಎಂದು ಸರ್ವ ಶಕ್ತ, ಸರ್ವ ವ್ಯಾಪ್ತಸ್ಥ ಭಗವಂತನ ನಾಮ ಸ್ಮರಣೆಗೆ ಕರೆಯುತ್ತಿದ್ದಾರೆ. ಕೇಶವನು (ದೀನರೆಲ್ಲರಿಗು ಬಂಧು) ದೀನರಿಗೆಲ್ಲಾ ಬಂಧು, ಹೀನರಿಗೆಲ್ಲಾ ಬಂಧು. ಈತನ ಚರಣವನ್ನು ಕರುಣವನ್ನು, ಪಡೆಯುವುದೇ ನಮ್ಮ ಗುರಿ ಎನ್ನುತ್ತಾರೆ. ಇದಕ್ಕಾಗಿ ಭಕ್ತಿಯೆಂಬ ಬೀಜವನ್ನು ಬಿತ್ತಯ್ಯ ಅದರಲ್ಲಿ ಬೆಳೆವ ಮುಕ್ತಿ ಎಂಬ ಫಲವನ್ನು ತಿನ್ನಯ್ಯ ಎಂಬ ಸಲಹೆ ಇವರದು, ಹರಿನಾಮ ಸ್ಮರಣೆಯಿಂದ ಸಕಲ ಅಭಿಷ್ಟಗಳು ಇರುತ್ತವೆಂದು 'ಹರಿನಾಮ ಮರೆಯ ಬೇಡಯ್ಯ ಪರಿದುರಿತಗಳೆಲ್ಲ ಅದು ನೀಗುವುದಯ್ಯ' ಎಂದು ಆಪ್ತವಾಗಿ ಹೇಳುತ್ತಾರೆ.

ಪುರಾಣ ದೃಶ್ಯಗಳನ್ನು ಕೇಶವದಾಸರು ಕೊಡುತ್ತಲೆ ಕೇಶವನ ಶಕ್ತಿಯನ್ನು ಮನದಟ್ಟು ಮಾಡಿಕೊಡುತ್ತಾರೆ. ಉದಾ :

ತರಳನಾಗಿಹ ಧ್ರುವನು ಘೋರ ತಪವಂಗ್ಯೆಯೆ ।
ಹರುಷದಿಂ ಬಾಲಕಗೆ ವರ ಪದವಿಯಿತ್ತೆ, ।
ದೊರೆಯು ರುಕುಮಾಂಗದನು ಏಕಾದಶೀ ವ್ರತವ ।
ಸರಸದಿಂದಾಚರಿಸೆ ನಿಜ ಭಕ್ತಿಗೊಲಿದೆ,

ಮುಂತಾಗಿ ಪುರಾಣ ಪಾತ್ರಗಳನ್ನು ವಿಶೇಷವಾಗಿ ಪರಿಚಯಿಸುತ್ತಾರೆ. ಕೆಲವು ಕೀರ್ತನೆಗಳಲ್ಲಿ ಸಂಖ್ಯಾ ಸಂಖೇತಗಳ ಮೂಲಕ ದೇವರ ಸ್ಮರಣೆ ಪೂಜೆ ಮಾಡುವುದನ್ನು ತಿಳಿಸಿರುತ್ತಾರೆ.

ಪಂಚೇಂದ್ರಿಯವಗೆದ್ದು ಪಂಚಾಮೃತಗಳಿಂದ
ಕಂಚಿಪುರವಾಸಿಯ ಕಾಯವನು ತೊಳೆದು
ಆರು ಅರಿಗಳ ಜೈಸಿ ಆರುಶಾಸ್ತ್ರಗಳಿಂದ
ಧಾರೆ ಪುರವಾಸಿಗೆ ಗಂಧ ಲೇಪಿಸುತ
ಮೂರು ವೈರಿಗಳಂತೆಯೆ ಚಾರು ವೇದಗಳಿಂದ
ಮಾರ ಪಿತನಿಗೆ ನಿತ್ಯ ಪುಷ್ಪವೇರಿಸುತಾ

ಆತ್ಮ ನಿವೇದನೆಯ ಕೀರ್ತನೆಗಳು ಸಂಸಾರ ಜೀವನದ ಅನಿತ್ಯತೆಯನ್ನು ತಿಳಿಸುತ್ತವೆ. ಸಂಸಾರದ ಕಷ್ಟನಷ್ಟಗಳಿಂದ ಮುಕ್ತಿಗೋಳಿಸೆಂದು ಬೇಡುತ್ತಾ

ಕಷ್ಟಗಳ ಪರಿಹರಿಸೋ ಶ್ರೇಷ್ಠ ಮಾರುತಿಯೇ
ಭ್ರಷ್ಟ ನಾನು ಭಂಡ ಸಂಸಾರದಲ್ಲಿ
ಸ್ವಾರ್ಥವೆನ್ನುವ ದುಃಖಸಾಗರದಲ್ಲಿ ಮುಳುಗಿದ್ದು
ಸ್ವಾರ್ಥಕೋಸುಗ ಹೀನ ಕೃತ್ಯಗಳ ಗೈವಾ
ಅರ್ಥವನು ಗಳಿಸುತ್ತಾ ತುಂಬಿದೆನು ಈ ಒಡಲ
ವ್ಯರ್ಥವಾಯಿತು ಜನ್ಮ ಸಾರ್ಥವನು ಮಾಡೋ –

ಎಂದು ಮೊರೆ ಹೋಗುತ್ತಾರೆ.

ಕೇಶವದಾಸರ ಉಪಲಬ್ಧವಾದ ಎರಡು ಸಂಪುಟಗಳಲ್ಲಿ ೯೭ ಕೀರ್ತನೆಗಳಿವೆ. ಇವೆಲ್ಲವೂ ದೇವರ ಸ್ತುತಿ ರೂಪವೇ ಆಗಿದೆ. ಆತ್ಮನಿವೇದನೆಯೂ ಸ್ತುತಿಯ ರೀತಿಯದೇ, ಇವರ ಕೀರ್ತನೆಗಳು ಭಜನೆ ಹಾಗೂ ಹಾಡಲು ಯೋಗ್ಯವಾದವು, ಸರಳ, ಸುಭಗ, ಜನಸಾಮಾನ್ಯರಿಗೆ ಅರ್ಥವಾಗುವ ಭಾಷೆಯ ಪ್ರಯೋಗವನ್ನು ಇಲ್ಲಿ ಬಳಸಲಾಗಿದೆ. ಇವು ಸಾಹಿತ್ಯ ಗುಣಕ್ಕಿಂತಲೂ ಭಕ್ತಿಯ ಭಜನೆಯ ಮುಖೇನ ದೇವರನ್ನು ಒಲಿಸಿ ಕೊಳ್ಳುವತ್ತ ಮಾರ್ಗದರ್ಶನ ನೀಡುತ್ತವೆ.

## ೫. ಭಟಕಳ ಅಪ್ಪಯ್ಯ

ಸಮರ್ಥರೆಂದು ಪರಿಚಿತರಾಗಿದ್ದ ಭಟಕಳ ಅಪ್ಪಯ್ಯ ಕ್ರಿ.ಶ ೧೭ನೆಯ ಶತಮಾನದ ಕೊನೆಯ ಭಾಗದಲ್ಲಿ ಸಾರಸ್ವತ ಕುಟುಂಬದಲ್ಲಿ ಜನಿಸಿದರು. ಇವರ ತಂದೆ ನಾಡಘರ ( ನಾಡಿಗರ ) ರಾಮರಾಯರು. ಭಟಕಳದ ಶ್ಯಾನುಭೋಗ ಕುಟುಂಬ ಇವರದು. ಅಪ್ಪಯ್ಯನವರ ನಿಜನಾಮ ಲಕ್ಷ್ಮಣ ಎಂದಿತ್ತು. ಅಪ್ಪಯ್ಯನವರ ತಾಯಿಯವರಿಗೆ ಲಕ್ಷ್ಮಣ ಎಂದು ಉಚ್ಚರಿಸುವುದು ಕಷ್ಟವಾದ್ದರಿಂದ ಅವರು "ಅಪ್ಪಯ್ಯ" ಎಂದು ಹೆಸರಿಟ್ಟರು. ಅವರ ಅಜ್ಜನ ಹೆಸರೂ ಅದಾಗಿತ್ತು. ಅವರದು ಕೌಂಡಿನ್ಯ ಗೋತ್ರ. ಮನೆದೇವರು ಮಂಗೇಶ. ಅಪ್ಪಯ್ಯರು ಬಾಲ್ಯದಲ್ಲಿಯೇ ಓದು, ಬರಹ, ವ್ಯವಹಾರ ಜ್ಞಾನದಲ್ಲಿ ನೈಪುಣ್ಯತೆ, ಸಂಗೀತ, ವಾದ್ಯ, ಬಿಲ್ಲುಗಾರಿಕೆ, ಹಾಗೂ ವ್ಯಾಯಾಮ ಮೊದಲಾದ ವಿದ್ಯೆಗಳಲ್ಲಿ ಪರಿಣತಿ ಹೊಂದಿದ್ದರು. ಕಾಲಕ್ರಮದಲ್ಲಿ ಆಧ್ಯಾತ್ಮದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಹೀಗಾಗಿ ಅವರು ಸಂತ, ಸತ್ಪುರುಷರ ಸಮಾಗಮದಲ್ಲಿ ತನ್ನ ಹೆಚ್ಚಿನ ಸಮಯವನ್ನು ಕಳೆಯಲು ಪ್ರಾರಂಭಿಸಿದರು. ಏಕಾಂತವನ್ನೇ ಬಯಸುವುದರ ಮೂಲಕ ವೈರಾಗ್ಯದತ್ತ ನನ್ನನ್ನು ಕೊಂಡೊಯ್ದುಕೊಂಡನು. ತಂದೆ - ತಾಯಿಗಳಿಗೆ ಮಗನ ಈ ನಡವಳಿಕೆ ಕಂಡು ಮಗನೆಲ್ಲಿ ಸನ್ಯಾಸಿಯಾಗಿಬಿಡುವನೋ ಎಂಬ ಭಯದಿಂದ ಬೇಗದಲ್ಲಿಯೇ 'ಭಾಗೀರಥಿ' ಎಂಬ ಹೆಣ್ಣನ್ನು ತಂದು ಮದುವೆ ಮಾಡಿದರು. ಇದೂ ಸಹ ಅಪ್ಪಯ್ಯರಲ್ಲಿ ಬದಲಾವಣೆಯನ್ನು ತರಲಿಲ್ಲ. ಅವರ ಉದಾಸೀನ ಪ್ರವೃತ್ತಿಯಿಂದಾಗಿ ಜನ ಅವರನ್ನು 'ಹುಚ್ಚ' ನೆಂದು ಕರೆಯುವುದಕ್ಕೆ ಕಾರಣವಾಯಿತು.

ಒಮ್ಮೆ ಜೀವನದಲ್ಲಿ ಬೆಳಕಾಗಿ ಬಂದ ಪುರುಷನೊಬ್ಬನ ಅಸದೃಶ ಶಕ್ತಿಯೊಂದರ ಅನುಗ್ರಹದಿಂದ ಅಪ್ಪಯ್ಯರವರಿಗೆ ವಿಮಲಾನಂದಸ್ವಾಮಿಗಳ ದರ್ಶನವಾಯಿತು. ಅವರಿಂದ ಅಪ್ಪಯ್ಯನವರಿಗೆ ದೀಕ್ಷೆ ದೊರೆಯಿತು. ಅಂದಿನಿಂದ ಕವಿತ್ವದ ಶಕ್ತಿಯನ್ನು ಅವರು ಪಡೆದುಕೊಂಡರು. ತಮ್ಮಲ್ಲಿದ್ದ

ಅಜ್ಞಾನವನ್ನು ಹೋಗಲಾಡಿಸಿಕೊಂಡು 'ಅಂತರಂಗದ ಸುಖ ಹೇಳುವುದಲ್ಲಾ ಸಂತೋಷವೆಂಬುದು ಶಿವನೊಬ್ಬ ಬಲ್ಲ' ಎಂಬಂತಹ ಕೀರ್ತನೆಗಳ ರಚನೆಗೆ ಇದು ಕಾರಣವಾಯಿತು.

ಅಪ್ಪಯ್ಯ ಕೆಲವು ಕಾಲ ಭೈಟೂರಲ್ಲಿ ಹಾಗೂ ಮತ್ತೆ ಕೆಲವು ಕಾಲ ಭಟ್ಕಳದಲ್ಲಿ ತಮ್ಮ ಸಮಯವನ್ನು ಕಳೆಯುತ್ತಿದ್ದರು. ತಮ್ಮ ಧರ್ಮಪತ್ನಿಯ ನಿಧನದ ನಂತರ ಭೈಟೂರಲ್ಲಿಯೇ ಉಳಿದರು. ತಮ್ಮ ಹೆಚ್ಚಿನ ಕಾಲವನ್ನು ಗುರುಸೇವೆಯಲ್ಲಿಯೇ ಕಳೆಯಲು ಪ್ರಾರಂಭಿಸಿದರು. ತಮ್ಮ ಗುರುಗಳ ನಿಧನದ ನಂತರ ಅಪ್ಪಯ್ಯನವರು ತಮ್ಮ ಉಳಿದ ಆಯುಷ್ಯವನ್ನು ಲೋಕದ ಜನರ ಉದ್ಧಾರಕ್ಕಾಗಿ ಧಾರೆಯೆರೆದರು. ಅನಂತರ ಊರಿಂದೂರಿಗೆ ಅಲೆಯುತ್ತ ಕೀರ್ತನೆಗಳನ್ನು ಹಾಡುತ್ತ ಜನರನ್ನು ಸನ್ಮಾರ್ಗದತ್ತ ತಿರುಗಿಸಿ ಅಜ್ಞಾನವನ್ನು ಅವರಿಂದ ಹೊಡೆದೋಡಿಸಿ ಅವರಲ್ಲಿ ಪರಮಾತ್ಮ ಪ್ರೇಮದ ಬೆಳಕನ್ನು ಬೀರಿ ತಮ್ಮ ಸ್ವಾನುಭಾವವನ್ನು ಎಲ್ಲರಿಗೂ ಕೀರ್ತನೆಗಳ ಮೂಲಕ ತಿಳಿಸಿದರು. ಅಪ್ಪಯ್ಯ ಅವರು ನಿಧನರಾದ ತಾರೀಖು ತಿಳಿದು ಬರುವುದಿಲ್ಲ. ಭಟ್ಕಳದಲ್ಲಿ ಅವರ ಸಮಾಧಿ ಇದ್ದು ಅದರ ಮೇಲೆ ಲಿಂಗವನ್ನು ಸ್ಥಾಪಿಸಲಾಗಿದೆ. ಇದನ್ನು ನಾಡಘರ ಉಮಾಮಹೇಶ್ವರ ದೇವಸ್ಥಾನ ಎಂದು ಕರೆಯುತ್ತಾರೆ.

ಆ ದೇವಾಲಯವು ಕ್ರಿ.ಶ. ೧೯೦೦ ರಲ್ಲಿ ಜೀರ್ಣೋದ್ಧಾರಗೊಂಡಿದೆ. ಕಾರ್ತೀಕ ಬಹುಳ ಚತುರ್ದಶಿಯ ದಿನವನ್ನು ಅವರ ಪುಣ್ಯದಿನವನ್ನಾಗಿ ಜನರು ಪ್ರತಿವರ್ಷ ಅಲ್ಲಿ ಆಚರಿಸುತ್ತಾರೆ. ಭಟಕಳ ಅಪ್ಪಯ್ಯನವರ ಕುರಿತು ಧರ್ಮಸ್ಥಳದ ವರದಯ್ಯ ಹೆಗ್ಗಡೆಯವರಿಗೆ ಕಣ್ಣು ಬರಿಸಿದ್ದು, ಕೊಲ್ಲೂರು ಮೂಕಾಂಬಿಕಾ ದೇವಿಯು ಸಜೀವವಾಗಿ ತನ್ನ ಕೂದಲಿಂದ ತುಂಬಿದ ತಲೆಯ ಮೇಲೆ ಮುಡಿದ ಹೂವಿನ ಚಂಡು ಹಾರಿ ಬಂದು ಅರಸನ ಮೇಲೆ ಬೀಳುವಂತೆ ಮಾಡಿದ್ದು, ಅಘನಾಶಿನಿ ನದಿಯನ್ನು ದಾಟಲು ಮಾಡಿದ ಪ್ರಯತ್ನದ ಪವಾಡಗಳು ಭಟ್ಕಳದ ಸುತ್ತಲಿನಲ್ಲಿ ಜನಜನಿತವಾಗಿದೆ.

ತಮ್ಮ ಕೀರ್ತನೆಯಿಂದ ಅಪ್ಪಯ್ಯನವರು ಎಲ್ಲ ದೇವತೆಗಳನ್ನು ಸಮಾನ ಭಕ್ತಿಭಾವದಿಂದ ಹಾಡಿ ಹೊಗಳಿದ್ದಾರೆ. ಅನಂತಶಿವರಾಮಮೂಢ ಭಟ್ಕಳ ಎಂಬುವರು ಅಪ್ಪಯ್ಯ ಅವರ ನಲವತ್ತೈದು ಕೀರ್ತನೆಗಳನ್ನು ಒಟ್ಟು ಗೂಡಿಸಿ ವಿಸ್ತಾರ ಚರಿತ್ರೆಯೊಂದಿಗೆ ಪ್ರಕಟಿಸಿದ್ದಾರೆ. ಆ ಕೃತಿ ಅಲಭ್ಯ. ಅವರ ಸಂಕ್ಷಿಪ್ತ ಜೀವನ ಚರಿತ್ರೆ ಹಾಗೂ ಕೆಲವು ಕೀರ್ತನೆಗಳನ್ನು ಒಂದಾಣೆ ಮೂಲೆಯ ೨೫೧ನೇ ಸಾಲಿನ ಸಂತ ಶರಣ ಎಂಬುವರ ಸಂಪಾದಕತ್ವದಲ್ಲಿ 'ಆಫೀಸು' ರಥಬೀದಿ ಮಂಗಳೂರು ಇಲ್ಲಿ ೧೯೫೯ರಲ್ಲಿ ಪ್ರಕಟವಾಗಿದ್ದು ಅದರಲ್ಲಿ ಹದಿನೈದು ಕೀರ್ತನೆಗಳಿವೆ. ಪ್ರಸ್ತುತ ಇವರ ೪೦ ಕೀರ್ತನೆಗಳು ಮಾತ್ರ ಲಭ್ಯವಾಗಿವೆ.

## ಕೃತಜ್ಞತೆಗಳು

ದಾಸ ವಾಙ್ಮಯ ಸಂಪುಟವನ್ನು ಹೊರತರಲು ಯೋಜನೆಯೊಂದನ್ನು ಆಯೋಜಿಸಿ ಆ ಮೂಲಕ ಕಾರ್ಯಪ್ರವೃತ್ತರಾದ ಕನ್ನಡ – ಸಂಸ್ಕೃತಿ ನಿರ್ದೇಶನಾಲಯದ ಅಧಿಕಾರಿಗಳಿಗೆ – ಈ ಸಂಪುಟವನ್ನು ಸಿದ್ಧಪಡಿಸಲು ನಮಗೆ ಅವಕಾಶಮಾಡಿಕೊಟ್ಟ ಮಾನ್ಯ ಡಾ. ಶ್ರೀನಿವಾಸ ಹಾವನೂರ್‌ರವರಿಗೆ, ಕವಿ ಪರಮದೇವರ ಕೀರ್ತನೆಯನ್ನು ಸಂಗ್ರಹಿಸಿರುವ ಕೂಡ್ಲಿ ಜಗನ್ನಾಥ ಶಾಸ್ತ್ರೀ ಅವರಿಗೆ, ಕರ್ಕಿ ಕೇಶವದಾಸರ ಸಂಗ್ರಹ ಒದಗಿಸಿದ ಅವರ ಕುಟುಂಬದವರಿಗೆ. ಬೇಟೆರಾಯ ದೀಕ್ಷಿತರ ಹಾಡುಗಳನ್ನು ಸಂಗ್ರಹಿಸಿರುವ ದಿ. ಬಿ. ರಾಮಸ್ವಾಮಿಯವರಿಗೆ, ಭಟ್ಕಳ ಅಪ್ಪಯ್ಯರ ಕೀರ್ತನೆ ಸಂಗ್ರಹಿಸಿದ ಶ್ರೀ ಸಂತ ಶರಣರವರಿಗೆ, ಕರ್ಕಿ ಕೇಶವದಾಸರ ಕೀರ್ತನೆಗಳನ್ನು ಸಂಗ್ರಹಿಸಿರುವ ಶ್ರೀ ಪರಮೇಶ್ವರ ಗಣೇಶ ಕರ್ಕಿ, ವೆಂಕಟಸುಬ್ಬ ಗೋಪಾಲ ಹೆಗಡೆ ಇವರುಗಳಿಗೆ, ಶಂಕರಭಟ್ಟ ಅಗ್ನಿಹೋತ್ರಿಯವರ ಪುಸ್ತಕ ನೀಡಿದ ಶ್ರೀ ದೇಸಾಯಿಯವರಿಗೆ. ಅಪ್ಪಯ್ಯ ದೀಕ್ಷಿತರ ಹಾಡುಗಳನ್ನು ಬರೆದುಕೊಟ್ಟ ಶ್ರೀಮತಿ ನಳಿನಿ ವೆಂಕಟೇಶ,

ಶ್ರೀಮತಿ ಮೀನಾರಾವ್ ಇವರುಗಳಿಗೆ, ಈ ಯೋಜನೆಯಲ್ಲಿ ಪಾಲ್ಗೊಳ್ಳಲು ಅವಕಾಶನೀಡಿದ ಕೆಳದಿವಸ್ತು ಸಂಗ್ರಹಾಲಯದ ವಿಶ್ವಸ್ಥ ಸಮಿತಿಯವರಿಗೆ ಕೃತಿ ಸಂಪಾದನೆಗೆ ಮಾರ್ಗದರ್ಶಿಸಿದ ಕೆಳದಿ ಗುಂಡಾಜೋಯಿಸ್ ರವರಿಗೆ, ಕರಡು ಪ್ರತಿ ತಯಾರಿಸಲು ಸಹಾಯ ಮಾಡಿದ ಶ್ರೀಮತಿ ಸುಮನಾ ವೆಂಕಟೇಶ್ ಶ್ರೀಮತಿ ಕಮಲಾ, ಕು. ಲಕ್ಷ್ಮಿ. ಕೆ. ಆರ್. ಶ್ರೀ ಅಶೋಕ್ ಹೆದ್ಲಿ, ಶ್ರೀಮತಿ ಚೇತನ, ಶ್ರೀವಾಸುದೇವ ಮೂರ್ತಿ ಶ್ರೀಮತಿ ಕೆ. ಆರ್. ರೂಪ. ಅಪರ್ಣ ಇವರುಗಳಿಗೆ ನಮ್ಮ ನಮನಪೂರ್ವಕ ಕೃತಜ್ಞತೆಗಳು.

ಡಾ. ಕೆಳದಿ ವೆಂಕಟೇಶ ಜೋಯಿಸ

ಡಾ. ಡಿ. ಆರ್. ಪಾಂಡುರಂಗ

# ಕೀರ್ತನೆಗಳ ಕ್ರಮಸೂಚಿ

## ಆತ್ಮ ನಿವೇದನೆ

| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|

## ಕರ್ಕಿ ಕೇಶವದಾಸರ ಕೀರ್ತನೆಗಳು

## ಶಂಕರಭಟ್ಟ ಅಗ್ನಿಹೋತ್ರಿಯವರ ಕೀರ್ತನೆಗಳು

## ಭಟ್ಕಳ ಅಪ್ಪಯ್ಯ ಅವರ ಕೀರ್ತನೆಗಳು

### ಗಣೇಶ ಸ್ತುತಿ



### ದೇವಗುರು ಸ್ತುತಿ

## ಮಂಗಳ ಪದ್ಯಗಳು

## ಶ್ರೀ ಗಣೇಶಸ್ತುತಿ ಹಾಡುಗಳು

### ೧

ಎಲ್ಲ ದೇವರಿಗೆ ಮಿಗಿಲು ಈತ ಕಾಣಿರೋ ಜನರು
ಬಲ್ಲಿಡಿವನ ಭಜಿಸಿ ನೆನೆಸಿದೆಲ್ಲ ಪಡೆಯಿರೋ ಪ

ಬುದ್ಧಿಯುತರು ಏಕದಂತನ ಹೊದ್ದಿ ಭಕ್ತಿಭಾವದಿಂದ
ಶುದ್ಧರಾಗಿ ಮಡಿಯನುಟ್ಟು ಹೋದ್ದುವಸನವ
ತಿದ್ದಿ ನಿತ್ಯ ಕರ್ಮಗಳನು ಸಿದ್ಧಿ ಗಣಪನಿಂಗೆ ಜಲದಿ
ರುದ್ರದಿಂದ ಜಳಕಗೈದು ಮಡಿಯ ನಡಿಸಿರೋ ೧

ಅಷ್ಟಗಂಧ ವಿಡಿಸಿ ಪಣೆಗೆ ನಿಷ್ಟೆಯಿಂದಲಕ್ಷತೆಯನು
ಬೊಟ್ಟ ನಿಟ್ಟು ಪತ್ರ ಪುಷ್ಪ ಪೂಜೆಯಿಂದಲಿ
ಅಟ್ಟ ಭಕ್ಷ್ಯ ಭೋಜ್ಯಗಳನು ಇಟ್ಟು ಧೂಪವೆತ್ತಿ
ಹೊಟ್ಟೆ ತುಂಬ ತುಷ್ಟಿಗೈಸಿ ವಿಘ್ನರಾಜಗೆ ೨

ಹೋಳಿಸಿರ್ದ ಹಣ್ಣು ಕಾಯಿಯಿತ್ತು ಸೊಡರವೆತ್ತಿ
ಮೆಲ್ಲನೆದ್ದುನಮಿಸಿ
ಶೋಢಷೋಪಚಾರವನೆಲ್ಲ ತಿದ್ದಿ ಕರವ ಮುಗಿದು
ಬೇಡಿ ಕೊಲು ಮಂಡಲ ಮನೆಯ
ಡೊಳ್ಳಿನ ಗಣಪನವರಿಗೀವ ನಿಷ್ಟ ಸಿದ್ಧಿಯ ೩

## ೨

ಏನು ಕಡಿಮೆ ನಿನಗೆ ಗಣಪತಿ ಜ್ಞಾನವ ಕೊಡು ಎನಗೆ ಪ

ಕಾಲಲಂದಿಗೆ ಮೆರೆವ ಕಿರುಗೆಜ್ಜೆ ಮೇಲೆ ಸರಪಣಿ ರವವ
ನೀಲ ಮೇಘದ ಕಾಂತಿ ಬಾಲಕೇಳಿ ವಿಲಾಸ
ನೀಲ ಕಂಠನ ಸುತ ಸ್ಥೂಲಶರೀರಿ ೧

ಹೊನ್ನಾ ಭರಣ ಶೃಂಗಾರ ಕಟಿಗೆ ಚಿನ್ನದ ಉಡುದಾರ ।
ಚೆನ್ನಾಗಿ ಸುತ್ತಿದ ಪನ್ನಗಭೂಷಣ
ಹೊನ್ನ ಕಡಗ ಕೈಯ ಬೆರಳ ಉಂಗುರವು ೨

ಕುತ್ತಿಗೆಯೊಳಗಿರುವ ದುಂಡು ಮುತ್ತಿನ ಗುಂಡಿನ ಸರವು
ಹಸ್ತ ಚತುರ್ಭುಜದೊತ್ತಿನೊಳಗೆ ದಿವ್ಯಾಸ್ತ್ರರಂಜಿಸೆ
ಹೊತ್ತು ನಡೆವ ಮೂಷಿಕವು ೩

ಕುಂದಣದಿಂದ ಕೆತ್ತಿಸಿದ ಕಿರೀಟವು
ಚಂದದ ಮಂದಲೆ ಬೊಟ್ಟು
ಹೊಂದಿಕೆಯಿಂದ ಕಿವಿಯಲಿಟ್ಟ ಕುಂಡಲ
ಗಂಧ ಚಂದನ ಸರ್ವಾಂಗ ಲೇಪಿತನ ೪

ಪರಿಪರಿ ಭಕ್ಷ್ಯ ಭೋಜ್ಯಗಳು ನಾನಾ ಪರಿ
ಪರಿ ಷಡ್ರಸಾನ್ನಗಳು
ಕರಿವದನ ನಿನಗರ್ಪಿಸುವ ಸೊಪ್ಪಿನ ಸುಬ್ಬಗೊಲಿದ
ನೀಧೀರ ಉದಾರ ೫

೩

ಕಂಡೆನೋ ನಿನ್ನ ಚರಣ ಕಮಲವ
ಸೊಂಡಿಲಿಂದಿಹ ಗಣಪತಿ ಕೊಡು ವರವ ಪ

ಗಂಡ ಮಂಡಿತ ಮಣಿ ಕುಂಡಲ ಭೂಷಾ
ಉಂಡಲಿಗೆ ಚಕ್ಕುಲಿಯೊಳಗೆ ಸಂತೋಷ
ಚಂಡ ಪ್ರಬಲನಲ ಅಖಂಡ ಪ್ರಕಾಶ ಭೂ
ಮಂಡಲದೊಳು ನಿನ್ನ ಕೀರ್ತಿ ವಿಶೇಷ ೧

ಚಂದನಾಗರು ಧೂಪ ದೀಪಾವಳಿಯಿಂದಾ
ನಂದದಿಂದಲಿ ಪೂಜಿಪೆ ಭಕ್ತಯಿಂದ
ನಂದಿವಾಹನನಿಗೆ ಮೋಹದ ಕಂದ
ಮಂದಮತಿಯ ಬಿಡಿಸೈಯ್ಯ ನೀ ಮುದದಿಂದ ೨

ಚಿಕ್ಕ ಮೂಷಿಕವೇರಿ ಗಕ್ಕಾನೆ ಬರುವೆ
ಅಕ್ಕರಿಂದಲಿ ಭಕ್ತರೆಲ್ಲಾರ ಪೊರೆವೆ
ಮಿಕ್ಕ ಮಾತುಗಳೇನೋ ಪೊಗಳಲೆನ್ನಳವೇ
ಇಕ್ಕೇರಿಯೊಳು ಟೆಂಕಸಾಲೆಯೊಳಿರುವೆ ೩

೪

ಗಜ ಮುಖದವಗೆ ಗಣಪಗೆ ಚಲ್ವ ತ್ರಿಜಗ
ವಂದಿತಗಾರತಿ ಎತ್ತಿರೆ ಪ

ಒಳ್ಳಿತಾದ ಬಲು ತೆಂಗಿನ ಕಾಯಿ ಕಡಲೆಯ
ಎಳ್ಳುಂಡಲಿಗೆ ಕಬ್ಬು ಮೆಲುವವವಗೆ
ಬೆಳ್ಳಿಯ ಹುರಿಗೆಜ್ಜೆಗಳ ಕಟ್ಟಿನಲಿವಗೆ
ಡೊಳ್ಳಿನ ಗಣಪಗಾರತಿ ಎತ್ತಿರೆ ೧

ಕರದಲಿ ಪರಶು ಪಾಶಾಂಕುಶವ ಧರಿಸಿಹ ಹರುಷದಿ
ಭಕ್ತರ ಪೊರೆವವಗೆ
ಉರಗ ಕುಂಡಲನ ಕುಮಾರ ಗಜವದನಗೆ
ಶರಣ ಜನಕಗಾರತಿ ಎತ್ತಿರೆ ೨

ದೇವತೆಗಳ ಕೈಯ ಕಪ್ಪವ ಕೊಂಬುವಗೆ
ದಾವಾಗ್ನಿಯಿಂದ ಮೀರಿರುವಗೆ
ಯಾವಾಗ ಜನರಿಗೆ ಬೇಡಿದಿಷ್ಟಾರ್ಥವ ನೀವ
ಗಣೇಶಗಾರತಿ ಎತ್ತಿರೇ ೩

೫

ಜಯತು ಶ್ರೀ ಗಣನಾಥ ಜಯತು ಗೌರಿಪುತ್ರ ಜಯತು
ಸುರಮುನಿವಂದ್ಯ
ಜಯತು ಗಣನಾಥ ಜಯತು ಪ

ನಿಗಮ ಶಾಸ್ತ್ರ ವಿಚಾರ ಸಕಲಗುಣ ಗಂಭೀರ
ಅಗಜೆಯರಸ ಕುಮಾರ ಹರಿಪೂಜಿತ
ಜಗದ ಜೀವರುದ್ಧಾರ ಸಿದ್ಧಿ ವರದಾಕಾರ
ಅಗಣಿತಾಮಲ ಪುಣ್ಯಚರಿತ ಜನವಿನುತ
ಜಯತು ಜಯತು ೧

ತರಣಿ ಶಶಿ ಹರಿನಯನ ನಿರುತ ಮೂಷಿಕ ಗಮನ
ಶಿರದಿ ಮಣಿಗಣ ಮಕುಟ ಜ್ವಲಿಸೆ ಗಜವದನ
ಕರದಿ ಪಾಶಾಂಕುಶವ ಧರಿಸಿ ಭಕ್ತರಿಗಿಷ್ಟ
ವರಗಳನು ಪಾಲಿಸುತಲಿರುವ ಗಣನಾಥ ೨

ಅಡಿಗಡಿಗೆ ನೆನೆಗಡಲೆ ಗೊನೆಯ ಬಾಳೆಯ ಹಣ್ಣು
ಒಡೆದ ತೆಂಗಿನ ಕಾಯಿಗಳನು ಭಕ್ಷಿಸುತ
ಪೊಡವಿಯೊಳಗಧಿಕ ಕೇಡಲಸರುಹಿಲಿನಿಂದ
ಕಡು ಚೆಲುವ ಮೂರ್ತಿ ಗಣನಾಥ ವಿಖ್ಯಾತ
ಜಯತು ಜಯತು ೩

೬

ನೀನೆ ರಕ್ಷಿಸು ಎನ್ನ ಗಣಪತಿ ಧ್ಯಾನಿಸುವೆನು ನಿನ್ನ
ಮಾನವರೊಳು ಮಾನ ಹೀನನಾದೆನಗೆ ಸುಜ್ಞಾನವ
ಕರುಣಿಸಿ ಸಲಹೋ ದಯಾಳೋ ಪ

ಗೌರಿವರತನಯ ನಿನ್ನ ಕೊಂಡಾಡುವೆ ಕೀರ್ತನೆಯ
ಮಾರ ಹರನ ಸುಕುಮಾರ ಶರಧಿ ಗಂಭೀರ ಉ –
ಧಾರ ವೈಯ್ಯಾರ ನೀಧೀರ ೧

ಮೂಷಕ ವಾಹನನೆ ಕರದಿ ಪಾಶಾಂಕುಶ ಪಿಡಿದಿಹನೆ
ದೇಶಿಕರನು ನೆರೆ ಪೋಷಿಸಿ ದುರಿತ
ರಾಶಿಯ ನಾಶಿಸುವ ಗುಣ ನಿಧಿಯೇ ೨

ನಾಗವಾಹನ ನಮಿತ ಸುರನರ ನಾಗ ಕಿನ್ನರ ಸೇವಿತ
ನಾಗ ವೈರಿಯ ಸುತ ನಾಗಶಯನ ನುತ
ನಾಗ ಮುಖನೆ ಘೋರ ನಾಗಭೂಷಣನೆ
ನೀನೆ ರಕ್ಷಿಸುಎನ್ನ ೩

ಇಕ್ಷು ಪಣ್ ಫಲಗಳನು ನಾನಾ
ಭಕ್ಷ್ಯ ಭೋಜ್ಯಂಗಳನು ಭಕ್ಷಿಸಿ ಕುಜನರ

ಶಿಕ್ಷಿಸಿ ಸುಜನರ ರಕ್ಷಿಪೆ ನಿರುತ ನೀ
ದಕ್ಷ ಮುಖಾರಿ ಸುತನೆ ೪

ಹಿಂಡು ದಿವಿಜರೊಡನೆ ಪೂಜಿಸಿ ಕೊಂಡು ಹಿಗ್ಗುತಲಿಹನೆ
ಮಂಡಲ ಮನೆಯೊಳು ನಿಂದೀಗಳೆನ್ನ ಉ
ದ್ದಂಡ ವಿಘ್ನವ ಪರಿಖಂಡನಗೈದು ೫

೭

ನೆನೆಯಿರೋ ಜನರೆಲ್ಲ ಗುಣಯುತನ
ಘನ ಮೂರ್ತಿ ಮಧುಪುರದ ಗಣನಾಥನ ಪ

ಮಣೆಗಣ ಶಿವನ ಕುಮಾರಕನ
ಫಣೆಯುದರದಿ ಸ್ತುತಿ ತಿರುಗುವನ
ಕರದಿ ಪಾಶಾಂಕುಶ ಪಿಡಿದಿಹನ
ಪಾದವ ನೆನೆವರ ಭಕ್ತರ ನೋಡಿ ಮರುಗುವನ ೧

ಶಿಬ್ಬಲುಂಡಿಗೆಯ ಮೆಲುವವನ
ಕಾಲ ಕೊಬ್ಬಿದ ರಕ್ಕಸರಹಲ್ಲ ಮುರಿದವನ
ಸಜ್ಜನರನು ನೋಡಿ ಮರುಗುವನ
ಜಗಕೊಬ್ಬನೇ ಸುರನರ ಸೇವಿತನ ೨

ಭಾಸುರ ತೇಜದಿ ಮೆರೆವನ ಒಳ್ಳೆ
ಮೂಷಿಕವನೇರಿ ನಲಿದವನ
ಕೇಡಲ ಸರದಲಿ ಇರುವವನ
ನಂಬಿದ ದಾಸರನು ಅನುದಿನ ಪೊರೆವವನ ೩

## ೮

ನೆನೆಯಿರೋ ಜನರೆಲ್ಲ ಗುಣಯುತನ ಘನ ಮೂರ್ತಿ ವರ
ಮಧುಪುರ ಗಣನಾಥ

ದೇವರ ದೇವ ಕೃಪಾಕರನ
ಪಾವನ ಚರಿತ ಪುಣ್ಯೋದಯನ
ಭಾವಕಿ ಗಿರಿಜೆಯ ವರಸುತನ ಚೆಲುವ
ಭಾವದಿಂದೊಪ್ಪುವ ಗಜಮುಖನಾ ೧

ಚಂದ್ರಗೆ ಶಾಪ ನಿತ್ತಿಹನಾ
ಚಂದಿಂದೊಪ್ಪುವ ಶುಭಕರನ
ಕುಂಕುಮಚಂದನ ಲೇಪಿತನ
ಕೃಪೆಯಿಂದ ಸದ್ಭಕ್ತರ ಪೊರೆವವನ ೨

ಸುರಮುನಿ ನಮಿತ ಸರ್ವೇಶ್ವರನ
ಭರಿತ ಸಿದ್ಧಿಯ ನೀವ ಭವಹರನ
ಭಾವಜ ವಿಷಯಕೆ ಸಿಲುಕದನ
ಚೆಲುವ ಭಾವದಿಂದೊಪ್ಪುವ ಶುಭಕರನ ೩

## ೯

ಪಾಶಮೋದಕ ಪರಶುಧರ ಗಿರಿಜೇಶ ಅಜಹರಿ ಪೂಜಿತ
ವಾಸ ವಾರ್ಚಿತ ಶರಣ ಜನ ಸುರಧೇನು
ಶ್ರೀ ಗಣನಾಯಕ ೧

ಉಂಡಲಿಗೆ ಚಕ್ಕುಲಿಯ ಕರಜಿಗೆ ಮಂಡಿಗೆಯ ಪರಿಸೇವಿತ
ಚಂಡ ಕಿರಣ ಪ್ರಕಾಶ ತೇಜೋದ್ಧಂಡ ಶ್ರೀ ಗಣನಾಯಕ ೨

ಕಾಲ ಕಡಗ ಕಿರೀಟ ಕುಂಡಲ ಜಾಲ ಮಣಿಗಣ ಭೂಷಿತ
ನೀಲ ಮೇಘ ನಿಭಾಂಗ ಮಂಗಲಕಾಯ
ಶ್ರೀ ಗಣನಾಯಕ ೩

ಕರಿವದನ ಉರಗೇಂದ್ರ ಭೂಷಣ
ತರಣಿ ಶಶಿ ಹರಿ ಲೋಚನ
ನಿರುತ ನಂಬಿದ ಜನರ ವಿಘ್ನವ ಪರಿವೆ
ಶ್ರೀ ಗಣನಾಯಕ ೪

ಕೇಡಲ ಸರಹಿನಲಿ ವಾಸವಮಾಡಿ ಭಕ್ತರಿಗಿಷ್ಟವ
ನೀಡಿ ಅರ್ಚಿಸಿ ಕೊಂಡು ನೀ ಕೃಪೆ
ಮಾಡೋ ಶ್ರೀ ಗಣನಾಯಕ ೫

## ೧೦

ಪಾಹಿ ಶ್ರೀ ಗಣನಾಯಕ ಪಾವನ ರೂಪ
ದೇಹಿ ನಿರ್ವಿಘ್ನದಾಯಕ ಪ

ಅಂಕುಶ ಪಾಶ ಮೋದಕ ಅಭಿಯಾಕಾರ
ಶಂಕರ ಸುಕುಮಾರಕಾ
ಲಂಕಾಧಿಪತಿ ಗರ್ವಾಹಂಕಾರವ ಮುರಿದು
ಕುಂಕುಮ ಚಂದನಾಲಂಕೃತನಾಗಿ ನಿಶ್ಶಂಕೆಯೊಳಿಹ
ಬಿರುದಂಕ ಕೃಪಾಲಯ ೧

ಶುಂಡಾಲ ವದನ ನಿನ್ನ ಸಿರಿ ಪಾದಕೆ
ಮಂಡೆಯೆರಗುವೆ ನಾಮುನ
ಖಂಡ ಪರಶು ಜಾತಾ ಉಂಡಲಿಗೆಯ ಪ್ರೀತ ।
ಮಂಡಲದೊಡೆಯ ಮಾರ್ತಾಂಡ ಕಿರಣ
ಮಾರ್ತಾಂಡ ಕಿರಣ ಭಯ
ಖಂಡಿತ ಗಣಪ ಪ್ರಚಂಡ ವಿನಾಯಕ ೨

ಸಾಸಿರ ನಾಮದೊಡೆಯ ಸಕಲಗುಣ

ದೋಷರಹಿತ ಉರ್ವಿಯ

ಭೂ ಸುರಾರ್ಚಿತ ಪಾದ ವಾಸವ

ಸೇವಿತಕೇಶವ ಭವ ಕಮ

ಲಾಸನ ಪೂಜಿತ ವಾಸ ಕೇದಿಗೆ

ಪುರಾಧೀಶ ಗಣೇಶನೆ ೩

## ೧೧

ಮುದದಿಂದ ನಾ ಕೊಂಡಾಡುವೆನು ಅನವರತ

ಮಧುಪುರದ ವಿಘ್ನೇಶ ದೇವ ಜಗದೀಶ ಪ

ಪರಬ್ರಹ್ಮರೂಪ ವೇದಾಂತ ಸಾರಪ್ರಿಯ

ಪುರುಷಪಿತನಮಿತ

ದಿವ್ಯಾಂಘ್ರಿ ಕಮಲ ಗಿರಿಜಾತೆಯಣುಗಾದಿತ್ಯ ಕೋಟಿ ಪ್ರಕಾಶ

ಕರಿವದನ ಕರುಣನಿಧಿ ಸಮುದ್ರ ಬಹುಕ್ಷಿಪ್ರ ೧

ಭರದಿಂದ ರಕ್ಕಸ ಪುರವನು ದಹನಮಾಡೆ

ಹರ ಮೊದಲು ನಿಮ್ಮನು ಅರ್ಚಿಸಿ ಮೆಚ್ಚಿಸಿ

ಹರಿ ವಿರಂಚಾದಿಗಳೆಲ್ಲ ಜಯ ಜಯವೆನಲು ವರವಿತ್ತು

ಮೆರೆದೆ ಗಣನಾಥ ವಿಖ್ಯಾತ ೨

ಅರರೆ ನಿಮ್ಮ ಮಹಿಮೆಯನು ಪೊಗಳಲೆನಗಳವಲ್ಲ

ಧರಣಿಯ ಪೊತ್ತಿಹ ಶೇಷಗರಿದು

ಹರನಸುಕುಮಾರ ಸಕಲಾಗಮಕೆ ಸಾಕಾರ

ಧರೆಯೊಳ್ ಮಧುಪರ ವಿಘ್ನೇಶ ೩

## ೧೨

ಶರಣು ಗಿರಿಜಾ ಸುತನೆ ಸುರರಾಜ ಪೂಜಿತನೆ
ಶರಣು ಇಭ ಆನನೆ ದುರಿತಾಪ ಹರನೆ ಪ

ಶರಣು ಗಣನಾಯಕನೆ ಮೂಷಿಕ ಸುವಾಹನನೆ
ಶರಣು ಪಾಶಾಂಕುಶನೆ ಪರಮ ಪಾವನನೆ ಶರಣು ಶರಣು ೧

ಶುಕ ಪಿತನ ವಚನ ಮುಂಚದ ಮುನ್ನ
ಲಿಖಿತದೊಳುವೇದವ ಬರೆದ
ಶಕುತಿ ಸಾಹಸನೆ ಸಕಲ ದೇವರ ಕೈಯ
ಪೂಜೆಯನು ಕೈಗೊಳುತ
ಅಖಿಳಾಂತ ಚರಿತ ಗಜ ಮುಖನೆ ಸಲಹೆನ್ನ
ಶರಣು ಶರಣು ೨

## ೧೩

ಶ್ರೀ ಗಣೇಶ ಕಂಡೆ ನಿನ್ನ ಕಮಲದಂಘ್ರಿಯ
ಈಗ ಪಾಲಿಸೆನಗೆ ನೀನೆ ಮನದಭೀಷ್ಟ ಸಿದ್ಧಿಯ ಪ

ಚಂಡ ಸೂರ್ಯನಂತೆ ಮೆರೆವ ಕಾಯ ಕಾಂತಿಯ ಅ
ಖಂಡಲಾದಿಬ್ರಹ್ಮ ವಿಷ್ಣು ಪೂಜಿತಾಂಘ್ರಿಯ
ಸುಂಡಲಿಂದ ಮೆಲುವ ಪಂಚಭಕ್ಷ್ಯರಾಶಿಯ
ಖಂಡಿಸಿರ್ದ ಇಕ್ಷು ಕಡಲೆ ಮೋದಕ ಪ್ರಿಯ ೧

ಭಾರಿಪುರುಷ ಇಲಿಯನೇರಿ ನಿಖಿಲ ಕೈದುವ
ತೋರಕರದಿ ಪಿಡಿದು ಬರುವ ಭಕ್ತ ವಿಘ್ನವಾ
ಚಾರಿವರಿತು ತರಿದು ತರಿದು ಓರೆ ಮಾಡುವ
ಧೀರ ವಿಘ್ನರಾಜಗೆಣೆಯ ಕಾಣೆಪೋಲುವ ೨

ಚಂದ್ರ ಸೂರ್ಯಾಗ್ನಿ ನಯನದಿಂದ ಮೆರೆವನ ಶ್ರೀ
ಗಂಧ ಚಂದನಾಗರು ಸರ್ವಾಂಗ ಲೇಪನ
ಚಂದ್ರ ಶೇಖರ ನರಸಿಯ ಮುದ್ದು ಕಂದನ ಜನರು
ಬಂದು ನೋಡಿರೆಲ್ಲ ಮಂಡಲಮನೆಯ ಬೆನಕನ ೩

## ೧೪

ಹರತನ್ನ ಕರದಲಿ ಪ್ರಾಣಲಿಂಗವನು
ಧರಿಸಿಪ್ಪನೆಂಬುದ ಕೇಳಿ ರಾವಣನು
ತರುವೆನೆನುತ ಪೋಗಿ ಭಜಿಸೆ ಶಂಕರನ
ಕರುಣಿಸಲಾತನ ಮನದಭೀಷ್ಟವನು
ದುರುಳ ಖಳತಾ ಕೊಂಡು ಲಿಂಗವ
ಪುರಕೆ ಗಮಿಸುವ ವ್ಯಾಳ್ಯದಲಿ ವಿಧಿ
ಸುರಪ ಮುಖ್ಯ ಅಮರರು ನಿಮ್ಮಯ
ಸ್ಮರಿಸೆ ಮೆಚ್ಚಿದ ಪಾರ ಮಹಿಮನೆ
ಮೊರೆ ಹೊಕ್ಕೆ ನಿಮ್ಮ ಪಾದವನು ವಿಘ್ನೇಶ ೧

ಕರುಣಿಸೋ ಎನ್ನ ವಾಂಛಿತವ ಸರ್ವೇಶ
ಪರಮ ಪಾವನ ವೇಷ ಮುನಿ ಜನರ ಪೋಷಾ
ನಿರುತ ಭಕ್ತ ವಿಲಾಸ ನಿರೂಪ ಮಹೇಶ
ಹರಿ ಮುಂತಾದವರೆಲ್ಲ ನುತಿ ಸುತ್ತಲಿಂದು
ಕರಿವಕ್ತ್ರ ನೀ ಕೇಳು ಪರಮೇಶನಂದು
ಕರದ ಲಿಂಗವ ನಿತ್ತನಾ ದಶಶಿರಗೆ
ವರ ದೈವ ದ್ರೋಹಿ ರಕ್ಕಸನಾತನಿಂಗೆ
ವರ ಮಹಾಲಿಂಗವದು ಸೇರಲು
ಹರಣಗೊಂಬುದು ನಮ್ಮನಿದನು
ತಿರುಗಿಡುವಯತ್ನವನು ಪೇಳಿಯೋ
ಪೊರೆಯ ಬೇಕೆನಲ ಭಯನಿತ್ತ ನಾ ಮೊರೆಹೊಕ್ಕೆ ೨

ಇವಗೆ ಚಕ್ರವನಾಗಹರಿ ಪಿಡಿದಿರಲು
ಧನುಜೇಶ ಸಂಧ್ಯಾವಂದನೆಗೆ ಯೋಚಿಸಲು
ಘನ ಮಹಿಮನೆ ನೀನು ವಟುರೂಪಿನಿಂದ
ಮಣಗುತ್ತಿರಲು ಕಂಡು ಖಳ ಕರದಿಂದ
ಅಣುಗನಿಮ್ಮಯ ಮಹಿಮೆಯರಿಯದೆ ಪೇಳೆ
ವಿನಯದಿಂ ಲಿಂಗವನು ಖಳಬರುವ
ತನಕ ಕರದಲಿ ಪಿಡಿದಂತಹ ಪರಮ ಮಹಿಮನೆ ೩

## ಶಾರದಾ ಸ್ತುತಿ

### ೧೫

ಪಾಲಿಸು ನಮ್ಮಮ್ಮ ಮುದ್ದು ಶಾರದೆ ನಮ್ಮ
ನಾಲಿಗೆ ಯೊಳು ತಪ್ಪುಬಾರದೆ
ನೀಲ ಕುಂತಳೆ ತಾಯೀ ನಿನ್ನ ನಂಬಿದೆ ಕಾಯೆ ಪ

ಅಕ್ಷರಾಕ್ಷರ ವಿವೇಕಿಯೇ ನಿಮ್ಮ
ಕುಕ್ಷಿಯೊಳೀರೇಳು ಲೋಕವೆ
ಸಾಕ್ಷಾತ್ ಸ್ವರೂಪಿಣಿ ಮೋಕ್ಷದಾ
ಯಕಿಯೆ ತಾಯೆ ಪಾಲಿಸಮ್ಮಮ್ಮ ೧

ಸರ್ವಾಲಂಕಾರ ಮೂರ್ತಿಯ ಚರಣ ಭಜಿ
ಸುವೆ ಕೀರ್ತಿಯ ಗುರುಮೂರ್ತಿ ಪರಮಾ
ನಂದದೊಳ್ ಪಾಲಿಸಮ್ಮಮ್ಮ ೨

ಶೃಂಗಪುರದ ನೆಲೆವಾಸಿಯೆ ನಿಮ್ಮ
ಸಂಗೀತ ಶಾಸ್ತ್ರ ವಿಶಾಲಯ
ಭೃಂಗ ಕುಂತಳೆ ತಾಯೆ
ಭಳಿರೆ ಬ್ರಹ್ಮನರಾಣಿ ಪಾಲಿಸಮ್ಮಮ್ಮ ೩

## ೧೬

ಪಾಲಿಸು ಶಾರದೆ ಪರಮ ಪಾವನೆಯೆ
ಪಾಲಿಸು ಎನ್ನನು ಪರಬ್ರಹ್ಮನ ಸತಿಯೆ ಪ

ತವಪಾದ ಕೃಪೆಯಿಂದ ಕನ್ನಡ ನುಡಿಯಲಿ
ವಿವರಿಸಿ ಪೇಳುವೆ ಭಾಗ್ಯ ಸನ್ನುತಿಯ
ತವಕದಿ ಬಲಿದೀಗ ಕೊಡು ಸರಸ್ವತಿಯೆ
ರವಿ ಕೋಟಿ ತೇಜ ವಿರಾಜಿತಾತ್ಮಿಕೆಯ ೧

ಜಲಕೆ ಕ್ಷೀರವು ಮುಟ್ಟಿದಂತೆನ್ನ ಮನದಿ
ಸುಲಲಿತ ವಾಕ್ಯವ ಪಾಲಿಸು ದಯದಿ
ಜಲಜ ಭವನರಾಣಿ ಕರದಿ ಪುಸ್ತಕವೇಣಿ
ಕಲಕೀರ ವಾಣಿ ಕಪಿಲೆ ಸುವಾಣಿ ೨

ಧರೆಯೊಳಧಿಕವೆಂಬ ಕೊಡಚಾದ್ರಿಯೊಳಗೆ
ಸ್ಥಿರವಾಗಿ ನೆಲೆಸಿದ ಮೂಕಾಂಬೆ ಎನಗೆ
ಕರುಣಿಸಿದದಾರನು ವರಿಸಿದರೆನಗೆ
ಹರುಷದಿ ಪಾಲಿಸೆ ಪರಮ ಪಾವನೆಯೆ ೩

## ೧೭

ಬೆಳಗಿರೇ ಆರತಿಯ ಮುತ್ತೈದೆರೆಲ್ಲರೂ ಕೂಡಿ
ಬೆಳಗಿರೇ ಆರತಿಯ ಪ

ಶ್ರೀ ಗುರು ಗಣಪತಿ ಚರಣಾರವಿಂದಕೆ ಬಾಗಿ ಮಣಿದು
ಶಾರದಾಂಬಿಕೆ ಅಮ್ಮನ ಆಗಮೋಕ್ತದಿ ಪೂಜಿಸುವೆ
ಚರಿತವನೀಗಳು ಕರುಣಿಸುತಿಹ ವಿಘ್ನರಾಜಗೆ ಮೊದಲ
ಆರತಿಯ ಬೆಳಗಿರೆ ೧

ಸರಸಿಜೋದ್ಭವನ ರಾಣಿ ಕಲ್ಯಾಣಿ
ಕರದಿ ಪುಸ್ತಕಧಾರಿ ಕಂಠದ ಮಣಿಹಾರ ವರದ ಚೌಷಷ್ಠಿ
ವಿದ್ಯೆಗಧಿಕಾರಿ ಸುರವಂದ್ಯೆ ಸುಪ್ರದಾಯಕಿ ಶಾರದಾಂಬಿಕೆಗೆ ೨

ಸರಸಿಜಧಾರಿ ಮರಿ ದುಂಬಿ ಗುರುಳಿನ ಮಿಂಚಿನ ಫಣಿವೇಣಿ
ಪೆರೆನೊಸಲ ಸ್ಮರನ ಚಾಪದ ಪುರ್ಬಿನೊಳು ಮೆರೆವ
ಕಸ್ತೂರಿಯ ತಿಲಕದಿಂದೊಪ್ಪುವ
ಶಾರದಾಂಬಿಕೆಗೆ ಹರಳಿನಾರತಿಯ ಬೆಳಗಿರೆ ೩

ಬಿರು ಮುಗುಳಿನ ಚಂಪಕದಂತೆ ನಾಸಿಕ
ಮೆರೆವ ಶ್ರೀ ಕರ್ಣವು ಸುವರ್ಣದ ಕದಪು ಕನ್ನಡಿಯವೋಲ್
ಪೊಳೆವ ಪವಳದುಟಿ ದಂತ ಪ್ರಜ್ವಲಿಸುವ ಶಾರದಾಂಬಿಕೆ
ಲೋಕಮಾತೆಗೆ
ಪರಿಮಳ ದಾರತಿ ಬೆಳಗಿರೆ ೪

ಪರಿಪೂರ್ಣ ಚಂದ್ರ ಬಿಂಬದ ವೋಲು ಮುಖಕಾಂತಿಯು
ಮರೆಯಲು ಗರಳಸ್ವರವು ಕೋಗಿಲೆಯಂತೆ ನಳಿದೋಳೆರಡು
ಬೆರಳು ಸಂಪಿಗೆಯ ಸರಳಿರುವಂತೆ ಮೆರೆವ ಈ
ಶಾರದಾಂಬಿಕೆಗೆ ಹವಳದಾರತಿ ಬೆಳಗಿರೆ ೫

ಬಟ್ಟ ಕುಚವು ನುಣ್ಮಟ್ಟಿನ ಮೇಲಕೆ ತೊಟ್ಟ ಕುಪ್ಪಸ
ಕಿರುಬಸುರಿನ ಸುಳಿನಾಭಿ
ಇಟ್ಟ ವೋಲೆ ತ್ರಿವಳಿಯ ಹರಿಮಧ್ಯ ನಡುವಿಗೆ
ಉಟ್ಟ ಪೀತಾಂಬರದ ಶ್ರೀ ಶಾರದಾಂಬಿಕೆಗೆ
ಬಟ್ಟಲಾರತಿ ಬೆಳಗಿರೆ ೬

ಮಂದಗಮನೆ ಜಗದ್ವಂದ್ಯೆಗೆರಗಿ ನಾ ಮುಂದೆ ಪೇಳುವ
ಪರಿಪರಿ ವಸ್ತ್ರ ಭೂಷಣದಿಂದ ಮೆರೆವ ಮಣಿ
ಮಕುಟ ಫಣಿಗೆ ಶ್ರೀಗಂಧ ಕುಂಕುಮವಿಟ್ಟ ಶಾರದಾಂಬಿಕೆಗೆ
ಕುಂದಣ ದಾರತಿ ಬೆಳಗಿರೆ ೭

ಕತ್ತಿಗೆ ಚಿಂತಾಕ ಸರಪಣಿ ಸರಿಗೆಯು ಪುತ್ಥಳಿ ಹಾರಹೀರಾವಳಿ
ಮುತ್ತಿನಸರ ಚಿನ್ನದಸರ ಚಕ್ರಸರ ಜ್ವಲಿಸುತ್ತಲಿರುವ
ಮೆರೆವ ಶ್ರೀ ಶಾರದಾಂಬಿಕೆಗೆ ಮುತ್ತಿನಾರತಿ ಬೆಳಗಿರೆ ೮

ಥಳ ಥಳಿಸುತಲಿಹ ಬಿಲ್ವಸರ ಪವಳದ ಸರ ಹೊಳೆವ
ರತ್ನದಸರ ಪದಕದಸರವು ಏಕಾವಳಿಸರ ಕೊರಳೊಳಗಳ
ಮತ್ತಿಹ ಶಾರದಾಂಬಿಗೆ ನಳಿನ ದಾರತಿ ಬೆಳಗಿರೆ ೯

ಹರಳು ಮೌಕ್ತಿಕದಿಂದ ಮೆರೆವ ಮೂಗುತಿ ಚಂದ್ರನ
ಹರಳು ಚೌಲಿಯ ತುಂಬುಪರಿಮಳಿಸುವ ಪೂವು
ಸರವು ಕೇತಕಿ ಗರಿ ಕರಿ ಮಣಿ ಕಟ್ಟಾಣಿ
ಕೊರಳಿಗೆ ಅಡ್ಡಿಕೆ ಮಲುಕು ಶಾರದಾಂಬಿಕೆಗೆ
ಹರಳಿನಾರತಿ ಬೆಳಗಿರೆ ೧೦

ಸುತ್ತಿದ ಮುಂಗೈ ಸರಿಗೆಯು ನಾನಾವಿಚಿತ್ರದಿ
ಮೆರೆವಚೂಡವು
ಕೈ ಚಳಕಿಗೆ ಕೆತ್ತಿದ ಹರಳಿನ ವಡ್ಯಾಣ ನಡುವಿಗೆ
ಅಳವಟ್ಟು ರೂಢಿಸಿ ಬಕುತರ ಪಾಲಿಪ ಶಾರದಾ
ದೇವಿಗೆ ಆರತಿ ಬೆಳಗಿರೆ ೧೧

ಥರಥರ ನವರತ್ನ ಖಚಿತದಿಂದೊಪ್ಪುವ ಕರವೆರಡರ
ಭುಜ ಕೀರ್ತಿ ವಜ್ರದೊಳ್ ಬಿರಿದ ತೋಳ್ ಬಳೆವಾಲೆ
ಕಡಗ ಕಟ್ಟು ಬಳೆಯು ಕಂಕಣ ಹಿಂಬದಿಯಿಂದ ಲೊಪ್ಪಿದ
ಶಾರದಾದೇವಿಗಾರತಿ ಬೆಳಗಿರೆ ೧೨

ರನ್ನದ ಸರಗಂಟೆ ಸುತ್ತಲು ಕಾಲೊಳು
ಚಿನ್ನದ ಕಿರುಗೆಜ್ಜೆ ಅಂದಿಗೆ
ಗಿಲಿಗಿಲಿರೆನ್ನಲು ಹಾರ ಹೊಯ್ದೊಡರು ಬಿರಿಚೊಕ್ಕ ಚಿನ್ನದ
ಸರಪಳಿ ಭಾರಿಗಳ ನೆಳೆವ ಸುಪ್ರಸಂಗನೆಗಾರತಿಯ ಬೆಳಗಿರೆ ೧೩

ಪಿಲ್ಲಿಯುಕಿರು ಬೆರಳಲಿ ಮಿಂಚಿನಂತಿಹುದಿಲ್ಲಹರಳು
ಮಂಚಿಕೆ ಕೊಡೆ ಹೊಳೆಯುವ ಚೆಲುವ ಕಾಲುಂಗರ
ವರ ವೀರ ಮುದ್ರಿಕೆಯಲಿ ಒಪ್ಪುತಲಿಹ ಶಾರದಾಂಬಿಕೆಗೆ
ಮಲ್ಲಿಗೆ ಯಾರತಿಯ ಬೆಳಗಿರೆ ೧೪

ಮುತ್ತಿನ ಬೊಂಬೆಯೆಂತೊಪ್ಪುವ ನಲಿನಲಿಸುತ್ತಲಾಭರಣ
ಭಾರಕೆ ಶಾರದೆ ಒಲಿಯುತ ದೇಹದ ಕಾಂತಿ ಯಿಂದ ದಿಕ್ಕನು
ಬೆಳಗುತ ಮೋಹಿಪ ಶಾರದಾಂಬಿಕೆಗೆ
ಮುತ್ತೀನಾರತಿಯ ಬೆಳಗಿರೆ ೧೫

ಕರುಣಾಂಬೆ ಕಾಶ್ಮೀರ ಪುರವರಧೀಶ್ವರಿ ಪರಮಹಂಸವರ್ಯ
ಪರಿವ್ರಾಜಕಾಚಾರ್ಯ ಪರಿ ಪರಿ ರುದ್ರನ ಪೋಲ್ವ ನಿಶದದುತಿ
ಶ್ರೀಗುರು ಮೂರ್ತಿ ಶಂಕರರಿಗೊಲಿದ ಶಾರದೆಗೆ
ಪರಿಪರಿ ಆರತಿಯ ಬೆಳಗಿರೆ ೧೬

ಮರುಗ ಮಲ್ಲಿಗೆ ಜಾಜಿ ಸುರಿಗೆ ಸಾವಂತಿಗೆ ಪರಿಪರಿ
ಪುಷ್ಪ ಧೂಪ ದೀಪಗಳಿಂದ ಸಡಗರದಿಂದಲಿ ಸಮರ್ಪಿಸಿ
ಜಯ ಜಗದರೂಪೆ ರಕ್ಷಿಸು ಮಾತಾಯೆ ಕರುಣಿಸು ಎಂದು
ಕಡು ಬೇಡಗಿನ ಆರತಿಯ ಬೆಳಗಿರೆ ೧೭

ಕಡುಬು ಕಜ್ಜಾಯ ಪಾಯಸಕ್ಷೀರ ದಧಿಘೃತತಡೆಯಿಲ್ಲ
ಹೇಮ ಪಾತ್ರದಿ ತುಂಬಿ ದೇವಿಗೆ ಕರಿಯ ಕಬ್ಬಿನ ಕೋಲು
ಒಡೆದ ತೆಂಗಿನ ಕಾಯಿ ಅರ್ಪಿಸಿ ಶಾರದಾದೇವಿಗೆ
ಆರತಿಯ ಬೆಳಗಿರೆ ೧೮

ನೂತನೂತನ ಗಡಿಗೆಯ ಹರಿವಾಣ ನೇವೇದ್ಯಜಗನ್ಮಾತೆ
ತಾಬೂಲವನಿತ್ತು ಶರಣೆಂದು ನೂತರದಾರತಿಯ ಬೆಳಗಿರೆ ೧೯

ತಾಳ ಮದ್ದಲೆ ಸಾಮ ವೇದ ಘೋಶಗಳು
ತಮ್ಮಟೆ ಭೇರಿ ಬುರುಗು
ಬಿರುದು ಹೆಗ್ಗಳಯ ಭಾರಿಯ ಕೊಂಬು
ಶಂಖ ಮೃದಂಗವು
ನಿಸ್ಸಾಳ ಭೇರಿಗಳಿಂದ ಸೇವಿಸಿ ದೇವಿಗೆ
ನೀಲದಾರತಿಯ ಬೆಳಗಿರೆ ೨೦

ಬಾರಿಸಿ ಬಿರುದನು ಭರಿತ ಛತ್ರಗಳಿಂದ
ಭೋರಿಡುವವಾದ್ಯವು
ಉಡುಕು ಕೊಳಲು ತಂಬೂರಿ ತಾಳಗಳಿಂದ ಸ್ವರವೆತ್ತಿಪಾಡಿ
ನೃತ್ಯಾಂಗನೆಯರ ಸೇವೆಗೈಸಿ ಶಾರದೆಗೆ ಮೆರೆವ
ಆರತಿಯ ಎತ್ತಿರೆ ೨೧

ಪಾಲುತ ನಲಿನಲಿದಾಡುತ ವರಗಳ
ಬೇಡುತ ಪೂಮಳೆಗರೆಯುತ
ಅಮರರು ನೋಡುತ ದೇವ ದುಂದುಭಿಯನು
ಹೊಡೆದು ಕೊಂಡಾಡಿ
ವಂದಿಸಿದರು ಶಾರದಾಂಬಿಕೆಗೆ ಹೂವಿನಾರತಿಯ ಎತ್ತಿರೆ ೨೨

ವರದಾಂಬೆ ಶಾರದಾಂಬಿಕೆಯನು ಪೂಜಿಸಿದವರಿಗೆ ಪರಿಪರಿ
ವಿಧ್ಯವ ಕರುಣಿಸೆ ನರರಿಗೆ ಇಷ್ಟಾರ್ಥದ ವರವಿತ್ತು ಕೊಡುವಳು
ಪರಮನ ಹೃದಯದಿ ನೆಲೆಗೊಂಡು ಶಾರದಾಂಬಿಕೆಗೆ
ಮರಕತದಾರತಿ ಬೆಳಗಿರೆ ೨೩

ಮರುತ ಸುತನ ಕೋಣೆವಾಸ ಲಕ್ಷ್ಮೀಶನ
ಹಿರಿಯಮಗನ ರಾಣಿ
ಶಾರದಾಂಬಿಕೆಯ ಸುರಮುನಿ ಜನರಿಗಿಷ್ಟಾರ್ಥವ ವರವಿತ್ತು
ಸ್ಥಿರವಾದ ಶೃಂಗೇರಿ ಪುರವರವಾಸಿನಿಗೆ
ಮಂಗಳಾರತಿಯ ಬೆಳಗಿರೆ ೨೪

## ೧೮

ಬೇಡುವೆ ನಿಮ್ಮ ಪಾದಕ್ಕೆ ಕರಗಳ ನೀಡಿ
ಶಾರದಾಂಬ ದಯ
ಮಾಡಿ ಪಾಲಿಸು ಮನದಿಷ್ಟಾರ್ಥವ
ಹರುಷದಿ ಶಾರದಾಂಬ ಪ

ಕರದಿ ಪುಸ್ತಕ ವೇಣಿ ಕಮಲ ಭವನ ರಾಣಿ ಶಾರದಾಂಬ
ಕರುಣದಿ ಸಲಹೆನ್ನ ಕಾಮಿತ ಫಲದಾಯಕಿ ಶಾರದಾಂಬ ೧

ಸುರಮುನಿವಂದಿತೆ ಸಕಲ ಜಗನ್ಮಾತೆ ಶಾರದಾಂಬ
ಪರಮ ಮಂಗಳ ಮೂರ್ತಿ ಪಾವನ
ಕೀರ್ತಿ ಶಾರದಾಂಬ ೨

ಸೃಷ್ಟಿಗಧಿಕವಾದ ಶೃಂಗೇರಿ ಪುರವಾಸಿ ಶಾರದಾಂಬ
ಮುಟ್ಟಿ ಭಜಿಪೆ ನಿಮ್ಮ ದಯವಿಟ್ಟು
ಕೃಪೆಮಾಡು ಶಾರದಾಂಬ ೩

# ದೇವದೇವತೆಗಳ ಸ್ತುತಿ

## ೧೯

ಅಂಬುಧಿಶಯನ ಪೀತಾಂಬರಧರ ಕಮಳಾಂಬಕ ಸಿರಿರಮಣ
ನಂಬಿದ ಭಕ್ತರ ಬೆಂಬಿಡದಿಹನೆಂಬುದಕೆ ಸಹಜಗುಣ ಪ

ಉತ್ತಾನ ಪಾದನ ಬಳಿಗೆ ಧ್ರುವನು
ಒರಲುತ್ತಾ ಸಭೆಗೆ ಬರಲು
ಮತ್ತೆ ನೀಬಾರೆಂದು ಎತ್ತಿ ತೊಡೆಯಲಿಟ್ಟು
ಒತ್ತಿ ಮುದ್ದಿಸುತಿರಲು

ಮತ್ತ ಕಾಶಿನಿ ಮಲತಾಯಿ ಸುರಚಿ
ಹಿಡಿದೊತ್ತಿ ವನಕೆ ನೂಕಲು
ಎತ್ತಲು ಏನೆಂದರಿಯದ ಬಾಲಗೆ ಇತ್ತುವರವ ನೀನು
ಪೊರೆದೆಯೋ ಧ್ರುವನ ೧

ನೆರದ ಬಾಲಕರೊಳು ತರಳ ಪ್ರಹ್ಲಾದ
ಹರಿನಾಮವನು ಬರೆಯೆ
ಕರೆದು ಹಿರಣ್ಯಕ ಹರಿಪಗೆ ನಮಗೆಂದು
ವಿರಚಿಸೆ ಕೇಳದಿರೆ
ಮುರಹರ ಮಧುಸೂಧನನೆಂದು ಬರೆಯಲು
ದುರುಳಬಾಧಿಸೆ ಮಗನ
ಪರಮ ಪಾವನ ಮೂರ್ತಿ ಭರದಿ ಕಂಬದಿ ಬಂದು
ವರವಿತ್ತು ಪೊರೆದೆಯೋ ಪ್ರಹ್ಲಾದನ ೨

ಶಾಪವನೀಯ ಲಗಸ್ತ್ಯನಿಂದ್ರದ್ಯುಮ್ನ ಭೂಪತಿ ಗಜವಾಗಲು
ತಾಪತೃಷೆಗಳಿಂದ ಮಡುವಿನೊಳು ಸುಳಿಯಲು
ಕೋಪದಿ ನೆಗಲ್ವಿಡಿಯೊ
ದ್ವಿಪನ ಬಲಗುಂದೆ ಶ್ರೀಪತಿ ಕಾಯೆಂದು
ಗುಪಿತದಿ ಮೊರೆಯಿಡಲು
ನೀಪರಮಾತುಮ ತಿಳಿದು ಬೇಗದಿ ಬಂದು ಪಾಪಿನೆಗಳ
ಸೀಳ್ದು ಪೊರೆದೆಯೋ ಗಜವ ೩

ಧರ್ಮಜಾನುಜರೊಡಗೂಡಿ ವನದಲಿರೆ
ಧರ್ಮವೇ ಜಯವೆನಲು
ದುರ್ಮತಿಗಳ ನುಡಿಗೇಳು ದೂರ್ವಾಸನು
ಮರ್ಮವನರಿತು ಬರಲು

ಧರ್ಮಭೂಪತಿ ಕರ್ಮಸಾಕ್ಷಿ ತೊಲಗುತಿದೆ
ಅನ್ನವನೀಯೆನಲು
ನಿರ್ಮಲಾತ್ಮಕ ರಕ್ಷಿಸೆನಲು ಧರ್ಮದಿಂದ
ಪೊರೆದೆಯೋ ಪಾಂಡುವರ ೪

ಹರಿಭಕುತ ರುಕುಮಾಂಗದ ಭೂಪತಿ
ಹರಿವಾಸವರವ ಮಾಡಲು
ದುರುಳೆ ಮೋಹಿನಿ ಅಜನೆಂದ ಮಾತಿಗೆ
ಭೂಪನನೊಲಿಸಿ
ಸುಖದೊಳಿರಲು ತರುಣ ವ್ರತವ ಕೆಡಿಸಲು
ನಿಜತರಳನ ಶಿರವನರಿಯ
ಬೇಡಲು ಹರಿಕರುಣಿಸು ಎಂದು ಕೊರಳ
ನರಿಯೆ ಬಂದು ವರವಿತ್ತು
ಪೊರೆದೆಯೋ ವೇಣುಗೋಪಾಲ ೫

## ೨೦

ಅಗಸುತೆ ನಾಗಭೂಷಣ ಪ್ರೀತೆ ಶ್ರೀ ಮೂಕಾಂಬ
ನಿಗಮಾಗಮ ಸಂಸ್ತುತೆ ವಾಗೀಶ್ವರಿ
ಮಿತ್ರೆ ಶ್ರೀ ಮೂಕಾಂಬ ಪ
ಏಕದಂತನ ಮಾತೆ ಲೋಕಕ್ಕೆ ಪ್ರಖ್ಯಾತೆ ಶ್ರೀ ಮೂಕಾಂಬ
ಪಾಕ ಶಾಸನ ನುತೆ ಮೂಕ ದಾನವ
ಮರ್ಧಿನಿ ಮೂಕಾಂಬ ೧

ತದ ಪಾದವ ನಂಬಿ ವಿವರಿಸಿ
ಪೇಳುವೆ ಶ್ರೀ ಮೂಕಾಂಬ
ಭುವನೇಶ್ವರಿ ಶಿವನರಾಣಿ ನೀ ದಯೆತೋರೆ
ಶ್ರೀ ಮೂಕಾಂಬ ೨

ಭೂರಿ ಸನ್ನುತಿ ಭಾಗ್ಯವಿತ್ತೆನ್ನ ರಕ್ಷಿಸೆ ಶ್ರೀ ಮೂಕಾಂಬ
ಘೋರ ಶುಂಭ ನಿಶುಂಭರ ಮಡಹಿದೆ ಶ್ರೀ ಮೂಕಾಂಬ ೩

ಇಳೆಯೊಳಧಿಕವೆಂಬ ಕೊಲ್ಲೂರು ಪುರವಾಸಿ
ಶ್ರೀ ಮೂಕಾಂಬ
ಒಲಿದೆನ್ನಮನದಿಷ್ಟಾರ್ಥವ ಸಲಿಸು
ಸದಾಶಿವೆ ಶ್ರೀ ಮೂಕಾಂಬ ೪

## ೨೧

ಇಂದು ಶೇಖರ ರಕ್ಷಿಸೋ ಎನ್ನ ತಂದೆ ಶಂಕರ
ಹಿಂದೆ ಪೊಂದಿದ ದೇಹದ ಮತ್ತಿಂದು ಹಿಡಿಯುತ ಪ

ಹಿಂದೆ ಬಿಸುಟೊಡಲು ಮರು ಕೊಳಿಸಿ ಸಾರಿ ಬಂದುದು
ತಂದೆ ತಾಯಿಯ ಗಣನೆ ಉರ್ವಿಸಿಕವನು ಮೀರಿತು
ಅಂದು ಮೊದಲು ಜನನೀಸ್ತನವನುಂಡು ಪಾಲಸವಿದುದು
ಸಿಂದುವನ್ನು ಮೀರಿ ಹೋಯ್ತು ಇಂದು ಕಂದು ಗೊರಳನೆ ೧

ಬಾಲಕತ್ವದಿ ಕೆಲವು ದಿನ ಕಾಲ ಕಳೆದನು ಮೇಲು
ಯವ್ವನದ ಮಬ್ಬುಗಳದಿ ಸಿಲುಕಲು
ಬಾಲವನಿತೆ ಬಾಳು ಬದುಕಿನೊಳಗೆ ತೊಳಲಿ ಬಳಲಲು
ಕಾಲ ಸವೆದು ಜರೆಯು ಸ್ಥೂಲ
ಕಾಯದೊಳಗೆ ಮುಸುಕಲು
ಕೊಳುವೋದೆ ಯಮಗೆ ಶೂಲ ಪಾಣಿ ನೀಲಕಂಠನೆ ೨

ಎನ್ನದಾನದೆಂಬ ಹಮ್ಮುವಶದಿ ಸುಮ್ಮನೆ
ಹೊನ್ನು ಹೆಣ್ಣು ಮಣ್ಣು ಮೂರು ತನ್ನದೆಂದು ನಂಬುತ
ಎನ್ನ ಸತಿಗೆ ಸುತರಿಗೆಂದು ಬನ್ನ ಬಟ್ಟು ಸಾಯುತ

ಚುನ್ನವಾಡಿ ಪರರನಿಂದಿಸಿ ತನ್ನತಾನೆ ಸ್ತುತಿಸುತಾ ಇನ್ನು
ಭವದಶರಧಿ ಬೇಗೆಯನ್ನು ಈಸಲಾರೆನೋ ೩

ಬಂದ ಭವದಿ ಸಂಸಾರವೆಂಬ ಸಿಂಧು ತೆರೆಯೊಳು
ಮಂದ ಗಜವು ಕುಣಿಯೋಳ್ ಬಿದ್ದು ಏಳಲಾರದಂದದಿ
ಹಂದಿ ಹುಲಿಯ ಕೈಗೆ ಸಿಕ್ಕು ತಿಂದು ತೇಗಿದಂದದಿ
ಕಂದವನಿತೆಯೆಂಬುದೊಂದು ಮೋಹ ಪಾಶದಿಂದಲಿ
ಇಂದ್ರಜಾಲದೊಳಗೆ ಸಿಲುಕಿಮಂದಗೆಟ್ಟು ನೊಂದೆನೋ ೪

ಮಾರ ಮರ್ದನ ನಿನ್ನಯ ನಾಮ ದುರಿತ ಸಂಹರ
ಮರಣ ಕಾಲದೊಳಗೆ ನಾಮಸ್ಮರಣೆ ಯಾದಗುವಂದದಿ
ತರಣಿ ತಮವ ಕಡಿಸಿ ಧರೆಯ ಬೆಳಗುವಂತೆ ಹೃದಯದಿ
ಪರಮಗೆ ವರವಿದ್ಯೆಯಿತ್ತು ಪೊರೆದು
ಕರುಣದಿಂದಲಿ ನಿರುತಸಲಹೋ
ಇಕ್ಕೆರಿ ಅಘೋರೇಶಲಿಂಗನೆ ೫

## ೨೨

ಈ ಪುರುಷರೇ ಮರಳುವುದಾದ ಬಳಿಕಿನ್ನು
ಕಾಪುರುಷರು ನರರಿಗೆ ಮೋಕ್ಷವುಂಟೆ ಪ

ಇಂದು ಭಾಸ್ಕರ ತಾರೆ ಮನು ಮುನಿಗಳು
ಕ್ರಮದಿಂದ ಪಕ್ಷ ಮಾಸಂಗಳು
ಒಂದೆರಡಯನ ಋತುವು ತಿಥಿ, ದಿನ, ವಾರ
ಸಂಧಿ ಕರಣ ಲಗ್ನವಮೃತ ವಿಷಗಳೆಂದು ೧

ಅಷ್ಟ ಮೂರುತಿ ಯೋರ್ವನುಳಿವನಲ್ಲದೆ
ಪರಮೇಷ್ಠಿದೇವರ್ಕಳು

ಮರಳುವರು ಇಷ್ಟರೊಳಗೆ ಮನುಜರಿಗಿನ್ನು ಮೋಕ್ಷದ
ಬಟ್ಟೆ ಗಾಣೆನು ಜಗದೀಶನೊಬ್ಬನೇ ಬಲ್ಲ ೨

ಯುಗ ಯುಗ ಸಹ ಕಲ್ಪ ಮಗುಳೆ ಪ್ರಳಯ
ಕಾಲದೊಗುಮಿಗೆಯಿಂದ
ಜನಿಸುತಿಹವು ಮಗಧನಂತರ ಕೋಣೆ ಲಕ್ಷ್ಮೀರಮಣ ನೆನಿಸುವ
ನೋರ್ವ ಸದಾಶಿವ ನುಳಿದಿರ್ದು ೩

## ೨೩

ಎಂದಿಗಾದರು ಭವ ಬಂಧನ ಹರಿಯದು
ನಂದನಕಂದ ಗೋವಿಂದನ ಚರಣಾರವಿಂದದ
ಕರುಣಕಟಾಕ್ಷಗಳಿಲ್ಲದೆ ಪ

ಮಾಟಮರವೆ ಯಂತ್ರ ಮಂತ್ರವು ಪರಸತಿ ಸೋಟವು ದಿವಾರಾತ್ರಿ
ದ್ಯೂತವು ಚದುರಂಗ ದಾಟವು ಪಿತೃ ಮಾತೃ ದ್ವೇಷ
ದುರ್ಜನರೊಡನಾಟ ಕಾಲವಕಳೆವ ಕಾಟಕರಿಗೆ ೧

ಹೇಸದೆ ಪರದಾನದಾಸೆಗೆ ಮುನಿದು ವಿಶ್ವಾಸ ದೊಳಗೆಯೆ
ಪಾತಕವ ಮಾಳ್ಪರಿಗೆ
ಲೇಸುಂಟೆ ಗುರು ಹಿರಿಯರನು ನಿಂದಿಸಿ ನಿತ್ಯ ಬೇಸರಿಸುವ
ಬಲು ಕಪಟ ಕಲ್ಮಷರಿಗೆ ೨

ಬಡಲಿದು ನಿಶ್ಚಯವಲ್ಲ ನೀರಿನಗುಳ್ಳೆ ಒಡೆದಂತೆ
ತನುವಿದೆಂದರಿತು ಸತ್ಕರ್ಮದಿ ನಡೆದು ಶ್ರೀ ಹರಿಯ
ದ್ಯಾನಿಸುವಗೆ ಮುಕ್ತಿಯನು ಕೊಡುವ
ಭೀಮನಕ್ಷೋಣೆ ಲಕ್ಷ್ಮೀಶ ನುಳಿದರ್ಗೆ ೩

**೨೪**

ಎಲ್ಲಿ ಹುಟ್ಟಿದರೇನು ಎಲ್ಲಿ ಮಡಿದರೇನು
ಅಲ್ಲಿಗಲ್ಲಿಗೆ ರಾಮಸ್ಮರಣೆ ಸೊಲ್ಲು ಸೊಲ್ಲಿಗೆ ಬರುತಿರಲು ಪ

ಇಹವು ಎಂಬತ್ತನಾಲ್ಕು ಲಕ್ಷ ಜೀವ ರಾಶಿಯಲ್ಲಿ
ಮರಳಿ ಮರಳಿ ಹುಟ್ಟಿ ಸತ್ತು ಬರುವ ಜನ್ಮದೊಳಗೆ
ಜ್ಞಾನವಿರಲಿ ಕಲ್ಲಿ ಹರಿಯ ಸ್ಮರಣೆ ನಿರುತ ವಿರಲು
ನೀಚ ಜನ್ಮ ದೊರಕಲದುವೆ ಯಾವ ಜನ್ಮದಲ್ಲಿ
ಬಂದರದು ಆನಂದ ೧

ನೊರಜು ಕೀಟ ಸರಿಸೃಪಾದಿ ಕ್ರಿಮಿ ಮೃಗಾದಿ ಪಕ್ಷಿನಿಚಯ
ತರು ಲತಾದಿ ಸಕಲ ಜೀವ ಜಂತು ಜ್ಞಾನ
ವಿರಲಿ ಕಾವ ಜನ್ಮದಲ್ಲಿ ಬಂದರೇನು ಅಳಿದರೇನು
ಹರಿಯ ನಾಮ ಸ್ಮರಣೆ ಜಿಹ್ವೆ
ಕೊನೆಯೊಳಿರಲಿಕದು ಆನಂದ ೨

ಊಚು ನೀಚು ಜನ್ಮವೆಲ್ಲ ಪ್ರಾಚೀನದ ಕರ್ಮ ವಶದಿ
ಕೂಚುಮಾಡಿ ಜನ್ಮಕಿಕ್ಕಿ ಚಾಚಿ ಬರಗುತಿಹಳುಮಾಯೆ ಈಚ –
ರಾಚರಂಗಳೆಲ್ಲ ಬ್ರಾಹ್ಮವೆಂದು ತಿಳಿದವರಿಗೆ
ಕೀಚಕಾರಿ ಕೋಣೆ ಲಕ್ಷ್ಮೀಪತಿಯ ಸ್ಮರಣೆಯೊಂದು ಆನಂದ ೩

**೨೫**

ಏನಯ್ಯ ಕಲಿ ಹನುಮಯ್ಯ
ರಾಮನ ಪಟ್ಟದಾನೆ ಎಂದವರು ಬಿಡದಾದರೇನಯ್ಯ ಪ

ಎಪ್ಪತ್ತು ಏಳ್ಕೋಟಿ ಕವಿನಾಯಕರಿಗೆಲ್ಲ ಮುಖ ರಾಮಗೆನೀ
ಶಿಖಾಮಣಿಯು ಅರ್ಪಣೆಯಿಂದ ಲಂಕೆಗೆಹಾರಿ ಧನುಜರ
ಜಪ್ಪಿದಶೂರ ಉದಾರ ವಯ್ಯಾರ ೧

ಬಿಂಕದಿ ವನವ ಮುರಿದು ದೇವಿಯನು ಕಂಡು ಶಂಕೆಯ
ಬಿಡಿಸಿ ಉಂಗುರವಿತ್ತು ಝುಂಕಿಸಿ ಅಕ್ಷ ಮುಂತಾದ
ರಾಕ್ಷಸರನ್ನು ಟೊಂಕವ ಮುರಿದ ನಿಶ್ಚಂಕ ಬಿರುದಂಕ್ತ ೨

ಅಂದು ಬ್ರಹ್ಮಾಸ್ತ್ರದೊಳಗೆ ಕಟ್ಟಿ ಸುರ ಜಿತುತಂದು
ತನ್ನಯ್ಯನಿಗೋಪ್ಪಿಸಲು
ಮಂದ ಮತಿಯ ದಶವದನ ಕಪಿಯನೋಡಿರೆಂದ ರಂಜಿಸಿದ
ಭಂಜಕ ಅಂಜನ ಪುತ್ರ ೩

ಸುತ್ತಿ ಬಾಲಕೆ ತೈಲ ದುರುವೆಯ ಧನುಜರು ಹೊತ್ತಿಸಿ
ಉರಿಯನೋಡುತಿರಲು ಮತ್ತೆ ನೀ ಪುರವ ಸುಟ್ಟುರುಹಿ
ಮರಳಿಬಂದು ಇತ್ತೆರಾಮಗೆ ಚೂಡಾಮಣಿಯ ನೀಧೀರ ೪

ಅಂದಿನಮಾತು ಹಾಗಿರಲಿ ಈಗಳು ಹೊಸಗುಂದದ
ಸೀಮೆಯ ಬ್ರಾಹ್ಮಣ್ಯವು ಬಂದು ಸರ್ವಾಂಗವೆಲ್ಲವ
ಹಗ್ಗದಿ ಕಟ್ಟಿ ನಂದಿತಳೆಯಲಿ ನಿಂದಿರಿಸಿ ಪೂಜಿಸುವರೋ ೫

## ೨೬

ಏನಿರೇ ನಿಮ್ಮ ಮಾತುಗಳೆಲ್ಲ ತಾನಿದು
ಪುಸಿಬಲು ಆಶ್ಚರ್ಯವೆಲ್ಲ ಪ

ದಿಟ್ಟೇರು ನಿಮಗೇನು ಮಾನಗಳಿಲ್ಲ ಶ್ರೀ ಕೃಷ್ಣನು
ಬಲ್ಲದ ಗಂಡುತಾನಲ್ಲ
ಬಟ್ಟ ಬಯಲ ನುಡಿಯಿದು ದಿಟವಲ್ಲ ಭ್ರಷ್ಟರಾಗಲು
ಬೇಡಿ ಗೋಕುಲಕೆಲ್ಲ ೧

ಅಷ್ಟ ವರುಷವಿನ್ನು ತುಂಬಿದುದಿಲ್ಲ
ಇಷ್ಟರೊಳಗೆ ಹೆಣ್ಣು ಮಮತೆಗಳಿಲ್ಲ
ಸೃಷ್ಟಿಗೆ ಬಲು ಚೋದ್ಯವಾಗಿದೆಯಲ್ಲ
ದೃಷ್ಟಿಗೆ ನಮಗೇನು ದಿಟ ಕಾಣೊದಿಲ್ಲ ೨

ಅಂಗಳ ಇಳಿವುದು ಕಾಣುವುದಿಲ್ಲ ಶ್ರೀ ರಂಗನು
ಬಲರಾಮಗೋವಳರಲ್ಲಿ
ಹಿಂಗದೆ ಮನೆಯೊಳಗಾಡುವರೆಲ್ಲ
ಮಂಗಳಮಹಿಮ ಲಕ್ಷ್ಮೀಶನೇಬಲ್ಲ ೩

## ೨೭

ಏನೇ ಗೋಪಮ್ಮ ಕೇಳೆ ನಮ್ಮಮ್ಮ ಬಾಲ
ಕೃಷ್ಣನ ಬಾಧೆ
ತಾಳಲಾರೆವು ನಾವು ನಾಳೆ ಗೋಕುಲದಿಂದ
ಪೋಗುವೆವಮ್ಮ ಪ

ಉದಯವಾಗದ ಮುನ್ನ ಬರುವ ಕಣಮ್ಮ
ಕದವ ಬಾರಿಸಿ ಒಳಪೊಕ್ಕ ಕಣಮ್ಮ
ಮೊದಲೆನ್ನ ಮಗಳ ತಕ್ಕೈಸಿದನಮ್ಮ
ಸದರದಲಿ ಮೊಸರನೆಲ್ಲ ಕುಡಿದ ಕಣಮ್ಮ ೧

ಉಟ್ಟ ಸೀರೆಯ ಬೆಲೆ ಏನೆಂದಮ್ಮ
ಪಟ್ಟೆ ಕುಪ್ಪಸಕೇನು ಪಣವೆಂದನಮ್ಮ
ಮುಟ್ಟಿ ಬರಲು ಬಿಗಿದಪ್ಪಿದನಮ್ಮ
ತೊಟ್ಟು ಕೊಂಡೆನ್ನನು ಬಿಡದೆ ಕಾಣಮ್ಮ ೨

ನಸುಗಪ್ಪಿನೊಳು ಸಜ್ಜೆಮನೆಯೊಳಗಮ್ಮ
ಮೊಸರು ಪಾಲ್ಬೆಣ್ಣೆಯ ಮೆದ್ದ ಕಾಣಮ್ಮ
ಸೊಸೆಯು ಪಿಡಿಯೆ ಬಿಗಿದಪ್ಪಿದನಮ್ಮ
ನಸು ಬೆವರಿಡೆ ತನು ಬಿಡದೆ ಕಾಣಮ್ಮ ೩

ಜಾರ ಚೋರರ ಶಿಖಾಮಣಿಯಿವನಮ್ಮ
ಕಾರ ಕತ್ತಲೆಯೊಳು ಸುಳಿದ ಕಾಣಮ್ಮ

ಯಾರೆಂದು ಹೊರಗೊಬ್ಬ ಕರೆಯೆ ಗೋಪಮ್ಮ
ಚೋರ ಗಂಡಿಯ ಪೊಕ್ಕು ಓಡಿದನಮ್ಮ ೪

ಊಚು ನೀಚುಗಳೇನು ಇವಗಿಲ್ಲವಮ್ಮ
ನಾಚಿಕೆನಮಗಾಗುತಿದೆ ಹೇಳಲಮ್ಮ
ಕೀಚಕರಿಪು ಕೋಣೆ ಲಕ್ಷ್ಮೀಶಗಮ್ಮ
ವಾಚಿಸೆ ನೀನೊಂದ ಮಾತ ನಮ್ಮಮ್ಮ ೫

## ೨೮

ಏಳಯ್ಯ ಶ್ರೀ ಲಕ್ಷ್ಮೀರಮಣ ಸುರನುತ ಚರಣ
ಏಳು ಶ್ರೀ ನೀಲಕಂಠನ ಮಿತ್ರ ಸುಚರಿತ್ರ
ಏಳು ಶ್ರೀ ಭಾಗೀರಥೀ ಪಿತನೆ ಮತಿಯುತನೆ
ಏಳು ಶ್ರೀ ಕೃಷ್ಣರಾಯ ಸ್ವಾಮಿ ಏಳಯ್ಯ ಬೆಳಗಾಯಿತು ಪ

ತಂಪಿಡಿದು ತಂಗಾಳಿ ತೀಡುತಿದೆ ಮೂಡಲು
ನಸುಗೆಂಪಾಗಿ ತಾರಕಿಗಳಡುಗುತಿದೆ
ತಂಪಡರುತಿದೆ ಮಲ್ಲಿಕಾ ಜಾಜಿ ಕತ್ತಲೆಯ
ಬೊಂಪು ಹರಿದೋಡುತಿದೆಕೋ
ಸೊಂಪಡಗುತಿದೆ ಕುಮುದ ಕಮಲವರಳುತಿದೆ ನಾಗ
ಸಂಪಿಗೆಯ ಬನದಿ ಸ್ವರ ಗೈಯುತಿದೆ ಮರಿದುಂಬಿ
ಸಂಪತ್ತು ಬಡವಗೆ ಬರುವಂತೆ ರವಿ ಬಿಂಬ
ಸೊಂಪಿ ನಿಂದೆಸೆಯುತಿದೆಕೋ ||ಸ್ವಾಮಿ|| ೧

ಹಲವುಮೃಗ ಜಾತಿಗಳು ಹಳುವನಡ ಹಾಯುತಿವೆ
ಫಲ ಪುಷ್ಪಚಯವು ಪಲ್ಲವಿಸಿ ಪಸರಿಸುತಲಿವೆ
ಬಿಲಗಳ ಸಾರುತಿವೆ ಗೃಹದಿ ಮೂಷಿಕವನದಿ
ಕೋಗಿಲೆಯು ಧ್ವನಿ ಗೈಯುತಿದೆ ಕೋ
ಗಿಳಿ ವಿಂಡು ನಲಿಯುತಿದೆ ನವಿಲು ಜೇಂಕರಿಸುತಿವೆ

ಹೊಲ ಮನೆಗಳೆಲ್ಲ ಹಸನಾಗಿ ಕಾಣಿಸುತಲಿವೆ
ಸುಳಿಗಾಳಿ ಸುಳಿಯುತಿದೆ ಜಲಜಾಕ್ಷನುಪ್ಪವಡಿಸಾ ॥ಸ್ವಾಮಿ॥ ೨

ಹಕ್ಕಿಗಳು ಹಾರುತಿದೆ ಕುಕ್ಕುಟವು ಕೂಗುತಿದೆ
ನಕ್ಷತ್ರ ಪತಿಯ ಪ್ರಭೆ ಮಾಸುತಿದೆ ಸುರಭಿ ಬಲು
ಅಕ್ಕರದಿ ಹೂಂಕರಿಸುತಿವೆ ತನ್ನ ಪಸುಳೆಯನು
ರಕ್ಕಸಾಂತರನೆವಳು
ಲೆಕ್ಕವಿಲ್ಲದ ಕಾಗೆ ದಿಕ್ಕುದಿಕ್ಕಿಗೆ ಊರಹೊಕ್ಕು
ಮನೆಮನೆ ಬಿಡದೆ
ಸಾರುತಿವೆ ಸಣ್ಣ ಹಸು ಮಕ್ಕಳೆದ್ದು
ಅಮ್ಮಿಯನು ಹುಡುಕುತಿವೆ
ಚೊಕ್ಕ ಬೆಳಗಾಯಿತಿದೆ ಕೋ ॥ಕೃಷ್ಣ ॥ ೩

ಪತಿವ್ರತೆಯರೆದ್ದು ಪುರುಷನ ಚರಣಕ್ಕೆರಗಿ ಚಮ
ತ್ಕೃತಿಯಿಂದ ಮುಖ ಮಜ್ಜನವಮಾಡಿ ಪಣೆಗಿಟ್ಟು
ಹಿತವಾದ ವಸ್ತ್ರಾಭರಣಗಳಲಂಕರಿಸಿ ದಧಿ
ಮಥಕನುವಾಗಿ ಕುಳಿತು
ಅತಿಶಯ ದೊಳಗೆಲ್ಲ ಮನೆವಾರ್ತೆಯನು ಮುಗಿಸಿ ನಿಜ
ಮತ ವಿಡದು ಭಕ್ತಿಯಲಿ ಗಿಂಡಿಲುದಕವ ತುಂಬಿ
ಪತಿಯ ಬರವನು ಹಾರುತಿರುತಿಪ್ಪಸಮಯ ಶ್ರೀಪತಿಯೆ
ನೀನು ಉಪ್ಪವಡಿಸ ೪

ಮದ್ದು ಮಂತ್ರವು ಸಿದ್ಧಿಸುವ ಕಳವಿನೊಳಗಿರ್ದ ಚೋರರಿ
ಗೆದೆಯ ಧೈರ್ಯಗುಂದುವ ಸಮಯ
ಉದ್ಯೋಗವಂತರಿಗೆ ಎಚ್ಚರಿಕೆ ಸಮಯ ದರಿದ್ರರಿಗೆ
ನಿದ್ದೆ ಸಮಯ ಬುದ್ಧಿಯುತರಾದ ಬುಧಬಾಲರಿಗರ್ಥಗ್ರಂಥ
ದ್ಯಾನ ಶಾಸ್ತ್ರ ಪುರಾಣಗಳ ಬಹುವಿದ್ಯೆ ಪಠಿಸುವ
ಪಠಿಸುವ ಸಮಯವೀಗ ನೀನೇಳಯ್ಯ
ಮುದ್ದು ಗೋಪಾಲಕೃಷ್ಣ ೫

ವ್ಯಾಸ ವಾಲ್ಮೀಕಿ ಶುಕನಾರದನು ಶೌನಕ ಪರಾಶರ
ವಶಿಷ್ಟ ವೈಶಂಪಾಯ ಕಣ್ವ ವಿಶ್ವಾಮಿತ್ರ ಗೌತಮ ಭರದ್ವಾಜ
ಸನಕ ದೂರ್ವಾಸ ಕೌಶಿಕ ಕಪಿಲರು
ಕೌಶ್ಯಪ ದಧೀಚಿ ಭಾರ್ಗವರಗಸ್ತ್ಯ ಋಷಿ
ಋಷುಶ್ಯಂಗ ಅತ್ರಿ ಜಮದಗ್ನಿಯು ವಿಭಾಂಡಕರು
ಈ ಸಮಸ್ತಾದಿ
ಋಷಿಗಳು ನೆರೆದು ನಿಮ್ಮ ಹಾರೈಸುತಿದಾರೆ
ಹರಿಯೇ ॥ ಸ್ವಾಮಿ ॥ ೬

ಜಾಂಬವ ವಿಭೀಷಣಾಶ್ವತ್ಥಾಮ ಹನುಮಂತ
ಅಂಬರೀಶಾಕ್ರೂರ ಅಜಾಮೀಳ ಧ್ರುವಾದಿಗಳು
ಜಂಭಾರಿಸುತ ಧನಂಜಯ ಬಲಿಷ್ಠಹಲಾದರೆಂಬಸದ್ಭಕ್ತರುಗಳು
ಅಂಬುಜೋದ್ಭವ ಮುಖ್ಯರಮರ ಗಂಧರ್ವಾದಿ
ತುಂಬುರ ಭುಜಂಗ ಭೂಸುರರೆಲ್ಲರೊಂದಾಗಿ
ಅಂಬುಜ ಸಹಾಯಗರ್ಘ್ಯವನಿತ್ತು ನಿಮ್ಮ ಚರಣಾಂಬುಜವನೆ
ಬಿಡದ ಹಂಬಲಿಸುತ್ತೈದಾರೆ ಹರಿಯೆ ॥ ಸ್ವಾಮಿ ॥ ೭

ಗಂಗೆ ಗೋದಾವರಿಯ ಭೀಮರತಿವರದೆ ವರ
ತುಂಗ ಭದ್ರೆಯು ಯಮುನೆ ಕಾವೇರಿ ಸಿಂಧು
ನದಿ ಕುಮುದಾವತಿ ಹರಿದ್ವತಿ ಕಪಿನಿ ಮೊದಲಾದ
ಅಂಗನೆಯರೆಲ್ಲರೂ ಕೂಡಿ
ರಂಗು ಮಾಣಿಕದ ಆಭರಣಗಳಲಂಕರಿಸಿ
ಹಿಂಗದೆಲ್ಲರು ನೆರೆದು ಹರಿ ನಿಮ್ಮ ಬಾಗಿಲೋಳು
ಪೋಂಗಳಸದಲಿ ನೀರ ಪಿಡಿದು ನಿಂತೈದಾರೆ
ಮಂಗಳಭಿಷೇಕಕೆಂದು ಸ್ವಾಮಿ ೮

ಕರಿಯ ರಕ್ಷಿಸಿದಂಥ ಕರುಣಸಾಗರ ಏಳು
ಖರದೂಷಣರ ತರಿದ ಕಪಟನಾಟಕನೆ ಏಳು
ಕರುಗಳನು ಕಾಯ್ದ ಕಾರುಣ್ಯ ಮೂರುತಿ ಏಳು

ವರ ಪಾಂಡುರಂಗ ವಿಠಲ
ಹರಿಸುತನ ಹಯವರೂಥವ ಹರಿಸಿದವನೆ ಏಳು
ಹರಿಸುತನ ಸುತನ ಸುತನ ಕಾಯ್ದವನೆ ಏಳು
ಹರಿಸುತನ ಕೋಣೆ ಲಕ್ಷ್ಮೀರಮಣನೆ ಏಳು ಶ್ರೀ ಹರಿಯೆ
ನೀನು ಉಪ್ಪವಡಿಸಾ ॥ಕೃಷ್ಣ ॥ ೬

## ೨೯

ಕಂಡೆ ನಾನಿಂದು ಪರಶಿವನ ಅಖಿಲಾಂಡ ಕೋಟಿ
ಬ್ರಹ್ಮಾಂಡನಾಯಕನ ಪ

ಥಳ ಥಳಿಸುವ ದೇಹ ಪ್ರಭೆ ಪುಲಿದೊಗಲುಡುಗೆಯು
ಕೆಂಜೆಯ ಮೇಲೊಪ್ಪುವ ಶಶಿ
ಕಳೆ ಕರತಳದೊಳು ಮೆರೆದಕ್ಷಯ ಸರದಭಯ
ಹಸ್ತದ ಸದ್ಯೋಜಾತ ಸ್ವಯಂಭುವ ೧

ಕುಂಕುಮ ವರ್ಣವು ತನುಭಸ್ಮಾಂಗಲಂಕೃತ
ಗಜ ಚರ್ಮಾಂಬರ ದುಡಿಗೆಯು
ಪಂಕಜಮುಖ ಸುಲಿಪಲ್ಲಿನ ಪ್ರಭೆಯು
ಬೆರಳುಕದೊಳಕ್ಷಮಾಲೆಯ ವಾಮ ದೇವನ ೨

ಕಾಳ ಮೇಘದ ವೋಲ್ ವರ್ಣವು ದಂಷ್ಟಕರಾಳ
ಭ್ರೂಕುಟಿ ಮುಖದ ಭಯವರದ ಜಪಮಾಲೆ ಪಾಶಾಂಕುಶ
ಢಮರುಗ ಶೂಲ ಖಡ್ವಾಂಗ ಕಪಾಲಮಾಲಾ
ಸರ್ಪಾಭರಣದ ಘೋರನ ೩

ಕರದೋಳ್ ಕಪಾಲ ಮಿಂಚಿನ ದೇಹ ಪ್ರಭೆ । ಉರಗಾಭರಣ
ದೊಡಿಗೆ ಕೆಂಪುನೊಸಲು ಪರಶುಡಮರುಗ ಖಡ್ಗ
ಭೇಟಕ ಧನುರ್ಬಾಣ
ಉಗ್ರಾಸನ ಉರಿಗಣ್ಣಿಂದು ಮೌಳಿಯ ತುತ್ಪುರುಷನ ೪

ಎಳೆ ಮುತ್ತಿನ ಭಾಳಾಂಗಚ್ಛವಿತನು ಪರಿಮಳಿಪ
ಶ್ರೀ ಗಂಧ ಲೇಪನ
ಶಾಂತ ರೂಪದೊಳಭಯ ವರದಜಪಮಾಲೆ
ಖಡ್ವಾಂಗ ಢಮರುಗ
ಕರದ ಕಪಾಲೇಂದು ಮೌಳಿಯ ಈಶಾನ್ಯನ ೫

ಕಂಡೆನು ಪೂರ್ವಮುಖದಿ ತುತ್ಪುರುಷನ
ರುಂಡ ಮಾಲಾಧಾರ
ದಕ್ಷಿಣಘೋರನ ಕಂಡೆನು ಪಶ್ಚಿಮದೊಳು ಸದ್ಯೋಜಾತನ
ಕಂಡೆನು ಉತ್ತರದೊಳ್ ವಾಮದೇವನ ಕಂಡೆನು ೬

ಶುದ್ಧದಾಕಾಶ ಮುಖನು ಪಂಚವಕ್ತ್ರೊದೊಳಿದ್ದು ಬೇರ್ಬೇರ
ಜಟಾಜೂಟ ಗಂಗೆ ಸಮೃದ್ಧಿ
ಪಾರ್ವತಿ ಸಹ ಉರಿಗಣ್ಣು ಫಣಿ ಬಂಧಿವಿದ್ದ
ಕೆಳದಿ ರಾಮೇಶನ ೭

## ೩೦

ಕೆಟ್ಟು ಹೋಗಬೇಡ ಮನುಜ ಸಾರಿ ಹೇಳುವೆ ಮನವ
ಮುಟ್ಟಿ ಭಜಿಸೋ ಹರಿಯ ಶ್ರೀ ಕೃಷ್ಣ ಕಾಯುತಾನೆ ಪ

ಆನೆಯಂತೆ ಹರಿವುದೊಂದು ಹೀನ ಮನವ ಹರಿಯಬಿಟ್ಟು
ನೀನು ವಿಷಯವನ್ನು ಬಯಸಿ ನಾನಾನರಕದಲ್ಲಿ ಬಿದ್ದು ೧

ದಾನ ಧರ್ಮಗಳನು ಬಿಟ್ಟು ಬರಿಯ ತನುವದಂಡಿಸುತ್ತ
ಪುಣ್ಯ ತೀರ್ಥಸ್ನಾನಬಿಟ್ಟು ವಿಷ್ಣು ಮೂರ್ತಿಧ್ಯಾನ ತೊರೆದು ೨

ಗಂಟು ಗಡಿಗೆ ಇರಲುನಿನಗೆ ನೆಂಟರಿಷ್ಟರೆಂದು ಬಂದು
ಪಂಟಿಯನ್ನು ತೆಗೆವರೆಲ್ಲ ಅಂಟಿ ಬೆನ್ನಬರುವರಿಲ್ಲ ೩

ಪಂಡಧರನ ದಂಡು ಬಂದು ದಂಡೆಗೆ ದಂಡೆ ಬಿಗಿದು ಕಟ್ಟಿ
ಕೊಂಡು ಹೋಗುವಾಗ ನಿನ್ನ ಹೆಂಡಿರು
ಮಕ್ಕಳು ಬರುವನೋ ೪

ನಿನ್ನ ನೀನೆ ತಿಳಿದುಕೊಂಡು ಚೆನ್ನಿಗನ ಕೂಟದಲ್ಲಿ
ಚಿನ್ಮಯಾತ್ಮಕ ಲಕ್ಷ್ಮೀಪತಿಯ ಮುನ್ನಭಜಿಸೋ ಜನ್ಮವಿಲ್ಲ ೫

## ೩೧

ಕೇಳೆ ನಂದನ ಕಾಂತೆ ಹೇಳೆ ಮಗಗೆ ಬುದ್ಧಿ
ಬಾಲೆಯರನು ಇರಗೊಡನೆ ದಮ್ಮಯ್ಯ ಪ

ಕುತ್ತಿಗೆಯೊಳಗಣ ಮುತ್ತಿನ ಸರಗಳ
ಕಿತ್ತು ಹರಿದು ಚೆಲ್ಲಿ ಪೋದ ದಮ್ಮಯ್ಯ ೧

ಕಟ್ಟಿದ ಕರುಗಳ ಬಿಟ್ಟು ಒಲೆಯ ಮೇಲೆ
ಇಟ್ಟ ಪಾಲ್ಗಳನೆಲ್ಲ ಕುಡಿದ ಗೋಪಮ್ಮ ೨

ಪಿಕ್ಕದೊಳಿಹ ಬೆಣ್ಣೆ ಚೊಕ್ಕನೆಲ್ಲವ ಮೆದ್ದು
ಮರ್ಕಟಗಳಿಗಷ್ಟನಿತ್ತ ದಮ್ಮಯ್ಯ ೩

ಬೇಡವೆಂದರೆ ಛಲಗೇಡಿ ಹಿಡಿದು ಎನ್ನ
ನೋಡಿ ಮೋಸವ ಮಾಡಿ ಹೋದ ದಮ್ಮಯ್ಯ ೪

ಮರುತಾತ್ಮಜ ಕೋಣೆ ಲಕ್ಷ್ಮೀರಮಣಗೊಮ್ಮೆ
ನಾರಿ ನೀ ಬುದ್ಧಿಯ ಹೇಳೆ ದಮ್ಮಯ್ಯ ೫

## ೩೨

ಗೋವಿಂದ ರಾಮ ಗೋವಿಂದ ಹರೇ ಗೋವಿಂದ ನಾರಾಯಣ
ಗೋವಳಿಗಾಗಿ ಗೋವರ್ಧನ ಗಿರಿಯನೆತ್ತಿ ಗೋವುಗಳನು
ಕಾಯ್ದೆ ಶ್ರೀ ಕೃಷ್ಣ ಪ

ದಶರಥನರಸಿ ಕೌಸಲ್ಯೆಯ ಬಸಿರೊಳು ಶಿಶುವಾಗಿ
ಜನಿಸಿದೆ ಶ್ರೀರಾಮ
ವಸುದೇವ ದೇವಕಿಯರಿಗೆ ನೀಸುತ ನೆನಿಸಿ
ಅಸುರರ ಮಡುಹಿದೆ ಶ್ರೀ ಕೃಷ್ಣ
ಪಶುಪತಿಧನುವನು ಮುರಿದು
ಜಾನಕಿಯ ಕೈವಶ ಮಾಡಿದೆ ಶ್ರೀ ರಾಮ
ಕುಶಲದಿ ಪಶುಗಳ ಕಾಯುತ ಬಕ ಧೇನುಕರ
ಸಂಹರಿಸಿದೆ ಶ್ರೀ ಕೃಷ್ಣ ೧

ಪರಶುರಾಮನ ಗರ್ವಗಿರಿಯ ಜರಿಸಿ
ಪರಾಕ್ರಮವನು ತಮಿಸಿದೆ ಶ್ರೀ ರಾಮ
ಕರತಳ ದೊಳಗೆ ಚಂದ್ರಮನ
ಪಿಡಿದು ನೋಡಿ ಮರಳಿ
ನಭಕೆಬಿಟ್ಟೆ ಶ್ರೀ ಕೃಷ್ಣ
ನರನಾಟಕವ ನಟಿಸಿ
ಪುರದೊಳು ಮಂಥರೆಯನು ಬೆಳೆಸಿದೆ ಶ್ರೀರಾಮ
ನೆರೆಮನೆ ಮುಮ್ಮೊನೆ
ಮೊಸರು ಪಾಲ್ ಬೆಣ್ಣೆಯ
ಮರೆದೋಚಿತೆಗೆದುಂಡೆ ಶ್ರೀ ಕೃಷ್ಣ ೨

ಕಾಲೊಳು ಶಿಲೆಯನು ಮೆಟ್ಟಿ ಅಹಲ್ಯೆಯ
ಸ್ತ್ರೀರೂಪವ ಮಾಡಿದೆ ಶ್ರೀ ರಾಮ
ಕಾಳಿಯ ಮಡುವನು
ಧುಮುಕಿ ಹೆಡೆಯ ಮೆಟ್ಟಿ ವಾರಿಧಿಗಟ್ಟಿದೆ ಶ್ರೀ ಕೃಷ್ಣ

ಲೀಲೆಯಿಂದಲಿ ಕೌಶಿಕನ ಯಜ್ಞವ
ಪರಿಪಾಲನೆ ಮಾಡಿದೆ ಶ್ರೀರಾಮ
ಬಾಲಕತನದೊಳು ಪೂತನಿಯಸುವನು ಹೀರಿ
ಮುಕ್ತಿಯನಿತ್ತೆ ಶ್ರೀ ಕೃಷ್ಣ ೩

ತಾಯಿ ತಂದೆಯರ ವಾಕ್ಯವ ಸಲಿಸಲು
ವನವಾಸವ ಮಾಡಿದೆ ಶ್ರೀರಾಮ
ಬಾಯೊಳು ಬ್ರಹ್ಮಾಂಡವನು ವೈಕುಂಠವ
ತಾಯಿಗೆ ತೋರಿದೆ ಶ್ರೀ ಕೃಷ್ಣ
ಮಾಯಾಮೃಗವನು ಬೆನ್ನಟ್ಟಿ ಬಳಲಿಸಿ
ಸಾಯಕದೊಳು ಕೊಂದೆ ಶ್ರೀರಾಮ
ದಾಯವ ನಿಕ್ಕಿ ದ್ರೌಪದಿಯಭಿಮಾನವಕಾಯ್ದೆ
ಕರುಣದಿ ಶ್ರೀ ಕೃಷ್ಣ ೪

ಧರಣಿಯ ಭಾರವ ನಿಳುಹಲು
ಕಪಿಗಳ ನೆರಹಿ ಖಳನ ಕೊಂದೆ ಶ್ರೀ ರಾಮ
ಕುರುಕುಲದೊಳು ವೈರವಬಿತ್ತಿ ಪಾರ್ಥಗೆ
ನರವಾಗಿ ಕೊಲಿಸಿದೆ ಶ್ರೀ ಕೃಷ್ಣ
ಶರಣಗೆ ಪಟ್ಟವ ಕಟ್ಟಿ ಇರಿಸಿದೆ ಸ್ಥಿರವಾಗಿ ಶ್ರೀ ರಾಮ
ಮರುಸುತನ ಕೋಣೆವಾಸ ಲಕ್ಷ್ಮೀಶನೆ
ಮೆರೆದನು ಶ್ರೀ ರಾಮ ಶ್ರೀ ಕೃಷ್ಣ ೫

## ೩೩

ಗೋವಿಂದೋ ಗೋವಿಂದೋ ರಾಮ
ಗೋವಿಂದೋ ನಾರಾಯಣ
ಗೋವಿಂದೋ ಗೋಪಾಲಕೃಷ್ಣ
ಗೋವಿಂದೋ ನಾರಾಯಣ ಪ

ವೇದಗಳು ಕದ್ದೊಯ್ದು ದೈತ್ಯ ಪಯೋಧಿಯೊಳಗಿಡಲು
ಆದಿ ಮತ್ಸ್ಯ ರೂಪದೊಳಂದು ವೇದಗಳ ತಂದನಮ್ಮ ೧

ಬೆಟ್ಟವು ಮುಳುಗು ಸಮಯದಿ ನಮ್ಮರಂಗ
ದಿಟ್ಟ ಕಮಠನಾಗಿ ಬಂದನು ಭ್ರಷ್ಟನಿಶಾಚರರ ವರ್ಗಗಳನು
ಹುಡಿಗಟ್ಟಿ ಸುರರರಕ್ಷಿಸಿದನಮ್ಮ ೨

ಮೂಢ ಹಿರಣ್ಯಾಕ್ಷ ನೆಂಬ ಸುರನು ರೂಢಿಯನು
ಮಡಿದೊಯ್ಯಲು
ಕ್ರೋಡತನ ತಾಳ್ದವನ ಛೇದಿಸಿ ದವಡೆಯೊಳ-
ವನಿಯನೆತ್ತಿದನಮ್ಮ ೩

ಎಸೆವ ಕಂಬದಿಬಂದು ನಮ್ಮರಂಗ ಅಸುರ
ಕಶ್ಯಪನ ಸಿಗಿದನಮ್ಮ
ಶಿಶು ಪ್ರಹ್ಲಾದನ ರಕ್ಷಿಸಿ ಬಹುದೆಸೆದೆಸೆಯೊಳಗೆ
ಕೀರ್ತಿಯ ಪಡೆದನಮ್ಮ ೪

ವರವಟು ವೇಷದಲಿ ನಮ್ಮ ರಂಗಭೂಮಿ
ದಾನವ ಬೇಡಿದನು
ವರ ವಸುಧೆಯ ಈರಡಿ ಮಾಡಿ ಮೂರನೆ ಚರಣದಿ
ಬಲಿಯಕೊಂದ ನಮ್ಮ ೫

ಉತ್ತಮ ಕೊಡಲಿಯ ಪಿಡಿದು ನಮ್ಮರಂಗ ಕ್ಷತ್ರಿಯ
ಕುಲವನೆಲ್ಲ ತರಿದನಮ್ಮ ಹೆತ್ತಮಾತೆಯ ಕಡಿದು ಬದುಕಿಸಿ
ನಿತ್ಯಾತ್ಮಕನಾಗಿ ಮೆರೆದ ನಮ್ಮ ೬

ಈರೈದುವದನನು ಸೀತೆಯ ನೊಯ್ಯಲು
ವಾರಿಧಿಯನು ಬಂಧಿಸಿದನಮ್ಮ
ಮೀರಿದ ರಕ್ಕಸನಗಳ ನಿಳುಹಿ ನಾರಿ ಸೀತೆಯ ತಂದನಮ್ಮ ೭

ದೇವಕಿ ಉದರದಿ ಜನಿಸಿದನಮ್ಮ ರಂಗ ಮಾವ
ಕಂಸನನು ಕೊಂದನಮ್ಮ
ಗೋವರ್ಧನಗಿರಿಯ ಬೆರಳೊಳು ತಾಳ್ದು
ಗೋವುಗಳನು ಕಾಯ್ದನಮ್ಮ ೮

ಸತಿಯರ ವ್ರತಗಳ ಕೆಡಿಸಿದ ನಮ್ಮ ರಂಗ ಅತಿ
ಬೌದ್ಧರೂಪವತಾಳ್ದನಮ್ಮ
ಚಿತ್ತಜಸ್ಮರನಿಗೆ ಬೆಂಬಲವಡಗಿಸಿ ತ್ರಿಪುರವ ಮರ್ಧಿಸುತ
ಕೀರ್ತಿಯ ಪಡೆದ ನಮ್ಮ ೯

ಧರೆಯ ಭಾರವನಿಳುಹಲು ನಮ್ಮರಂಗ
ತುರುಗವ ನೇರುತ ಬಂದನಮ್ಮ
ದುರುಳ ಜನರ ಕೆಡಹುತ ಸುಜನರ
ಕರುಣದಿಂದಲಿ ಕಾಯ್ದನಮ್ಮ ೧೦

ಹಡಗಿನಿಂದಲಿ ಬಂದ ನಮ್ಮರಂಗ ಉಡುಪಿ
ಸ್ಥಳದಲಿ ನಿಂತನಮ್ಮ
ಬಿಡದೆ ಭಕ್ತರ ಸಲಹುವ ಗುರು ಮಧ್ವಗೊಲಿದ
ಶ್ರೀ ಕೃಷ್ಣ ಮುಕುಂದನಮ್ಮ ೧೧

## ೨೪

ಚರಣವ ನರ್ಚಿಸುವೆ ಹರಿ ನಿನ್ನ ಮರೆಯದೆ ಕೀರ್ತಿಸುವೆ
ಪರಮ ಪಾವನ ಪುಣ್ಯ ಚರಿತ ಸಕಲಗುಣ ಭರಿತ
ನೀನೆ ಎನ್ನರಸ ರಕ್ಷಿಸು ಎಂದು ಪ

ತರಳ ಧ್ರುವನು ಮುನ್ನ ಚರಣವ ಭಜಿಸಲು
ಕರುಣದಿ ಬಂದು ನೀಸ್ಥಿರ ಪದವಿಯನಿತ್ತು
ಪೊರೆದೆ ಶ್ರೀ ಹರಿ ಎನ್ನಾ
ಮೊರೆಯ ಲಾಲಿಸಿ ಕಂಡು ಭರದಿಬಂದು ಉದ್ಧರಿಸಿ
ರಕ್ಷಿಸು ಎಂದು ೧

ವಿಗಡ ದೂರ್ವಾಸನನು ದುಗಡದಿ ಶಾಪವ
ಸುಗುಣಂಬರೀಶ ಭೂಪಗೆ ಕೊಡಲಾಕ್ಷಣ
ಬಗೆಯರಿಯದವನ ಸುತ್ತಿಗೆ ಮೆಚ್ಚಿ ಸಲಹಿದ
ಖಗರಾಜ ಗಮನ ಚನ್ನಿಗನೆ ರಕ್ಷಿಸು ಎಂದು ೨

ಮುಳಿದು ಗಜವ ನೆಗಳೆಳೆಯಲು ಭಯದಲಿ
ನಳಿನಾಕ್ಷ ನಿನಗೆ ದೂರಲು ಬೇಗದಲಿ ಸಾರಿ
ಸುಲಲಿತ ಮಹಿಮನೆಗಳ ಸೀಳಿ ಕರಿಯನು
ಸಲಹಿದೆ ದೇವ ಗೋವಳನೆ ರಕ್ಷಿಸು ಎಂದು ೩

ಉದರದೊಳಗೆ ಜನಿಸಿದ ಪ್ರಹ್ಲಾದನ ಮಮುಖಕೊಲಲು
ಬೇಗದಲಿ ಕಂಬದಿಬಂದು
ಸದೆದು ದಾನವನ ದಾಯದಲಿ ಕಾಯ್ದು
ಪದುಮಾಕ್ಷ ನರಹರಿ ಮುದದಿ ರಕ್ಷಿಸು ಎಂದು ೪

ದುರುಳ ದುಶ್ಯಾಸನ ಭೂವರ ಪಾಂಡು ತನುಜರ
ಅರಸಿಯ ಸೀರೆಯ ಭರದಿ ಸೆಳೆಯಲಾಗ
ಮೊರೆಯಿಡಲಕ್ಷಯ ವರವನಿತ್ತು ಸಲಹಿದ
ಹರಿ ಸುತ ಕೋಣೆಯ ಲಕ್ಷ್ಮೀಶ ರಕ್ಷಿಸು ಎಂದು ೫

**೩೫**

ತಾಯೆ ಕೇಳೆನ್ನ ಬಿನ್ನಪವ ಬಲು
ಮಾಯ ಕಾರನು ಕೃಷ್ಣ ಮಾಡಿದೊಳಿಗವ ಪ

ಮಕ್ಕಳೂಳಿಗವ ತಾಯ್ಗಳಿಗೆ ಹೇಳ
ತಕ್ಕುದು ನೀತಿ ಕೇಳವ್ವ ನಿಮ್ಮಡಿಗೆ

ಸಿಕ್ಕದೋಡವನು ಕೈಗಳಿಗೆ ಇಂಥ
ಠಕ್ಕನ ದೆಸೆಯಿಂದ ದಣುಕೊಂಬುದೆಮಗೆ ೧

ಬೆಳಗು ದೋರದ ಮುನ್ನ ಬರುವ ಕೃಷ್ಣ
ನೆಲುವಿನ ಪಾಲ್ಬೆಣ್ಣೆಗಳ ಕದ್ದು ಮೆಲುವ
ನಿಲುಕದಿದ್ದರೆ ಕಲ್ಲಲಿಡುವ
ಒಳ ಹೊರಗೆಲ್ಲ ಕ್ಷೀರ ಸಮುದ್ರವ ಕರೆವ ೨

ಉಂಡುದ ಕಳಲುವರಲ್ಲ ನೆಲನುಂಡು ಕೆಟುದು
ಪಾಲು ಬೆಣ್ಣೆಗಳೆಲ್ಲ ಮೊಸರ
ಬಾಂಢವೆಂದರೆ ಬರಲೊಲ್ಲ ಇವನ
ಕಂಡೆನೆಂದರೆ ಸುಳುಹನೆ ಕಾಣಲಿಲ್ಲ ೩

ಹೆಣ್ಣ ಮಕ್ಕಳನಿರಗೊಡನು ಬಲು
ಬಣ್ಣಿಸಿ ಕರೆದು ಮುದ್ದಿಸಿ ಆಡುತಿಹನು
ಚಿಣ್ಣರಂದದಿ ಕಾಣುತಿಹನು ತೊಂಡೆ
ವೆಣ್ಣಟಿಯ ನಗಲಿಸಿ ನೋಡಿ ನಸುನಗುತಿಹನು ೪

ಆಸೆ ನಮಗೆ ಊರೊಳಿಲ್ಲ ಪರ
ದೇಶಕ್ಕಾದರೂ ಹೋಗಿ ಜೀವಿಪೆವೆಲ್ಲ
ಬೇಸರಾಯಿತು ನಿಮಗೆಲ್ಲ ನಮ್ಮ
ಪೋಕ್ಷಿಸುತಿಹ ಲಕ್ಷ್ಮೀರಮಣನೆ ಬಲ್ಲ ೫

## ೩೬

ದೇವ ಬಂದ ಭಕ್ತರ ಕಾವ ಬಂದ
ರಂಗ ಬಂದ ಕೋಮಲಾಂಗ ಬಂದ ಪ

ದೇವರ ದೇವ ಬಂದ ದೇವಕಿಯ ಕಂದ ಬಂದ
ಮಾವ ಕಂಸನ ಕೊಂದು ಮದನ ಗೋಪಾಲ ಬಂದ ೧

ಅಚ್ಯುತಾನಂತ ಬಂದ ಸಚ್ಚಿದಾನಂದ ಬಂದ
ಹೆಚ್ಚಿನ ತಮವಗೆಲಿದು ವೇದತಂದವ ಬಂದ ೨

ನಂದನಂದನ ಬಂದ ಸಿಂಧುಶಯನ ಬಂದ
ಇಂದ್ರವಂದಿತ ಬಂದ ಇಂದಿರಾ ರಮಣ ಬಂದ ೩

## ೩೭

ದೇವದೇವರ ದೇವ ಭಕ್ತ ಸಂಜೀವಿ ಮಹಾನುಭಾವ ಪ

ದಶರಥ ಸುಕುಮಾರ ಜಾನಕೀವರ ಧೀರ
ಅಸಮ ಸಾಹಸಿ ಕಪಿವೆರಸಿ ಲಂಕೆಯಪೊಕ್ಕ ಅಸುರರ
ಕೊಂದ ಶ್ರೀ ರಾಮಾವತಾರ ೧

ಯದುಕುಲದೊಳಗುದಿಸಿ ಮಾತುಲಮದ ಮುಖರನ್ನು ವಧಿಸಿ
ಚದುರತನದಿಂದ ದುಷ್ಟರೆಲ್ಲರ ಮಡುಹಿ ಪದವಿಯನಿತ್ತು
ಪಾಂಡುವರನ್ನೇ ವಹಿಸಿದೆ ೨

ತಿರುಪತಿ ಗಿರಿಯಿಂದ ವರ ಮೃಗ ಪುರದೆಡೆಯೊಳು ನಿಂದು
ಮರೆಹೊಕ್ಕರಿಗೆವರವೀವುದಾನಂದಚರಣ
ಸೇವಕ ವೆಂಕಟಾಚಲಗೋವಿಂದ ೩

## ೩೮

ದೇವರ ದೇವ ದಯಾಳು ಭಕ್ತ ಸಂಜೀವನೆ ಪರಮದಯಾಳು
ದೇವಕಿ ದೇವಿಯ ನಂದನು ಸನಕ ಸನಂದನ
ವಂದಿತ ಇಂದಿರಾರಮಣ ಪ

ಸಜಲ ಜಲದ ನಿಭಾಕಾಂತಿಯ ಮಿಗಿಸಿದೆ ನಿನ್ನ ಸರ್ವಾಂಗ
ಅಜಸುರಗಣವಂದಿತಪಾದಕಮಲವ
ಭಜಿಸುವ ಭಕುತರಹೃದಯನಿವಾಸ ೧

ಆಲಿಯೊಳಗೆ ನೋಡಿ ಭಕ್ತರ ಮೇಲೆ ಕೃಪೆಯಮಾಡಿ
ಪಾಲಿಸೋ ಗೋಪಾಲ ಬಾಲ ಗೋಪೀಜನ ಲೋಲ
ತುಳಸಿವನಮಾಲ ಶ್ರೀ ಲೋಲ ೨

ಸರಸಿಜಗದೆ ಶಂಖಾರಿ ಕರದೊಳು ಮೆರೆವ ಪೀತಾಂಬರಧಾರಿ
ತರಣಿ ಸಾಸಿರ ಕೋಟಿ ತೇಜರಂಜಿತ ಪಂಕರುಹವದನ
ಮಣಿಮುಕುಟ ಕುಂಡಲನೆ ೩

ವೃಂದಾವನದೊಳಗಾಡಿ ಗೋಪೀ ವೃಂದದೊಡನೆ ನಲಿದಾಡಿ
ವೃಂದಾರಕರು ನರ್ತಿಸೆ ನಭದೊಳು ಗೋವೃಂದದೊಡನೆ
ಗೋಕುಲದೊಳಾಡುವನೇ ೪

ತರು ತುರು ವಿಂಡುಗಳ ಸಂದಣಿಯೊಳು
ಬಲಿರುಗು ಕಹಳೆಕೊಂಬುಗಳ
ಬಿರುದ ಬಾರಿಸುತ ಹೊಂಗೊಳಲನೂದುತ
ಹೊನ್ನೇ ಸರಹಿನೊಳಗೆ ನಿಂದ ವೇಣುಗೋಪಾಲ ಕೃಷ್ಣ ೫

## ೩೯

ನಂಬಿದೆ ನಾ ನಿನ್ನ ಚರಣಾಂಬುಜಗಳ
ಶ್ರೀ ಮೂಕಾಂಬ ದೇವಿ
ಬೆಂಬಿಡದನುದಿನ ಬೇಡಿದ ವರವೀವ
ಶ್ರೀ ಮೂಕಾಂಬ ಪ

ಕಪಟ ನಾಟಕಿ ನಿನ್ನ ಮಹಿಮೆಯ
ನರಿವರೆ ಶ್ರೀ ಮೂಕಾಂಬ
ಕುಪಿತ ಮಹಿಷ ದುಷ್ಟದಾನವ ಸಂಹಾರಿ
ಶ್ರೀ ಮೂಕಾಂಬ ೧

ವಾರಾಹಿ ನಿಜವೇಣಿ ಶ್ರೀ ಮೂಕಾಂಬ
ಸಾರ ಗೋಪಮವಾಣಿ ಶ್ರೀ ಮೂಕಾಂಬ
ಧ್ರುತ ಸಾರಂಗ ಗಾಮಿನಿ ಶ್ರೀ ಮೂಕಾಂಬ ನೀರಂಗ
ರೂಪಿಣಿ ಮೂಕಾಂಬ ೨

ಧರೆಯೊಳಧಿಕವೆಂಬ ಕೊಲ್ಲೂರು ಪುರದೊಳು
ಸ್ಥಿರವಾಸಿ ಶ್ರೀ ಮೂಕಾಂಬ
ಪರಿಪರಿ ಭಕ್ತಗೆ ಬೇಡಿದ ವರವೀವ ಶ್ರೀ ಮೂಕಾಂಬ ೩

## ೪೦

ನಾ ನಿನ್ನ ನಂಬಿದೆನೊ ಗೋಪಾಲಕೃಷ್ಣ ನಿನ್ನ ನಾನಂಬಿದೆನೊ
ಎನ್ನ ದಾನೆಂದೆಂಬ ಹಮ್ಮಿನವಶದಲಿ ಸುಮ್ಮನೆ ಮುಳುಗಿದೆನೋ
ಶ್ರೀ ಹರಿಯೆ ನಿನ್ನನಾ ನಂಬಿದೆನೋ ಪ

ಕನಸಿನಂದದಿ ತೋರುವನು ಸುಖಘನ ಸಿರಿ ಸಹಿತಲಾಗಿ
ಚಿನುಮಯಾತ್ಮಕ ಆನಂದ ಕಟಾಕ್ಷದಿ
ತನಯ ನೆಂದೆನ್ನನು ಕಾಯೋ ಮುರಾರಿ ೧

ದ್ರಷ್ಟವಾಗಿಹುದೆಲ್ಲ ಸಟೆಯಿದು
ನಷ್ಟವಾಗಿಯೆ ಪೋಪುದೋ
ಕಷ್ಟ ಸಂಸಾರದ ಬಟ್ಟೆಯು ಸ್ಥಿರವೆಂಬ
ತೊಟ್ಟು ಮುರಿದು ಕಾಯೋ ಶಿಷ್ಟ ಮುರಾರಿ ೨

ಆಸೆಯಂಬಂಗನೆಯ ನಾಶವಮಾಡಿ ಸಲಹೋ ಎನ್ನ
ವಾಸುದೇವನೆ ನಿನ್ನ ದಾಸನ ಕರುಣದಿ ಪಾ
ಲಿಸಿ ಕಾಯೋ ಲಕ್ಷ್ಮೀಶ ಮುರಾರಿ ೩

## ೪೧

ನಾನು ತಿಳಿದವನಲ್ಲ ನೀ ಕಾಯ್ದೆ ಶ್ರೀ ಕೃಷ್ಣ
ನಾನರಿಯದಿರ್ದಡಿದ ನೀನರಿಯದವನೇ ಪ

ಒಂದು ದಿನ ನಿನ್ನ ಧ್ಯಾನದಿ ನಡೆದು ಬರುತಿರಲು
ಕೊಂದು ಚೂತದ ನೆಳಲಸಾರಿ ನಾನು
ಒಂದು ನಿಮಿಷಮ ನೀರ ತಡಿಯಲಿ ಸಂಚರಿಸುತಿರ
ಲೊಂದು ತಕ್ಷಕ ಬಂದು ವನವ ಹೊಕ್ಕಿರಲು ೧

ಮಲ ಮೂತ್ರದುಪಹತಿಯ ಪರಿಹರಿಸಿ ಕೈಗಳನು
ಜಲಮೃತ್ತಿಕೆಗಳಿಂದ ತೊಳೆದು ತೊಳೆದು
ಎಳೆ ಬಿಸಿಲ ಸೇವಿಸುತ ದಂತಧಾವನ ಗೈದು
ಸಲಿಲವನೆ ಮುಕ್ಕುಳಿಸಿ ಕೇಲದೊಳುಗಿದು ೨

ನಿಂತು ಕಾಲ್ಮೊಗ ದೊಳೆದು ಆಚಮಿಸಿ ಆದಿತ್ಯ
ನಂತಿ ಕಕೆ ಸಲಿಲಮಂತಿದ್ದಿ ಜಪವಾ
ಅಂತ ರಂಗದಿ ಜಪಿಸಿ ಮುಗಿಸಿ ವಸ್ತ್ರಗಳಿಟ್ಟು
ಗೊಂತಿಗೈತಂದವನು ಮರಳಿಧರಿಸಿ ೩

ಹಚ್ಚಡವ ಹೊದ್ದು ಮುಂದಕೆ ನಡೆದು ಬರುತಿರ
ಲಾಶ್ಚರ್ಯವೆನಿಸಿ ಬದಿಯೊಳಗುಮ್ಮಲು
ಸ್ವಚ್ಛವಲ್ಲವಿದೆಂದು ಕಿಮುಚಿನಾ ನೋಡಿ ಬಲು
ಬೆಚ್ಚಿ ಹಚ್ಚಡ ಬಿಸುಡೆ ಬಿಚ್ಚೆ ಪೆಡೆಯಲು ಕಂಡೆ ೪

ನೀ ಕೊಲುವ ಕಾಲದೊಳು ಕೊಲುವರಿಲ್ಲ
ಲೋಕೈಕನಾಥ ಚಿಪ್ಪಳಿ ವೇಣುಗೋಪಾಲ
ನೀ ಕರುಣದಿಂ ಕಾಯ್ದೆ ಎನ್ನನುಸುವನು ೫

## ೪೨

ನಾರಾಯಣ ನರಹರಿಯೆ ನರ ಜನ್ಮದಿ ಸಿಲುಕಿದೆನು
ಮರಳಿ ಜನಿಸದಂದಲೆನ್ನ ಕರುಣಿಸೋ ಕ್ಷೀರವಾರಿಧಿಶಯನ ಪ

ಮುರಹರ ಮಧುಸೂಧನ ಶ್ರೀಹರಿ ಧರಣೀಧರ ವರಾಹ
ನಾರಾಯಣ ವಟು ವಾಮನ ಕೇಶವ ವಾರಿಜದಳನಯನ ೧

ನಂದನಂದನ ಹರಿಯೆ ನಾರದವಂದಿತ ಸುರ ಸಂಹಾರಿ
ಇಂದ್ರನಮಿತ ಪುರುಷೋತ್ತಮಾವಧು
ಮಂದಜಾಯತನಯನ ೨

ಅರಿಗದೆ ಶಂಖಾಬ್ಜ ಕರದೊಳು ಮೆರೆವ ಪೀತಾಂಬರ ಧಾರಿ
ಕರಿವದನನೆ ಕಾಳಿಂಗಮರ್ಧನ ಸರಸಿರುಹದಳನಯನ ೩

ಚಿತ್ತಜ ಪಿತ ಹರಿಯೆ ಭವಗುತ್ತದಿ
ಮುಳುಗಿದೆನು ಎತ್ತು ಕಮಲನಯನ ೪

ಹಾಳು ಗುಣಿಯಲಿ ಪಶುವು ಬೀಳಲು ತಾನೇಳ
ಬಲ್ಲುದೇ ಕರು
ಣಾಳುಗಳೆತ್ತುವಂತೆನ್ನ ಚಿಪ್ಪಳಿಗೋಪಲ
ಎತ್ತಿಕೋ ಹರಿಯೇ ೫

## ೪೩

ನಾರಾಯಣ ಹರಿ ನಾಮವ ಭಜಿಪಗೆ ನರಕದ ಭಯವುಂಟೆ
ನಾರದ ಸನಕ ಸನಂದನ ಸುರನರ ಪಾಲಿತ
ಕರುಣಾಕರನರಹರಿ ಎಂದು ಪ

ಖಗರಾಜಗಳುಕದ ಉರಗನುಂಟೆ ದೊಡ್ಡ
ಮೃಗರಾಜ ಗಳುಕದ ಆನೆಯುಂಟೆ

ನಿಗಮಗೋಚರ ನಿತ್ಯ ಜಗದುದರನೆ
ಜಗದೊಡೆಯ ಜಾಹ್ನವಿಪಿತ ತ್ರಿಗುಣ ನಿರ್ಗುಣನೆಂದು ೧

ಕುಂಭಜ ಗಳುಕದ ಅಂಭುಧಿಯುಂಟೇ
ತ್ರಯಂಬಕ ನುರಿಗಣ್ಣ ಉಳಿದವರುಂಟೆ
ಅಂಭುಧಿ ಶಯನ ಪೀತಾಂಬರಧರ ಕರುಣಾಂಬುಧಿ
ಬಲಿಬಂಧನ ನರಹರಿ ಎಂದು ೨

ಕುಳಿಶಕಳುಕದ ಪರ್ವತವುಂಟೆ ಚಲುವ
ನಳಿನ ಮಿತ್ರನ ಮುಂದೆ ತಮವುಂಟೆ
ನಳನಳಿಸುವ ಮುದ್ದು ಮೊಗದ ಮೋಹನ
ಕಾಮ ಚೆಲುವ
ಜಲಜಮಿತ್ರ ಕುಲಲಲಾಮನೆ ಎಂದು ೩

ಹರಿಯೆ ರಕ್ಷಿಸಲು ಕೊಂದವರುಂಟೆ ಮನ
ಮುರಿದು ಕೊಂದರೆ ಕಾವವರುಂಟೆ
ಮುರಹರ ನಾರಾಯಣ ನರಹರಿ
ಕರಿವರದ ಪಾಲಿತ ಸುರನರರ ಸೇವಿತನೆಂದು ೪

ಅನಿಲಗಳುಕದ ಅಭ್ರಗಳುಂಟೆ
ಹುತಾಶನನಿಗಳುಕದ ಕಾನನವುಂಟೆ
ವನರುಹಾಂಬಕ ವಾಯುತನಯ ಕೋಣೆಯ ಲಕ್ಷ್ಮಿರಮಣ
ಸನಕ ಸುತ ಚಿನುಮಯಾತ್ಮಕನೆಂದು ೫

## ೪೪

ನಾರಾಯಣ ಹರಿ ಎನ್ನ ಭವ ಸಾಗರವನು
ದಾಂಟಲಿಕಿದುಸಾರಾ ಪ

ಅಚ್ಯುತಾನಂತ ಗೋವಿಂದ ಕೇಶವ ಎನ್ನಿ
ಸಚ್ಚಿದಾನಂದ ಶ್ರೀ ಕೃಷ್ಣ ನೆನ್ನಿ

ಹೆಚ್ಚಿದ ದುರುಳದಾನವರ ಸಂಹರಿಸಿದ
ಮುಚುಕುಂದ ವರದಾಯಕ ನೆನ್ನಿ ೧

ನೀಲ ಮೇಘ ನಿಭಾಂಗ ರೂಪನು ಎನ್ನಿ
ಕಾಳಿಯ ತುಳಿದ ಗೋಪಲ ನೆನ್ನಿ
ಪಾಲು ಮೊಸರು ಬೆಣ್ಣೆಗಳ್ಳನಿವನುಎನ್ನಿ
ಭೂಲಲನೆಯ ಗಂಡ ನೀತ ನೆನ್ನಿ ೨

ಶಂಖ ಚಕ್ರಗದೆ ಪದ್ಮಧರನು ಎನ್ನಿ
ಶಂಕರ ಪ್ರಿಯ ಮುರ ವೈರಿಯೆನ್ನಿ
ಪಂಕಜ ವದನ ಕಸ್ತೂರಿ ತಿಲಕನೆನ್ನಿ
ಡೊಂಕ ತಿದ್ದಿದ ಕುಬುಜೆಯನೀತನೆನ್ನಿ ೩

ರಾಣಿಯ ನೊಯ್ದ ರಾವಣನ ಕೊಂದವನೆನ್ನಿ
ಬಾಣಾಸುರನ ತೋಳ ತರಿದವನೆನ್ನಿ
ಚಾಣೂರ ಮಲ್ಲರ ಮುಷ್ಟಿಕರ ಸಂಹರಿಸಿದ
ವೇಣುನಾದ ಪ್ರಿಯ ಶ್ರೀರಂಗ ನೆನ್ನಿ ೪

ನಾಮವೇಗತಿ ಎನ್ನಿ
ನಾಮವೇ ಮತಿ ಎನ್ನಿ
ನಾಮವೇ ಪರಕೆ ಸಾಧನವು ಎನ್ನಿ
ಪ್ರೇಮದಿಂದಲಿ ರಸನೆಯೊಳು ಲಕ್ಷ್ಮೀಶನ
ನಾಮ ಸ್ಮರಣೆಯನು ನುಡಿನುಡಿಗೆನ್ನಿ ೫

## ೪೫

ನೀನಿಲ್ಲದಾರಿಲ್ಲ ಜಗದೊಳು ನಿತ್ಯ ನೀನೆ
ಸಲಹೆ ಜನರನು ಅನ್ನಪೂರ್ಣೆ ಪ

ಉಲ್ಲಾಸದಿಂದಲಿ ಪಲ್ಲಕ್ಕಿಯ ಮೇಲೆ ನೀ
ಕುಳ್ಳಿರ್ದು ಛತ್ರ ಚಾಮರ ವ್ಯಜನಗಳಿಂದ

ಅಲ್ಲಿ ಗಲ್ಲಿಗೆ ನೃತ್ಯಗೀತ ವಾದ್ಯುಪಚಾರ
ದಲ್ಲಿ ಉತ್ಸವದಿ ಬರುವ ಸಂಭ್ರಮವಕಂಡೆ ೧

ಹಾಡಿ ಪಾಡಿಸಿ ಕೊಳುತ ಚತುರ್ವಿಧ ಗೂಡಿದ
ಮಂತ್ರ ಸ್ತುತಿಗಳಿಂದಲಿ
ಕೂಡಿದ ಜನರ ಸಂದಣಿಯಲ್ಲಿ ಮನೆಯಲ್ಲಿ
ಬೇಡಿದ ಜನರಿಂಗಿಷ್ಟಾರ್ಥವ ನೀವುದ ಕಂಡೆ ೨

ಮೂರು ಮೂರುತಿ ನೀನೆ ನಿರ್ಮಿಸಿ ಮತ್ತೆ
ಮೂರು ಗುಣಂಗಳ ಧರಿಸಿ
ತಾರಣ ರೂಪೆ ಸೃಷ್ಟಿಸ್ಥಿತಿಗಳನು ಸಂಹಾರವ
ಮಾಳ್ಪ ಚೈತನ್ಯ ರೂಪೆಯಕಂಡೆ ೩

ಬಿಂಕವ ಮುರಿದೆ ಜನರ ಸಾಕಿನ್ನು ಭಯಂಕರವನು
ಬೀರದಿರು ತಾಯೆ ಎನ್ನ ಮಾಡಲ ಮನೆಯೊಳು ನೆಲಸಿ
ಭಕುತರನು ಶಂಕರಿ ಸಲಹೆ ದಯದೊಳನ್ನಪೂರ್ಣೆ ೪

ಎಲ್ಲ ಜೀವರಿಗು ಜೀವಳು ನೀನು
ಇಲ್ಲಿನ್ನು ನಿನಗಿಂತ ಬಲ್ಲಿದರು
ಇಲ್ಲಮ್ಮ ವಿಜಯದಶಮಿಯೊಳು ನೀ ಬಂದು
ಕೊಲ್ಲೂರ ಮೂಕಾಂಬೆಯೊಳಿರ್ದುದ ಕಂಡೆ ೫

## ೪೬

ಪಾಲಿಸೆನ್ನನು ಪಾಹಿ ಪಾರ್ವತೀಶ ಈಶ
ಕಾಲ ಕರ್ಮ ವಿದೂರ ಪಾಪನಾಶ ಪ

ಪರಮ ಪುರುಷ ಪರೇಶ ಪರಮಾತ್ಮ ಪರಿಪೂರ್ಣ
ವರ ಪರಂಜ್ಯೋತಿ ರೂಪಾತ್ಮನೇ

ಕರಿ ಚರ‍್ಮಧರ ಭಸ್ಮ ಭೂಷಣ ದಿಗಂಬರನೇ
ಶರಣು ಜನಸುರಧೇನು ನಿಸ್ಸಂಗನೇ ೧

ಉಮೆಯರಸ ಪಂಚವದನ ನಿರ್ಮಲನೆ
ವಿಮಲತರ ಗಂಗಾಜೂಟಧರನೇ
ಅಮಿತಬಲ ವೃಷಭವಾಹನನೆ ಶಾಶ್ವತನೆ
ಕಮಲ ಪಿತ ಸುತ ಹರನೇ ಶಿವರೂಪನೇ ೨

ವರವ್ಯಾಘ್ರ ಚರ್ಮಧರ ಇಂದುಶೇಖರ ಹರನೆ
ಕರದಿ ಡಮರುಗಧರನೇ ಶೂಲ ಪಾಣಿ
ಮೆರೆವ ನಾಗಾಭರಣ ಗಿರಿಜೆವರ ಯೋಗೀಶ
ವರ ವರದ ಮೂರ್ತಿ ಶ್ರೀ ಶಂಭು ಶಂಕರನೆ ೩

## ೪೭

ಪಾಲಿಸೋಲಿದು ಗೋಪಿ ಬಾಲ ಭಕುತ
ಜನಪಾಲ ಪಾವನ ತರಲೀಲ
ಲಕ್ಷ್ಮೀಲೋಲ ಕಾಲನಮಿತ ಸುರಜಾಲ ಸೇವಿತ
ವನಮಾಲ ಮಂಗಳ ಕರುಣಾಲಯ ಶೌರಿ ಪ

ವಂದಿತ ಸುರಮುನಿ ವೃಂದ ಭಕುತಜನ
ಬಂಧುವಾಗಿರುವ ಗೋವಿಂದ ಗೋಪಾಲದೇವ
ಮಂದಹಾಸ ಬಲಿ ಬಂಧನ ಮುರಹರ
ಸಿಂಧು ಶಯನ ಗೋಪಿಕಂದ ಮುಕುಂದ ೧

ವಾರಿಜನಯನ ಕಂಸಾರಿ ಕರುಣಾಬ್ಧಿ ಶೃಂಗಾರಿ
ಗರುಡ ಸಂಚಾರಿ ಮಂದರಧಾರಿ ಸಾರಿದ
ಸುಜನ ಮನೋರಥ
ಸುರತರು ಹಾರ ಹೀರ ಗಂಭೀರ ವೈಯಾರ ೨

ಅಂಬುಜ ಭವನುತ ಶಂಬರಾರಿಯಪಿತ
ಜಂಭಾರಿ ನಮಿತ ಹೇರಂಬ ಜನಕಪ್ರೀತ
ಕಂಬು ಕಂದರ ಸಾಗರಾಂಬರದೊಡೆಯ ಪೀತಾಂಭರಧರ
ಕಮಳಾಂಬಕ ರಮಣ ೩

ನಾಗಶಯನ ನಿಗಮಾಗಮ ಹೃದಯ ವಿ
ರಾಗಿ ಜನರ ಭವರೋಗ ಹರಣಹರಿ
ನಗಧರ ಸಗರ ವಂಶೋದ್ಧಾರ
ಜಗಧರ ಖಗವರ ಗಮನ ಸುಗುಣ ಗಂಭೀರ ೪

ಮಾರಜನಕ ಮುರವೈರಿ ದುರಿತ ಸಂಹಾರಿ
ಕರದಿ ಚಕ್ರಧಾರಿ ಸುರರ ಸಿರಿ
ಹಾರ ಕೌಸ್ತುಭಮಣಿ ಚಾರುವಿಗ್ರಹ
ಧುರ ಧೀರ ಚಿಪ್ಪಳಿವಾಸ ವೇಣುಗೋಪಾಲ ೫

## ೪೮

ಪಾಲಿಸೋ ಹರಿ ದಯಪಾಲಿಸೋ ಪಾಲಿಸೋ ಬಿನ್ನಹ
ಲಾಲಿಸೋ ಸುಜನರೊಳ್ ಹೋಲಿನೆನ್ನಗುಣವ
ಜಾಳಿಸಿ ಸುಗುಣವ ಪ

ಅಂಗಜ ಪಿತ ನಿನ್ನ ನರಿದು ನೆನೆಯಲು
ಭಂಗವಳಿದು ನಾರಿಗೊಲಿದೆ ನೀ
ಲಾಂಗ ನಿನ್ನ ಪಾದಂಗಳ ದಿವ್ಯನಾ
ಮಂಗಳ ಎನ್ನೊಳು ಹೊಂದಿ ಹಿಂಗದಂಥ ಭಯವ ೧

ನೆರೆ ನಂಬಿದೆನು ಕಾಯೋ ಬೇಗ ಬಂದು
ಸ್ಮರಿಪೆ ನಿಮ್ಮಂಘ್ರಿಯ ನೀಗಕೇಳ್
ಉರಗ ವೈರಿಯನೇರಿ ಮೆರೆವ ಶ್ರೀ ಹರಿನಿಮ್ಮ
ಚರಣಾರವಿಂದವ ಮರಯದಂತೆ ಭಯವ ಪಾಲಿಸೋ ೨

ಧರೆಯೊಳಗತಿಶಯವೆನಿಸಿ ನರ
ಹರಿ ಚಿಪ್ಪೊಳಿಯೊಳು ನೆಲಸಿ ನಿಂತು
ಸರಿಸಿಜೋದ್ಭವ ನಯ್ಯ ಹರನ ರಾಣಿಯ ಪಿತ
ನಿರುತ ನಿಮ್ಮ ಧ್ಯಾನ ಮರೆಯನ ಭಕ್ತಗೆ ೩

## ೪೯

ಪಾಹಿಮಾಂ ಪರಮೇಶ ಪಾಹಿಪನ್ನಗಭೂಷ
ಪಾಹಿ ಕೈಲಾಸ ವಾಸ ಪ

ಸ್ವಾಮಿ ಗಿರಿಜಾನಾಥ ಸಮರ ವಿಜಯ ತ್ರಿಣೇತ್ರ
ಭೀಮ ಬಲ ಸುಜನ ವಿನುತ
ಕಾಮಿತಾರ್ಥ ಪ್ರದಾತ ಕ್ಷೇಮತರ ಸುಚರಿತ್ರ
ಸಾಮಗಜ ವದನ ತಾತರಾಮೇಶ
ಕಾಮಹತ ರಮಣೀಯತರಗಾತ್ರ ಸೋಮಧರ ಸದ್ಯೋಜಾತ
ಸಾಮಗಾನ ಪ್ರೀತ ಸಮನ ಸಜ ಸ್ತೋತ್ರವ್ಯೋಮ
ಕೇಶಪುನೀತ ಪ್ರಖ್ಯಾತ ೧

ಕಾಲ ಕರ್ಮವಿದೂರ ಕಾಲ ಕಂಧರವೀರ
ಭಾಳಾಕ್ಷಭಯ ಸಂಹಾರ
ಮೂಲ ಮಂತ್ರವಿಹಾರ ಮೂಲೋಕ
ಜನಸಾರ ಶೂಲಧರ ಕರುಣಾಕರ
ಲೀಲ ಮಾಯಾಕಾರ ಲೋಲಭುವನೋದ್ಧಾರ
ಶೀಲವರಗುಣ ಸುಂದರ
ಕೇಳೆನ್ನ ದಾತಾರ ಕಾಲಿಗೆರೆಗುವೆನೋ
ಹರಪಾಶ ಭಯವಶಂಕರ ಓಂಕಾರ ೨

ನೀ ಕರುಣ ಶೀಲ ನಾಕಾಧಿ ಪತಿಗೆ
ಬಲಸಾಕಾರತ ವಿಶಾಲ
ಏಕಮಯ ತ್ರಿಗುಣದಿಂದ ಖಿಲಲೋಕ ವಿಸೂತ್ರ ಜಾಲ

ಸಾಕೆನ್ನ ಭವದಳಲ ಶೋಕವನು ನೀಕೇಳದೇಕೆ ಈ ಚೇಷ್ಟೆಬಹಳ
ಶ್ರೀ ಕಾಂತ ಜಿತ ಕಾಲ ಸಕಲಸಜ್ಜನ ಪಾಲ
ಮೂಕಾಂಬಿಕಾಂಬಲೋಲ ೩

ನಾಗೇಂದ್ರ ಭೂಷಣನೆ ನಿಗಮಾಗಮಸ್ತುತನೆ
ನಾಗವಾಹನ ನಮಿತನೆ
ಯೋಗಿ ಜನಪ್ರಿಯನೆ ಯೋಗ ಸಿದ್ಧಿಪ್ರದನೆ
ಯೋಗಮಾಯಾತೀತನೆ
ಸಾಗರೋತ್ತಾರಣನೆ ಸಗರಾನ್ವರ ಪ್ರಿಯನೆ
ಸಾಗರಾಂಬರದೊಡೆಯನೆ
ಭಾಗೀರಥೀಧರನೆ ಭಾಗವತ ಹಿತಕರನೆ
ಭಾಗಚಂದಿರಧರನೆ ಹರನೆ ೪

ಧರಣಿಯೊಳಗೆ ವಿಶೇಷತರ ಗೌಜದೊಳುವಾಸ
ವರಋಷಿ ಸ್ಥಾಪನೇಶ ಸರಸಕೀರ್ತಿ ವಿಲಾಸ ಸ್ಮರಹರ ಸುರಾಧ್ಯಕ್ಷ
ದುರಳ ದಾನವ ವಿನಾಶ ದುರಿತಹರ ನಿರ್ದೋಷ
ಧರಣಿ ಸುರಜನರಕ್ಷ ಕರಿಚರ್ಮಧರಮಹೇಶ
ಉರಗರಾಜ ವಿಭೂಷವರ ಗುರು ವಿರೂಪಾಕ್ಷ
ಪುರಮಥನ ಗೌತಮೇಶ ೫

## ೫೦

ಪೊರೆಯಲಿದು ಸಮಯ ಗೋವಿಂದ ದೇವ
ಶರಣರಕ್ಷಕ ನೆಂಬ ಬಿರುದು ಮೆರೆದ ಮುಕುಂದ ಪ

ಬಂಧನದ ಭವದೊಳಗೆ ನಾನೊಂದು ದಿನ ಸುಖವನರಿಯೆ
ಮಂದ ಮತಿಯಲಿ ತೊಳಲಿ ಕಂದಿಕುಂದಿ
ಮುಂದು ಗಾಣದೆ ಯಮನ ಬಂಧದೊಳು ಸಿಲುಕಿದನು
ಮಂಧರಧರ ಕರುಣಸಿಂಧು ನೀ ಬಂದು ೧

ಘೋರ ತಾಪವು ಬಂದು ಸಾರಿ ಎನ್ನನು ಮುಸುಕೆ
ಭೋರ ನುರಿಯಲಿ ಬಳಲಿ ಚೀರಿಹಾರಿ
ದಾರಿ ಗಾಣದೆ ದುರಿತ ವಾರಿಧಿಯೋಳ್ ಬಿದ್ದು ಬಾಯಾರಿ
ಮೊರೆಯಿಡುವೆ ನರಕಾರಿ ದಯತೋರಿ ೨

ತಂಡತಂಡದಿ ವೈರಿಗಳು ಕೂಡಿ ಕಾಯದೊಳು
ಅಂಡುಗೊಂಡೆನ್ನಳೆದು ತಂದು ಕೊಂಡು
ಹಿಂಡು ಖಂಡವನು ಸುಟ್ಟುರುವಿ ನುಂಗುವರೆನುತ
ಕಂಡು ಕೊಂಡಾನು ಸಾರಿದೆನಿಂದು ಬಂದು ೩

ತರಳತನ ದಾಯಸದಲಿ ನೊಂದೆ ಮುನ್ನಬಲು
ತರುಣಿಯರ ಸಂಗದಲಿ ಮರುಳಾದೆನು
ಜರೆಬಂದು ಮುಸುಕಿ ಕಣ್ಗಾದೀ ಪರಿಯಭವ
ಶರಧಿಯೊಳು ಮುಳುಗಿ ಮೊರೆಯಿಡುವ ಚಿನ್ಮಯನೆ ೪

ಹಿಂಗದಿದು ಭಯವ ಪೇಳಲು ತೀರದೆನಗೆ ಶ್ರೀ
ರಂಗನಿನ್ನಧೀನ ಜನವರಿಯಲೂ
ಮಂಗಳಾತ್ಮಕ ವಾಯುಜನ ಕೋಣೆ ಲಕ್ಷ್ಮೀಶ ನಿನ್ನ
ಡಿಂಗರಿಗನ ಕಾಯ್ವುದೀಗ ಸಮಯ ಕೃಪಾಳೋ ೫

## ೫೧

ಬಲ್ಲವನಿವನು ಚಿಕ್ಕವನಲ್ಲವೆ ಬಾಲಕನು
ಇಲ್ಲದ ನುಡಿಗಳ ಎನ್ನೊಡನುಸುರಲು
ಇಲ್ಲಿಗೆ ಬಂದಿರೆ ಗೋಪಿಯರೆಲ್ಲರು ಪ

ಮಣಿಮಯದೊಡಿಗೆಯನು ತೆಗೆತೆಗೆದ್ದಣಿವನೆ ಬಲ್ಲವನು
ಉಣಲೊಲ್ಲ ಉಡಲೊಲ್ಲ ಚಲಗೊಂಡಳುವ
ಕೃಷ್ಣ ಗುಣ ಮಣಿಯನು ಜಾರ ಚೋರನಂಬರೇ ೧

ಹೆಣ್ಣಿಗೆ ಮರುಳಾಗುವ ಪ್ರಾಯವೆ ಕಣ್ಣು ನಿಮಗೆ ಕಾಣವೆ
ಸಣ್ಣವನಿವಗೆ ನಿಲುಕದ ನೆಲುವಿನ ಪಾ
ಲ್ಬೆಣ್ಣೆಯ ಮೆದ್ದೋಡಿ ಬಂದನೆಂದೆಂಬರೆ ೨

ಅಂಬರದೊಳು ಮೂಡಿದ ಚಂದ್ರಬಿಂಬವ ತಾರೆನುತ
ಕುಂಬಿನಿಯೊಳು ಬಿದ್ದು ಹೊರಳುವ ತರಳ ಹಿಡಿಂಬೆಯ
ರಮಣ ಕೋಣೆಯ ಲಕ್ಷ್ಮೀರಮಣನು ೩

೫೨

ಬಾಲಗೋಪಾಲ ಬಲುಜಾಣನೆ ಗೋಪಮ್ಮ
ನೀಲ ಮೇಘಶ್ಯಾಮನೆ ಬಹುಶೂರನೇ ಜಾರನೇಚೋರನೇ ಪ

ನಾರಿಯರೆಲ್ಲರು ನೀರ ತರುತಲಿರೆ
ನೀರ ಕೊಡವನೆಲ್ಲ ಒಡೆದ ಗೋಪಮ್ಮ ೧

ಸಣ್ಣ ಸಣ್ಣ ಹುಡುಗರ ಬಣ್ಣಿಸಿ ಕರೆತಂದು
ಕಣ್ಣ ಬಿಡಿರೆನುತಲೆ ಸುಣ್ಣ ತೊಡೆದು ಪೋದ ೨

ಅಂಗನೆಯರು ಪುಣ್ಯಗಂಗೆ ಮೀಯುತಲಿರೆ
ರಂಗನಾಗ ದಿವ್ಯಾಂಗ ವಸ್ತುವ ನೊಯ್ದು ಗೋಪಮ್ಮ ೩

ದಡದ ಮರವನೇರಿ ಉಡುವ ಸೀರೆಯನೆಲ್ಲ ಕೊಡದೆ
ಕಾಡಿದ ಕೃಷ್ಣ ಮಾನ ಭಂಗವ ಮಾಡಿ ೪

ತಾಳಲಾರೆವು ನಿಮ್ಮ ಮಗನ ಲೂಟಿಯ ನಾವು
ಹೇಳೆ ಭೀಮನ ಕೋಣೆ ಲಕ್ಷ್ಮೀಲೋಲನಿಗೊಮ್ಮೆ ಗೋಪಮ್ಮ ೫

## ೫೩

ಬಾರೋ ವೆಂಕಟರಮಣ ಭವದುರಿತ ಸಂಹರಣ ಪ

ನೀರಜದಳಾಂಬಕನೇ ಪುರುಷೋತ್ತಮ ವರನೇ
ಘೋರ ದುರಿತ ಸಂಹರನೆ ಶರಣರ ಸಲಹುವ
ಬಿರುದಿನಭಿಮಾನಿ ನಿಸ್ಸೀಮ ೧

ಕಲಿಯುಗದಿ ನಿನ್ನ ನಾಮ ಹಲವುರೂಪದಲಿಹುದು
ಬಲು ಬಗೆಯ ಭಕುತ ಜನರನು ಸಲಹುತ
ಒಲುಮೆಯಿಂದಲಿ ಕಾಣಿಕೆಯನು ಕೊಳ್ಳುತ ೨

ಚಲದಂಕ ನೀನೆಂದು ಒಲುಮೆಯಿಂದಲಿ ಬರಲು
ಚಲಿಸದೆ ವರಗಳನಿತ್ತೆಯೋ ಅವರಿಗೆ
ಚಲುವ ಶ್ರೀ ತಿರುಪತಿ ವೆಂಕಟರಮಣ ೩

## ೫೪

ಬೇಡವೋರಂಗ ಹೆಂಗಳ ತಳ್ಳಿ ಹೋಗ ಬೇಡವೋನಾ
ಬೇಡಿ ಕೊಂಬೆನು ದಮ್ಮಯ್ಯ ಪ

ಊರೊಳಗೆಲ್ಲ ನಿನ್ನಯ ದೂರೇ ರಂಗ
ಬಾರೋ ನಿನ್ನನು ಕಾಣದಿರಲಾರೆ
ಯಾರಿಗೆಂಬೆನು ಗೋಕುಲದೊಳಗಿರ್ದ
ನಾರಿಯರೆಲ್ಲರು ಕಿವಿಗೆಡಸಿದರೆನ್ನ ೧

ಚಿಕ್ಕವನಾಗಿ ನೀನಿರುತಿರೆ ಹೆಣ್ಣು
ಮಕ್ಕಳ ಮೇಲೆ ಕಣ್ಣಿಡುವರೆ
ಮೊಕ್ಕು ಪಾಲ್‌ಬೆಣ್ಣೆಯ ಕದ್ದರೆ ಗೋಪರ
ಮಕ್ಕಳು ಕಂಡರೆ ಪ್ರಾಣವ ತೆಗೆವರು ೨

ಎಲ್ಲ ಜೀವರಿಗೂ ನೀಹಿತನಾಗಿ
ಪ್ರೀತಿಯಲ್ಲಿರು ಭಾರಿ ಪುರುಷನಾಗಿ
ಹಲ್ಲ ಕಡಿದಿಹರಂತೆ ಗೋಪರು ಮಾನಕೊಳ್ಳಲು
ಯತ್ನವ ಮಾಡಿ ಕೊಂಡಿಹರಂತೆ ೩

ಗಂಡು ಹೆಣ್ಣುಗಳೊಂದೆ ಮತವಾಗಿ ನಿನ್ನ
ಕಂಡರೆ ಹಿಡಿದು ಕಟ್ಟುವರಾಗಿ
ಪುಂಡ ನಿಲ್ಲಿಸ ಬೇಕೆನುತ್ತೆಲ್ಲಿ ಗೋಪರು
ಕಂಡಿ ಕಣೆವೆ ಕಟ್ಟಿಕೊಂಡು ಸಾಧಿಪರಂತೆ ೪

ಪಾಲು ಬೆಣ್ಣೆಯ ಕದ್ದು ಮೆಲುವರೆ ಕೃಷ್ಣ
ಬಾಲೆಯರನು ಗೋಳು ಹೊಯ್ವರೆ ನಿ
ನ್ನಾಲಯದೊಳಗೇನು ಕಡಿಮೆಯಾಗಿದೆ
ಲಕ್ಷ್ಮೀಲೋಲನ ದಯದಿಂದ ಸಕಲ ಸಂಪತ್ತಿದೆ ೫

## ೫೫

ಭಿಕ್ಷಾ ಭಿಕ್ಷಾ ಎಂದು ಅಮ್ಮ ನಿಮ್ಮನೆಗೊಬ್ಬ ಬಂದಿಹನೇನೆ
ಅಕ್ಷಿಯೊಳಗೆ ಕಂಡುದುಂಟಾದರೆ
ಎನಗಾಕ್ಷಣ ಹೇಳವ್ವ ನೀನೆ ಪ

ಉಡುವುದು ಪುಲಿದೊಗಲು ಪೊದ್ದುದು ಗಜಚರ್ಮ
ಒಡಲೊಳು ಚಿತಾಭಸ್ಮ ಲೇಪ
ಸುಡುಗಾಡಿ ನೋಳ್ ಕ್ರೀಡೆ ಭೂತ
ಪಿಶಾಚಿಗಳೊಡನಾಟ ನಿತ್ಯ ನಿರ್ಲೇಪ
ಹಿಡಿದ ತಲೆಯವೋಡು ಕರದೊಳು ಮೂರ್ಮನೆ ಜಡಿವ
ಶೂಲದ ಸುಪ್ರತಾಪ
ಕುಡಿಹುಬ್ಬು ಕೊನೆಮೀಸೆ
ಮೂರುಕಣ್ಣೊಳಗೊಂದು ಕಿಡಿ ಸೂಸುತಿದೆ ಉರಿತಾಪ ೧

ಕೆಂಜೆಡೆಗಟ್ಟಿದ ಮಂಜುಳವದನದಿ ರಂಜಿಸುತಿಹಕಪ್ಪುಕೊರಳು
ಕಂಜಸಖನ ಕೋಟಿ ತೇಜದಿ ಮೆರೆವ ನಿರಂಜನ
ನವಪ್ರಚಂಡ ಮುಖದವ
ಬುಂಜಿಸುವನು ಜಗವನು ಒಂದುತುತ್ತಿಗೆ
ಜಂಜಡವಿಲ್ಲೊಬ್ಬ ನುಳಿದವ
ಪಂಜರದೊಳಗಣ ಗಿಳಿಯಂತೆ ಕರದೊಳು
ರಂಜಿಸುತಿಹಮೃಗಧರನವ ೨

ಕಂಗಳು ಮೂರುಂಟು ಸರ್ವಾಂಗದೊಳಗೆ ಭುಜಂಗ
ಭೂಷಣನಾಗಿ ಇರುವಾತ
ತಿಂಗಳ ಜೂಟನು ಮಸ್ತಕದೊಳು ಸುರಗಂಗೆಯ
ಧರಿಸಿಕೊಂಡಿರುವಾತ
ಜಂಗಮ ಸ್ಥಾವರದೊಳಗೆಲ್ಲ ವಾಸ ನಿಸ್ಸಂಗನು
ತಾನಾಗಿಯೆ ತಾನು ನಲಿವಾತ
ಮಂಗಳಾಂಗಿಯನು ಕುಳ್ಳಿರಿಸಿ ಪಿಶಾಚಿ
ಗಣಂಗಳೊಡನೆ ಕುಣಿವಾತ ೩

ಕೊರಳೊಳಗೊಲೆವ ಕಪಾಲ ಮಾಲಾಧರ
ಧರಿಸಿಹ ರುದ್ರಾಕ್ಷಿಮಾಲೆ
ಮೆರೆವ ಸುವರ್ಣದಂದದಿ ವ್ಯಾಳಕುಂಡಲ
ಕಿವಿಯೊಳಗೊಪ್ಪುವ ಜೋಲೆ
ಚರಿಸುತ ಮನೆಮನೆ ತಪ್ಪದೆ ತಿರುಕರ
ಪರಿಯಲಿ ತನಗೊಂದು ಲೀಲೆ
ಸುರನರ ನಾಗಲೋಖವ ನೆಲ್ಲ ತಿರುಗುತ
ಬರುವನು ಎತ್ತಿನ ಮೇಲೆ ೪

ಮಂದಗಮನೆ ಕೇಳಿ ಪೇಳ್ದಳು ಗುರುತಹುದೆಂದು
ನಿಶ್ಚಯವನು ಮಾಡಿ
ಬಂದಿಹನೊಬ್ಬ ಭಿಕ್ಷವನಿತ್ತೆ ಸಂತೋಷದಿ
ಎನ್ನಪರಸಿಕೊಂಡೆ

ಇಂದೀಗ ಹರಿಸೂನು ಕೋಣೆ ಲಕ್ಷ್ಮೀಶನ
ಮಂದಿರವನು ಪೊಕ್ಕನೋಡಿ
ಮುಂದೆನ್ನ ಮನಬಂದ ಪರಿಚರಿಸುವೆನೆಂದೆನುತೆಂದು
ಪೋದನು ಮಾರ್ಗಕೊಡಿ ೫

೫೬

ಮಂಗಳಂ ಜಯ ಮಂಗಳಂ ನಿತ್ಯ ಮಂಗಳಂ
ಶುಭಮಂಗಳಂ ಪ

ವೇದಾಂತ ವೇದ್ಯನಿಗೆ ಆದಿನಾರಾಯಣಗೆ
ಸಾದು ಸಜ್ಜನರ ಸಂರಕ್ಷಣಗೆ
ಯಾದವಾಧಿಪ ಕೃಷ್ಣ ದನುಜರೆದೆ ದಲ್ಲಣಗೆ
ಮಾಧವ ಮುಕುಂದ ಮುರಮರ್ಧನನಿಗೆ
ಮಂಗಳಂ ಜಯ ಮಂಗಳಂ ನಿತ್ಯ ಶುಭಮಂಗಳಂ ೧

ಶ್ರೀ ವತ್ಸಲಾಂಛನಗೆ ಶ್ರೀ ಕೇಶವಾಚ್ಯುತಗೆ
ಭಾವಿಸುವ ಭಕುತ ಭವ ಭಂಜನನಿಗೆ
ಗೋವರ್ಧನವ ನೆತ್ತಿ ಗೋವುಗಳ ಕಾಯ್ದವಗೆ
ಮಾವ ಕಂಸನ ಕೊಂದ ಗೋವಿಂದಗೆ ೨

ನೀಲ ಮೇಘಾಂಗನಿಗೆ ನಿಜಶರಣ ಸಂಗನಿಗೆ
ಕಾಲ ಭಯ ಶಿಕ್ಷನಿಗೆ ಕಮಲಾಕ್ಷಗೆ
ಬಾಲಾರ್ಕ ಚಂದ್ರ ರವಿಕೋಟಿ ತೇಜನಿಗೆ
ಮೂಲೋಕ ದೊಡೆಯನಿಗೆ ಮುರವೈರಿಗೆ ೩

ಕಾಮಪಿತ ಕೃಷ್ಣನಿಗೆ ಕಡುಚೆಲ್ವಮಾಧವಗೆ
ಸಾಮಗಾನ ವಿಲೋಲ ಸರ್ವೇಶಗೆ
ವಾಮ ದೇವನ ಮಿತ್ರ ವಸುದೇವ ಪುತ್ರನಿಗೆ
ಶ್ರೀ ಮಹಾಗೋವಿಂದ ಗೋಪಾಲಗೆ ೪

ಕರಿ ವರದ ಮೂರುತಿಗೆ ದುರಿತ ಸಂಹಾರಗೆ
ಪರಮ ಪಾವನನಿಗೆ ಪಾಪವಿನಾಶಗೆ
ಘೋರ ದುರಿತಾರಣ್ಯ ದಹನ ದೈತ್ಯಾಂತಕಗೆ
ಪಾರ ಮಹಿಮಾನಂದ ಸುರವಂದ್ಯಗೆ ೫

ನಾಗೇಂದ್ರ ಶಯನನಿಗೆ ನಿಗಮಾಗಮ ಸ್ತುತಗೆ
ನಾಗಭೂಷಣ ನಮಿತಗೆ
ಭಾಗೀರಥೀಪಿತಗೆ
ಭಾಗವತ ಹಿತಕರಗೆ ಭಾಮೆಯರರಸ ಶ್ರೀ ಗೋಪಾಲಕೃಷ್ಣಗೆ ೬

ವರಮತ್ಸ್ಯರೂಪನಿಗೆ ಕೂರ್ಮಾವತಾರನಿಗೆ
ವರಹದಾಕೃತಿಯವಗೆ ನರಸಿಂಹಗೆ
ವರದ ವಾಮನನಿಗೆ ವರ ಪರಶುರಾಮನಿಗೆ
ವರ ರಾಮಕೃಷ್ಣಗೆ ಬುದ್ಧ ಶ್ರೀ ಕಲ್ಕಿಗೆ ೭

ಇಂದಿರಾರಮಣಗೆ ಚಂದ್ರಶೇಖರ ಪ್ರಿಯಗೆ
ನಂದಗೋಕುಲದರಸ ಗೋಪಾಲ ಕೃಷ್ಣಗೆ
ಮಂದಮಾರುತ ತನಯ ಕೋಣೆ ನಿಜವಾಸಗೆ ಆ
ನಂದ ಮೂರುತಿ ಶ್ರೀ ಲಕ್ಷ್ಮೀನಾರಾಯಣಗೆ ೮

## ೫೭

ಮಂದಗಮನೆ ಕರೆದುತಾರೆ ಇಂದಿರೇಶನ
ಚಂದ್ರ ಸೂರ್ಯಕೋಟಿ ತೇಜದಿಂದ ಮೆರೆವನಾ ಪ

ನಿಗಮ ಚೋರನ ಕೊಂದು ವೇದವತಂದ ಮತ್ಸ್ಯನಾ
ನಗವ ಬೆನ್ನೊಳಾಂತ ಮಥನದೊಳಗೆ ಕೂರ್ಮನ
ಜಗವ ಕದ್ದ ಖಳನ ಕೊಂದ ವರಹರೂಪನ
ಮಗನ ಕೊಲಲು ಬಂದು ಕಾಯ್ದ ನಾರಸಿಂಹನ ೧

ಬೆಡಗಿನಿಂದ ಬಲಿಯಬೇಡಿ ಧರೆಯ ನಳೆದನ
ಬಿಡದೆ ಕ್ಷತ್ರಿಯರನು ಕೊಂದ ಪರಶುರಾಮನ
ಮಡದಿಗಾಗಿ ಜಲಧಿಗಟ್ಟಿ ಸತಿಯ ತಂದನ
ಕಡಲ ಮನೆಯ ಮಾಡಿನಿಂದ ವಾರಿಜಾಕ್ಷನ ೨

ವರ ಪತಿವ್ರತೆಯ ಮಾನಗೊಂಡ ವರದ ಬೌದ್ಧನ
ಹರಿಯನೇರಿ ಮ್ಲೇಂಛ ಕುಲವ ಕೊಂದ ಕಲ್ಕ್ಯನಾ
ಮರುತ ಸುತನ ಕೋಣೆವಾಸ ಲಕ್ಷ್ಮೀ ರಮಣನ
ಸರಿಸಿ ಜಾಕ್ಷಿ ತಂದು ತೋರೆ ಸುಜನರೊಡೆಯನ ೩

## ೫೮

ಮದನ ಜನಕ ಮುದ್ದುರಂಗ ನಿತ್ಯ
ಹೃದಯದೊಳಗೆ ಭಜಿಸುವರಂತರಂಗ ಪ

ಅಜ ಭವನ ಮಿತ್ರ ಸರ್ವೇಶ ನಿನ್ನ
ಭಜಿಸುವ ಭಕ್ತರುಗಳ ಕ್ಲೇಶ ನಾಶ
ಮಜಡ ನೆನಗೆ ನೀ ನುಡಿಸ ಕೊಡು
ಸುಜನ ಸೇವಿತ ನರಹರಿ ಲಕ್ಷ್ಮೀಶ ೧

ದಯವ ನೀ ಎನ್ನೊಳುಬೀರೋ ನಿನ್ನ
ಸ್ವಯಂ ಮೂಲ ನಿಜದ ಮೂರ್ತಿಯನೀಗ ತೊರೋ
ಭಯಗಳನೆಲ್ಲವ ತೋರೋ ಚೆಲ್ವ
ನಯವಿದ ಸರ್ವ ಸದ್ಗುಣ ನಿಧಿ ಬಾರೋ ೨

ಪರಮ ಪಾವನಮೂರ್ತಿ ನಿನ್ನ ಸಿರಿ
ಚರಣ ಕೆರಗುವೆ ನಾ ಮುನ್ನ
ಕರುಣದಿ ಸಲಹೋ ನೀ ಎನ್ನ ನಿತ್ಯ
ಪೊರೆವ ಚಿಪ್ಪಳಿ ಗೋಪೀವರ ಸುಪ್ರಸನ್ನ ೩

## ೫೯

ಯಾವ ಪರಿಯಲಿ ಒಲಿಸಿ ಪಡೆವೆ ಹರಿಯೊಲವನು
ಭೂವಿವರವನು ಪೊತ್ತ ಮಹಶೇಷಗರಿದು ಪ

ಸುರನದಿ ಜಲದೊಳಭಿಷೇಕವ ಮಾಡುವರೆ
ಚರಣದಲಿ ಜನಿಸಿಹಳು ದೇವಗಂಗೆ
ಮೆರೆವ ದಿವ್ಯಾಸನವನೀಯೆ ವಿಶ್ವಾಧಾರ
ಧರಿಸಿ ಕೊಡಲಿಕೆ ವಸ್ತ್ರ ಪೀತಾಂಬರ ೧

ಹೇಮರಚಿತಾಭರಣದಿಂದ ಮೆಚ್ಚಿಸಲವಗೆ
ಕಾಮಿನಿಯೆ ಶ್ರೀಮಹಾಲಕ್ಷ್ಮಿದೇವಿ
ಪ್ರೇಮದಿಂ ಶಾಲ್ಯಾನ್ನದಿಂದ ತೃಪ್ತಿ
ಆ ಮಹಾತ್ಮಕನವನು ನಿತ್ಯ ತೃಪ್ತ ೨

ಕ್ಷೀರದಿಂ ಮೆಚ್ಚಿಸಲಿಕವಗೆ ಪಾಲ್ಗಡಲೆಮನೆ
ಆರತಿಯ ನೆತ್ತಲಿಕೆ ತಾ ಪರಂಜ್ಯೋತಿ
ಮಾರುತಾತ್ಮಜ ಕೋಣೆ ಲಕ್ಷ್ಮೀಶ ನಂಘ್ರಿಗೆ
ನಮಸ್ಕಾರದಿಂ ಮೆಚ್ಚಿಸಲಿಕವ ಜಗದ್ವಂದ್ಯಾ ೩

## ೬೦

ವಂದನೆಯನು ಮಾಡೋ ನಾಮವ
ಛಂದದಿ ನೀ ಪಾಡೋ
ವಂದನೆಯಲಿ ಭವ ಬಂಧ ಹರಿವುದು
ಮುಂದುವರಿದ ಮನಸೊಂದನು ಬಂಧಿಸಿ ಪ

ಹಾಳು ವಾದಗಳಿಂದ ಪೊತ್ತನು
ಕಳೆಯದೆ ಮುದದಿಂದ
ನಾಲಿಗೆಯೊಳು ಕೇಶವ ನಾರಾಯಣ
ಪಾಲಿಸೋ ಮಾಧವ ಗೋವಿಂದನೆಂದು ೧

ನಡೆ ನುಡಿಗೊಮ್ಮೊಮ್ಮೆ ಶ್ರೀ ವಿಷ್ಣು ಮಧುಸೂದನನೆಂದು
ಒಡನೆ ತ್ರಿವಿಕ್ರಮ ವಾಮನ ಶ್ರೀಧರ
ಬಿಡದೆನ್ನ ಸಲಹೋ ಹೃಷಿಕೇಶನಂದು ೨

ಚಿತ್ತ ಶುದ್ಧಿಗಳಿಂದ ಶ್ರೀ ಪದ್ಮನಾಭನೆ ಗತಿಯೆಂದು
ಭಕ್ತಿಯಿಂದಲಿ ದಾಮೋದರನೆನುತ
ಮರುತಸುತನ ಕೋಣೆವಾಸ ಲಕ್ಷ್ಮೀಶಗೆ ೩

## ೬೧

ವಂದೇ ವಸುದೇವ ನಂದನ ವಂದಿತ
ಸುರವೃಂದ ವಾರಿಧಿಶಯನ
ಸಿಂಧು ನಮಿತ ಸೇವಿತ ಜನಭರಣ ಗೋವಿಂದ
ಗೋವರ್ಧನೋದ್ಧರಣ ಚಾರುಚರಣ ಪ

ವಾರಿಜದಳ ನಯನ ವಾರಿಧಿಶಯನ ಉರ್ವಿಭಾರಾಪಹರಣ
ಚಾರು ಮೋಹನಾಕಾರ ಚಾರಿತ್ರ ವರಗುಣ
ಸಾರಿದಜನ ಸಂಸಾರಿಸಿರಿಯಣ ೧

ಪಾತಕಸುರ ಭಂಜನ ಪೂತನಿ ಹರಣ ಪಾರ್ಥಿವ ಕುಲರಂಜನ
ಚಾತುರ್ಯತರ ಜಾಣ ಚೇತನಾತ್ಮಕ ಸುಗುಣ
ಜಾತ ರಹಿತ ಜನಜಾತ ಸಂಜೀವನ ೨

ದೇವಕಿ ವರನಂದನ ದಿವಿಜನುತ ರಾವಣಾಸುರ ಬಂಜನ
ಮಾವ ಕಂಸಾಂತಕ ಮಾವಧುನಾಯಕ
ಸೇವಿತ ರಕ್ಷಕ ಶರ್ವಾಣೀವರ ಸಖ ೩

ದಾನವಕುಲ ಭಂಜನ ನಾರದ ನುತ ವಾನರಪತಿ ಪರಿಪಾಲನ
ದೀನಜನರ ಪೋಷ ಭಾನು ಕೋಟಿ ಪ್ರಕಾಶ
ಮನಮೋಹನ ರೂಪ ಲೀಲಾರ ಮಾಲೋಲ ೪

ಚಿಂತತ ಫಲದಾಯಕ ಭಕ್ತರ ಹೃದಯಾಂತರಂಗದ ನಾಯಕ
ಕಂತು ಜನಕ ಲಕ್ಷ್ಮೀಕಾಂತ ಭೀಮನ ಕೋಣೆ
ಸಂತತವಾಸ ತಕ್ಷಕಾಂತಕಾರೂಢ ಹರಿ ೫

## ೬೨

ವಂದೇ ಗೋಪಾಲಂ ಕೃಷ್ಣಾನಂದ ಜಲಪಾಲಂ
ಮಂದಹಾಸ ಮುನಿವೃಂದ ವಿಶಾಲಂ
ಇಂದಿರೇಶ ಯದುನಂದನ ಬಾಲಂ ಪ

ಸಾರಿದನು ಸಾರಂ ಕೃಷ್ಣ
ಚಾರು ಮೋಹನಾ ಕಾರಂ
ಸಾರೋದ್ಧಾರಂ ಸುಜನಮಂದಾರಂ
ಶ್ರೀರಮಣೀ ಮುಖ ಚಂದ್ರ ಚಕೋರಂ ೧

ಕಾಂಚೀ ಮಣಿಹಾರಂ ಕೃಷ್ಣ
ವಾಂಛಿತದನುಸಾರಂ
ಪಂಚಭೂತ ಪಂಚಸ್ಯಾಕಾರಂ
ಪಾಂಚ ಜನ್ಯ ಭೃಗುಲಾಂಛನ ಧಾರಂ ೨

ಚಾಪಲ ಗುಣಧಾಮಂ ಕೃಷ್ಣ
ಗೋಪೀಜನ ಕಾಮಂ
ನೀ ಪರಮಾತ್ಮ ಸ್ವರೂಪ ಸುನಾಮಂ
ಶ್ರೀಪತಿ ಯದು ಕುಲದೀಪ ನಿಸ್ಸೀಮಂ ೩

ಪಾಂಡವ ಸಾಕಾರಂ ಕೃಷ್ಣ
ಪಂಡಿತನುಸಾರಂ
ಚಂಡ ಕಿರಣ ಮಣಿಕುಂಡಲ ಧಾರಂ
ಮಂಡಲದೊಡೆಯ ಉದ್ದಂಡತಿ ಶೂರಂ ೪

ಶರಣರ ಭವದೂರಂ ಕೃಷ್ಣ
ಸುರಜನ ಸಾಕಾರಂ
ಹರಿಸೂನು ಕೋಣೆ ಲಕ್ಷ್ಮೀಶ ಶೃಂಗಾರಂ
ಪರಮಾತ್ಮಕ ಸದ್ಗುರು ಮಂದಾರಂ ೫

## ೬೩

ವೆಂಕಟರಮಣ ಮಾಂಪಾಹಿ
ಸಂಕಟಹರಣ ಸರ್ವಲೋಕಕಾಧಾರ ಪ

ಮತ್ಸ್ಯರೂಪವತಾಳಿ ವೇದಗಳ ರಕ್ಷಿಸಿದೆ
ಮತ್ತೆ ಬೆಟ್ಟವ ಪೊತ್ತೆ ಕೂರ್ಮನಾಗಿ
ಹೊತ್ತು ಭೂಮಿಯ ಪೊರೆದೆ ವರಾಹಾವತಾರದಲಿ
ಒತ್ತಿ ಕಂಬದಿ ಬಂದೆ ನರಸಿಂಹನಾಗಿ ನೀ
ಇತ್ತೆ ವರವನು ತುಳಿದು ಬಲಿಯು ನೀಡಲು ತಲೆಯ
ವಟುರೂಪಿನಿಂದ ವೆಂಕಟರಮಣ ಮಾಂ ಪಾಹಿ ೧

ಹೊತ್ತು ಪರಶುವ ಭುವಿಯ ಕ್ಷಾತ್ರಿಯರನೀ ಕೊಂದೆ
ಮತ್ತೆ ರಾಮಾವತಾರದಲಿ ರಾವಣನ ಕೊಂದೆ
ನಿತ್ತು ಕಾಪಾಡಿದೆಯೋ ಕೃಷ್ಣ ಪಾಂಡವರನ್ನು
ಮತ್ತೆ ಬುದ್ಧನರೂಪ ತಾಳಿ ಮೆರೆದೆ
ಹತ್ತಿ ಕುದುರೆಯ ನೀನು ಕಲ್ಕಿ ರೂಪವ
ತಾಳಿ ದರುಳ ದುರ್ಜನರನ್ನು
ಮೆಟ್ಟಿ ಕುಟ್ಟಿದೆಯೋ ವೆಂಕಟರಮಣ ಮಾಂ ಪಾಹಿ ೨

ಬೇಡಿದವರ ಇಷ್ಟಾರ್ಥಗಳನೀವ
ಕಾಡಿದ ರಕ್ಕಸರ ಜೀವ ಕೊಳುವ
ನೋಡಿ ದಯಮಾಡಿ ನೀಸುಜನರನು ಕಾವ
ಆಡಿ ಅಡಗಿಸೋ ನೀನೇ ಮನದ ನೋವ

ಗಾಢ ರಕ್ಷಿಸು ಕಡು ಬಾಡಿದೆ ಭಯದಲ್ಲಿ
ನೀಡು ನಂಬುಗೆಯ ಮಾತಾಡು ಪ್ರೌಢ
ವೆಂಕಟರಮಣ ಮಾಂ ಪಾಹಿ ೩

ವರ ಅಜಾಮಿಳಗೆ ವರವಿತ್ತು ಸಲಹಿದೆಯೋ
ಕರಿ ರಾಜ ಬರಲಿದಡೆ ಬಂದು ಕಾಯ್ದೆ
ತರಳ ಧ್ರುವರಾಜನಿಗೆ ಸ್ಥಿರ ಪದವಿಯನಿತ್ತೆ
ದುರುಳ ಕಾಳಿಂಗನನು ಮೆಟ್ಟಿಕುಣಿದಾಡಿದೆಯೋ
ಧರಿಸಿ ಗೋವರ್ಧನವ ಕಾಯ್ದೆಗೋವಳರನ್ನು
ಗೋವುಗಳ ಸಲಹಿದೆಯೋ ಗೋಕುಲದಲಿ
ವೆಂಕಟರಮಣ ಮಾಂ ಪಾಹಿ ೪

ಇಳೆಯೊಳಗೆ ಮೂಡಲಗಿರಿವಾಸನಾಗಿ
ನೆಲೆಯ ನರಿದು ಭಜಿಪರ ಪಾಪನಾಶ
ಜ್ವಲಿಪತನು ಸೂರ್ಯ ಕೋಟಿ ಪ್ರಕಾಶ
ಕಲಿಯುಗದೊಳು ನಿನ್ನ ಮಹಿಮೆ ವಿಶೇಷ
ಸಲಹೋ ಪಾತಳ ಸೇವೆಯ ಗೆಣಸಿನ ಕುಣಿ
ಯೊಳಿಹ ಸುಬ್ಬರಾಯನ ವೆಂಕಟೇಶ
ವೆಂಕಟರಮಣ ಮಾಂ ಪಾಹಿ ೫

## ೬೪

ವೆಂಕಟರಮಣ ಶ್ರೀ ಲಕ್ಷ್ಮೀರಮಣ
ಪಂಕಜದಳ ನೇತ್ರ ಮುಗುಳ್ನಗೆ ವದನ ಪ

ಧರೆಯ ಈರಡಿಯ ಮಾಡಿದ ಚಾರುಚರಣ
ಸ್ಮರಿಸುವ ಸುಜನರ ದುರಿತ ಸಂಹರಣ ೧

ಉಟ್ಟ ಪೊಂಬಟ್ಟೆ ಪೀತಾಂಬರಾವರಣ
ಇಟ್ಟ ಶ್ರೀಗಂಧ ಕಸ್ತೂರಿಸಿರಿವದನ ೨

ಅರಿಗದೆ ಶಂಖಾಬ್ಜವರ ಚತುರ್ಭುಜನ
ಕೊರಳ ತುಳಸಿಯ ಮಾಲೆ ವನಮಾಲಾಭರಣ ೩

ರತ್ನ ಕಿರೀಟಿ ವಿಚಿತ್ರದಾಭರಣ ಗು
ರುತ್ಮ ಗಮನ ದುಷ್ಟ ಧೈತ್ಯ ಸಂಹರಣ ೪

ದುರ್ಗ ಮೂಡಲ ಗಿರಿಯಲಿ ವಾಸವಿಹನ
ಹೆಗ್ಗಾಳೆ ಮೌನಿ ವೆಂಕನ ಮೇಲೆ ಕರುಣ ೫

## ೬೫

ಶಿವ ಶಿವ ಎಂಥ ಕಾಲ ಬಂದಿತೋ
ಬಂದ ಭವದೊಳು ಚಿಂತೆಯೊಳಗೆ ದಿನ ಸಂದಿತು ಪ

ತುಪ್ಪ ಪಣಕೆ ಸೇರು ಉಪ್ಪೆಂಟು ಸಿದ್ದೆಯು
ಮುಪ್ಪಾಗ ಕೊಂದೆ ಕೊಳಗಬತ್ತ
ಜಪ್ಪಿದ ಕಸನುಚ್ಚುನುರಿ ಮುಗ್ಗು ಹೊಗೆ
ಸೊಪ್ಪು ಪಣಕೆ ಮಾರುವುದು ಅಚ್ಚೇರು ೧

ವ್ಯಾಪಾರ ಸಾಪಾರ ತುಟ್ಟಿಸಿದರು ಕೊಳ್ಳ
ಲಾಪರೆ ಫಣವೊಂದೆ ಕಟ್ಟಿಲ್ಲ
ರೂಪಾಯಿ ಕೊಡೆ ಪುಲಿಚರಮ
ಪಾಪವು ಸುಲತಾಗಿ ಪಣವ ಕೊಡೆಂಬರು ೨

ದುಡ್ಡು ಕೊಡಲು ಬೇಡ ಬೈಯುತ ಆನೆ
ಗೂಡಿನ (ಆನೆಗೊಂದಿ) ದುಡ್ಡತಾರೆಂಬರು
ದೊಡ್ಡ ಮೊಳೆ ಪಣವಿದು ಸಣ್ಣ ಮೊಳೆಯಿಂಗಿ ?
ಹೆಡ್ಡ ಹೋಗೆಂದದ್ದ ಬಿಸುಟರು ಫಣವ ೩

ತಪ್ಪಿ ಹೇಳುವೆನೆ ನಮ್ಮಪ್ಪ ದುರ್ಭಿಕ್ಷವು
ಎಪ್ಪತ್ತು ವರುಷ ಕೊದಗಿ ಬಂತು
ಇಪ್ಪತ್ತು ವರುಷಕೀಕಾಲ ಬಂದಿದ್ದರೆ
ಕನಿಷ್ಟಕ್ಕೆ ಗಣಿಸಿ ಸುಕ್ಷಾಮವ ಮರೆವೆನು ೪

ಧಾರಣೆ ಪಾರಣೆ ಶಿವರಾತ್ರಿ ಹರಿದಿನ
ಓರಂತೆ ಬಡವಗೆ ನೆಲೆಯಾಯಿತು
ಕ್ಷೀರಾಬ್ಧಿ ಶಯನ ಲಕ್ಷ್ಮೀನಾರಾಯಣನು ತನ್ನ
ಸೇರಿದ ಜನರ ಕಣ್ಣಲಿ ನೋಡುತೊಲಿದ ೫

## ೬೬

ಶಿವ ಶಿವ ನಿಮ್ಮ ನಾಮ ಅಡಿಗಡಿಗೆ ಬೇಕು
ಶಿವ ಪದವಿ ಪರಿಯಂತ ತಾನೊಂದೆ ಸಾಕು ಪ

ಜಗವೆಲ್ಲ ಶಿವ ಮಯವು ಎಂದು ಕಾಣಲು ಬೇಕು
ನಿಗಮ ದೂರನ ಹೃದಯ ದೊಳಗರಸಬೇಕು
ಬಗೆಯರಿತು ಮಾನಸದಿ ಶಿವನ ಪೂಜಿಸಬೇಕು
ನಿಗಮಾಗಮಸ್ತುತನ ಅಡಿಗೆರಗಬೇಕು ೧

ಅನವರತ ಶಿವಮಂತ್ರವನು ಜಪಿಸುತಿರಬೇಕು
ತನುಮನವ ವಸ್ತುವಿನೊಳಗಿರಿಸಬೇಕು
ಘನ ಪರಂಜ್ಯೋತಿ ಸ್ವರೂಪವ ನರಿಯ ಬೇಕು
ತನುಮಯ ಚಿದಂಬರನ ಕೂಡಬೇಕು ೨

ನಾನು ನಾನೆಂದೆಂಬ ಹಮ್ಮ ಬಿಡಬೇಕು
ಜ್ಞಾನಾಗ್ನಿಯಿಂದ ಜ್ಞಾನವನು ಸುಡುಲುಬೇಕು
ಪವಮಾನ ಸುತ ಕೋಣೆ ಲಕ್ಷ್ಮೀಪತಿಯ ಕಡುಮಿತ್ರನಾದ
ವನ ಪಾದವನು ಕೊಡಬೇಕು ೩

## ೬೭

ಸಲ್ಲಾಮು ಸ್ವಾಮಿ ಸಲ್ಲಾಮು ಸಲ್ಲಾಮು
ಶ್ರೀ ಲಕ್ಷ್ಮೀವಲ್ಲಭ ನಂಘ್ರಿಗೆ ಪ

ಭಾರಿ ಚೋರನ ಸೀಳಿ ವೇದವ ನುಳುಹಿದ ಆದಿ
ಮತ್ಸ್ಯನಿಗೊಂದು ಸಲ್ಲಾಮು
ನೀರೊಳಗಾಡುತ ಗಿರಿಯನೆತ್ತಿದ ಆದಿಕೂರ್ಮ-
ರೂಪನಿಗೊಂದು ಸಲ್ಲಾಮು
ಧಾರುಣಿಯನು ಉದ್ಧರಿಸುತ ಧನುಜನಕೊಂದ
ವರಾಹಗೊಂದು ಸಲ್ಲಾಮು
ಚೀರುತ ಮರುಳನ ಬಸುರನಖದೊಳು
ಸೀಳ್ದನಾರಸಿಂಹನಿಗೊಂದು ಸಲ್ಲಾಮು ೧

ಧಾರುಣಿಯನು ಬಲಿಯೊಳು ಬೇಡಿ ಈರಡಿ
ಮಾಡಿದವನಿಗೊಂದು ಸಲ್ಲಾಮು
ಬಾರಿ ಪರುಷ ಗೊಡಲಿಯಲಿ ಕ್ಷಾತ್ರಿಯರ ಸಂಹಾರ
ಮಾಡಿದಗೊಂದು ಸಲ್ಲಾಮು
ವಾರಿಧಿಯನು ಕಟ್ಟಿ ಲಂಕಾಪುರೀಶನ ತರಹೊ-
ಯ್ದವಗೊಂದು ಸಲ್ಲಾಮು
ನಾರಿಯನು ಹದಿನಾರು ಸಾವಿರದೊಂದನೂರ
ನಾಳಿದಗೊಂದು ಸಲ್ಲಾಮು ೨

ಮೂರು ಪುರದ ಸತಿಯರ ವ್ರತಗೆಡಿಸಿದ ಧೀರ
ಬೌದ್ಧನಿಗೊಂದು ಸಲ್ಲಾಮು
ವಾರುವನೇರಿ ಕತ್ತಿಯಕಿತ್ತು ನಿಂದಿಹ
ಕಲ್ಕಿರೂಪನಿಗೊಂದು ಸಲ್ಲಾಮು
ಸಾರಿದ ಭಕುತರ ಪೊರೆವ ಭಾರವ ಪೊತ್ತ
ಕರುಣ ಮೂರುತಿಗೊಂದು ಸಲ್ಲಾಮು
ಮಾರುತ ಸುತ ಕೋಣೆವಾಸ ಲಕ್ಷ್ಮೀಶಗೆ
ಭಕುತಿಯಿಂ ದೊರೆವೆ ಸಲ್ಲಾಮು ೩

## ೬೮

ಸಾಕು ಸಾಕು ರಂಗನಾಥ ಮನುಜ ಜನ್ಮವು
ಲೋಕ ದೊಳಗೆ ಜನಿಸಲಾರೆ ಸಾಕು ಭವದಬೇಗೆಯಿನ್ನು
ಬೇಕು ನಿನ್ನ ನಾಮವೊಂದೆ ಸಾಕುರಂಗ ಪಾಲಿಸೋ ಪ

ಉದಯದಿಂದ ಬೈಗುತನಕ ಉದರಕಾಗಿ ಕಂಡಕಡೆಗೆ
ಸುದತಿ ಸುತರ ಪೊರೆವುದಕ್ಕೆ ತಿರುಗಿ ಹೋಯಿತು
ಸದನಕ್ಕೈದಿ ಬರಲುಹಸಿದು ದಣಿದುಸ್ನಾನ ಜಪವ ತೊರೆದು
ಕುಡಿದು ತಿಂದು ಒಡಲ ಹೊರೆದು ಬಿಟ್ಟುದಾಯಿತು ೧

ಕೊಟ್ಟು ಕೊಂಡ ಸಾಲದವರು ಘಟ್ಟಿ ಮಾಡಲವರು ಬಂದು
ಭ್ರಷ್ಟ ಹಣವ ಕೊಟ್ಟು ಹೋಗು ಎಂಬುದಾಯಿತು
ಕಷ್ಟ ಬೇಡವೆಂದು ಗಡುವ ಕೊಟ್ಟು ಕಳುಹಲವರ ಬಳಿಕ
ಹೊಟ್ಟೆ ಹಸಿದು ನೇಮಗಳನು ಬಿಟ್ಟುದಾಯಿತು ೨

ಬಂದು ಜರೆಯು ಗೂಡಿನೊಳಗೆನಿಂದು
ಮನೆಯ ಮಾಡಿಯಿರಲು
ತಿಂದು ಅಸ್ತಿಮಾಂಸವನ್ನು ಅಂದ ಗೆಡಿಸಿತು
ಹಿಂದೆ ಹಮ್ಮಿನೊಳಗೆ ತಂದು ತಿಂದುದನ್ನು ನೆನೆದು ನೆನೆದು
ಮಂದನಾಗಿ ಮುಂದೆ ಗತಿಯು ಕುಂದಿಹೋಯಿತು ೩

ಕಣ್ಣು ಕಾಣ ಬೆನ್ನದುಡುಗಿ ಬಣ್ಣಗೆಟ್ಟು ದಂತಬಿದ್ದು
ಉಣ್ಣಲಿಕ್ಕು ಆಗದಾಗಿ ಕಿವಿಯು ಕೇಳದಾಯಿತು
ತಿಣ್ಣ ಯಮನ ದೂತಬಂದು ಎನ್ನ ಕೊರಳ ಎಳೆಯುವಾಗ
ಅಣ್ಣ ತಮ್ಮದಿರರು ಬೆನ್ನ ಬರುವರಿಲ್ಲವೋ ೪

ಮುಪ್ಪು ಹರಯ ಬಾಲಕತ್ವ ಒಪ್ಪದಿಂದ ಮರಳಿಮರಳಿ
ಬಪ್ಪ ಭವದ ಶರಧಿಗೊಂದು ತೆಪ್ಪವಿದ್ದಿತು
ಅಲ್ಪಹೊತ್ತು ಆದರೇನು ಚಿಪ್ಪಳಿಯ ಗೋಪಿವರನ
ಸ್ವಲ್ಪಮಾತ್ರ ಭಜಿಸೆ ಜನ್ಮ ತಪ್ಪಲಾಯಿತು ೫

## ೬೯

ಸ್ವಾಮಿಯ ನೋಡುವ ಬನ್ನಿ ನಮ್ಮ
ಸುಪ್ರೇಮೀಯ ನೋಡುವ ಬನ್ನಿ ಪ

ಎಂಟು ಮೈಯವನಂತೆ ಐಸೈದು ಮುಖವಂತೆ
ಎಂಟನ ದೇಶದಿ ನೆಲಸಿಹನಂತೆ ನೀರೆ
ಯದರ್ಧಾಂಗಿಯ ಪಡೆದಿಹನಂತೆ
ಅಂತ ಸ್ವಾಮಿಯ ನೋಡುವ ಬನ್ನಿ ೧

ಮಾಧವನೆ ಶರವಂತೆ ಭೂಧರನೆ ಧನುವಂತೆ
ಭೂಮೀಯೇ ರಥವಂತೆ ಸೊಮ ಸೂರ್ಯರೇ
ಗಾಲಿಗಳಂತೆ ಅಂತ ಸ್ವಾಮಿಯ ನೋಡುವ ಬನ್ನಿ ೨

ವಾಜಿ ವೇದಗಳಂತೆ ಒದನೊದಗಿ ಬಹವಂತೆ
ಆದಿ ಶೇಷನೆ ಬಲುಹೆದೆಯಂತೆ ಅಮೃತ ಶರಧಿಯ
ಅಲ್ಲಿ ಬತ್ತಳಕೆಯಂತೆ ಅಂತ ಸ್ವಾಮಿಯ ನೋಡುವ ಬನ್ನಿ ೩

ಹರಿಯವರ ಶರವಂತೆ ಅಜನು ಸಾರಧಿಯಂತೆ
ದುರುಳ ತಾರಕ ಸುತರ ಪುರವ ಮುರಿದಿಹನಂತೆ
ಅಂತ ಸ್ವಾಮಿಯ ನೋಡುವ ಬನ್ನಿ ೪

ಇದುವೆ ಭೂ ಕೈಲಾಸವೆಂದು ತೋಷದಿ
ಬಂದು ಸಾಕಾರವಾಗಿಲ್ಲ ನೆಲಸಿಹರಂತೆ
ಮುದದಿ ಲೋಕಗಳೆಲ್ಲ ಕೈವಶವಂತೆ ಅಂತಸ್ವಾಮಿಯ
ನೋಡುವಬನ್ನಿ ೫

# ೭೦

ಸ್ವಾಮಿ ಪಾದವ ನಂಬಿದೆ ನಿನ್ನಂದ
ನಿನ್ನ ನಾಮವೆ ಘನವಲಗಿದೆ
ಕಾಮಿತ ಫಲಗಳನೀವ ಮಹಾ ಗುಣನಾಮವ
ನೆನೆವರಕಾವ ಕರುಣಿಯೆಂದು ಪ

ನಿಗಮ ವರಸಿ ಕಾಣವು ನಿನ್ನಯ
ಪಾದ ಯುಗವನಾ ಕಾಣಬಲ್ಲನೆ
ನೆಗಳು ನುಂಗಿದ ಗಜವು ನಿನ್ನ ಸ್ತುತಿಸೆ
ಕೇಳಿ ಗರುಢಾ ರೂಢ
ನಾಗಿ ಬಂದು ಗಜವ ಕಾಯ್ದುವನೆಂದು ೧

ಅಂದಜಮಿಳನೆಂಬುವ ಹೊಲತಿ
ಸಂಗದಿಂದಲಿ ಯಿರುತಿರಲು
ಬಂದು ಯಮನ ದೂತರೆಳೆಯೆ ಭಯದಿ ತನ್ನ
ನಂದನ ಕರೆದರೊಂದು ನಾಮವೆ ಕಾದುದೆಂದು ೨

ದುರುಳ ಕಶ್ಯಪುಸುತನ ಭಾಧಿಸೆ ಮೊರೆಯಿಡಲದನುಕೇಳಿ
ಭರದಿ ಕಂಬದಿ ಬಂದು ನರಹರಿಯಾಗಿ ನಿಂದು
ಕರದೊಳವನ ಕೊಂದು ತರಳನ ಕಾಯ್ದೆಯೆಂದು ೩
ಅಂಬುಧಿಶಯನ ನಿನ್ನ ರುಕ್ಮಾಂಗದ
ಅಂಬರೀಶಾದಿರಾಯರು ನಂಬಿ ಬರುವ
ಮೃತ್ಯವೆಂಬುದೆಲ್ಲವಗೆದ್ದು
ಕುಂಭಿನಿಯೊಳು ಪೆಸರೊಡೆದರೆಂಬುದ ಕೇಳಿ ೪

ಓಲಗದೊಳು ಶಾಲೆಯ ಸುಲಿಯೆ ದ್ರುಪದ
ಬಾಲೆ ನಿನಗೆ ದೂರಲು ಕೇಳಿ ಕರುಣದಿಂದ
ಭೀಮನಕೋಣೆ ಲಕ್ಷ್ಮೀ
ಲೋಲ ಸೀರೆಯ ಸೆರಗ ಬೆಳೆಸಿದ ನಾಮವೆಂದು ೫

## ೭೧

ಸುಮ್ಮನೆ ದೂರಿದರೆ ನಾನೆಂಬೆನು ರಂಗ
ಗುಮ್ಮ ಬಂದನು ಎಂದರಂಜುವನು ಪ

ಸುಳ್ಳು ಸಟೆಯನಾಡಬೇಡಿರೇ ಜಾತಿ
ಗೊಲ್ಲತಿ ಯರು ನೀವಾದರೆ
ಎಲ್ಲನಾರಿಯರೊಂದು ಗೂಡಿರೆ ಕಟ್ಟಿ
ಕಳ್ಳ ಕೃಷ್ಣನ ತಂದು ತೋರಿರೆ ೧

ಮುತ್ತಿ ಚಂಡಾಟವಾಡುವ ನಂದ
ನೊತ್ತಿಲಿ ಪಾಲ್ಬೆಣ್ಣೆ ಮೆಲ್ಲುವ ಪಣಿಗೆ
ಕತ್ತೂರಿ ತಿಲಕವ ರಚಿಸುವ ಯಾ
ವತ್ತು ಪೊಂಗಳಲ ನುಡಿಸುವ ೨

ಕಾಲೊಳಂದಿಗೆ ಗಜ್ಜೆ ಧ್ವನಿ ಮಾಡುವ ತನ್ನ
ತಾಳ ಗತಿಗೆ ತಾನೆ ಕುಣಿದಾಡುವ ನಂದ
ನೋಲಗವನ್ನು ಕ್ಷಣ ಬಿಡದಿರುವ ಲಕ್ಷ್ಮೀ
ಲೋಲ ತನ್ನೊಳು ತಾನೆ ನಲಿದಾಡುವ ೩

## ೭೨

ಹರನೆ ಗಂಗಾಧರನೆ ಶರಣ ಶಶಿಶೇಖರನೆ ಶರಣು
ಮೃತ್ಯುಂಜಯನೇ
ಶರಣು ಶಂಕರನೆ ಶರಣು ಶರಣು ಪ

ವಾಸವೇ ಕೈಲಾಸ ವಸನವೇ ದಿಕ್ಕುಗಳು
ಪೂಸಿಹುದು ಸರ್ವಾಂಗವೆಲ್ಲ ಭಸ್ಮ
ನೇಸರಿನ ತೇಜ ಶಶಿಜೂಟ ಗಂಗಾಧರನ
ಪಾಸಟಿಯು ನಿನಗೊಬ್ಬರಿಲ್ಲ ಗೌರೀಶ ೧

ಪಂಚ ವಿಂಶತಿ ತತ್ವದೂರ ವಿಶ್ವಾಧಾರ
ಪಂಚ ಶರಹರ ವಿರಂಚ್ಯಾದಿ ಸಂಸ್ತುತಾ
ಪಂಚ ವದನನೆ ಪ್ರಣವ ರೂಪ ನಿರ್ಮಲ ನಿತ್ಯ ಪ್ರ
ಪಂಚ ಮಯನಾದ ಗಿರಿಜೇಶ ವಿಶ್ವೇಶ ೨

ಪರಮ ಪುರುಷ ಪರೇಶ ಪರಮ ಗುಣಗಣ ನಿಲಯ
ಶರಣ ಜನ ಸುರಧೇನು ವಿಶ್ವವಂದ್ಯಾ
ಸರ ಸಿರುಹ ಭವ ಪೂಜ್ಯಸೂರ್ಯ ಕೋಟಿಪ್ರಕಾಶ
ಉರಗ ಭೂಷಣ ವೃಷಭಾರೂಢ ಗೌರೀಶ ೩

ಭೂತಪತಿ ಭುವನೇಶ ಪ್ರೇತ ನಿಲಯ ನಿವಾಸ
ನೂತನದ ಗಜಚರ್ಮ ನಿನಗೆ ವಿಖ್ಯಾತ
ಗೀತ ನೃತ್ಯ ವಿಲಾಸ ಮಾತುಳಾಧ್ವರನಾಶ
ಭಾತಿ ಕಂಠದಿ ವಿಷವು ಗೌರೀಶ ೪

ಧರೆಯೊಳಧಿಕತರ ವರದ ಮೂಲನಿವಾಸ
ಕರಿವದನ ನಂದೀಶ ಶಕ್ತಿ ಉಮೆ ಸಹಿತ
ಭರದಿಂದ ನೆಲಸಿ ಸೊಪ್ಪಿನ ಸುಬ್ಬಗೆ
ವರವಿತ್ತೆ ದುರಿತವನು ಪರಿಹರಿಸೋ ಶಂಭುಲಿಂಗೇಶ ೫

## ೭೩

ಹರಿ ಹರಿ ನರಹರಿ ಎನ್ನಿಜನರು
ಹರಿ ಹರಿ ಎಂದು ಕೊಂಡಾಡಿ ಸಜ್ಜನರು ಪ

ನಂದನಂದನನಾ ಮಂದರಧರನಾ
ಇಂದ್ರಾದಿ ಸನಕ ಸನಂದನ ವಂದಿತನಾ ೧

ತಾಳಭಂಜನನಾ ವ್ಯಾಳಶಯನನ
ಕಾಳಿಯ ಪೆಡೆಯ ಮೇಳ್ ಕುಣಿದ ಗೋವಳನ ೨

ಗರುಡವಾಹನನ ಶರಧಿ ಶಯನನ
ವರ ಶಂಖಚಕ್ರಗದಾಬ್ಜ ಶ್ರೀಧರನ ೩

ಮಾವ ಮರ್ದನನ ರಾವಣಾಂತಕನ
ಗೋವರ್ಧನವನೆತ್ತಿ ಗೋವಕಾಯ್ದವನ ೪

ಮಕರ ಕುಂಡಲನ ಮುಕುತಿದಾಯಕನ
ಬಕನ ವೈರಿಯ ಕೋಣೆ ಲಕ್ಷ್ಮೀ ರಮಣನ ೫

## ೭೪

ಹರಿಯೆ ನೀನೆ ರಕ್ಷಿಸಲು ಬೇಕು ಎನಗೆಗತಿ
ಬೇರೊಬ್ಬರನು ಕಾಣೆನೋ ಪ

ನೆತ್ತರೆಲು ಮಾಂಸ ಮಲಮೂತ್ರ ಜನನಿಯ
ಗರ್ಭದೊತ್ತಿನಲಿ ಇರಿಸಿದವರಾರೋ
ಮತ್ತಲ್ಲಿ ಕಾಯುವನು ನಿರ್ಮಿಸುತ
ಕೈಕಾಲಸುತ್ತಿನರದಲಿ ಬಿಗಿದವರಾರೋ
ಹತ್ತಿರೆ ಕುಳಿತು ಕಿವಿ ಮೂಗು ಬಾಯ್ಗಳ ಬೆರಳ
ನೇತ್ರವನು ರಚಿಸಿದವರಾರೋ
ಹುತ್ತಿನಹಿಯಂತಿದ್ದು ಜೀವ ಕಳೆಯನು ತುಂಬಿ
ತುತ್ತುಗಳ ನಡಸಿದವರಾರೋ ೧

ಆವಾವ ಠಾವಿನಲಿ ಆವಾವರೋಮಗಳ
ನೇಮದಲಿ ಕಲ್ಪಿಸಿದವರಾರೋ
ಈ ವಿಧದಿ ಕೇಶವನು ರಚಿಸಿ ದಂತಕೆ
ಪಲ್ಲವೋರಣದಿ ಪವಣಿಸಿದವರಾರೋ
ಭಾವಿಸಲು ಉಗುರು ಮೊದಲಾಗಿ
ನಿರ್ಮಿಸಿ ನವದ್ವಾರವನು ತಿದ್ದಿದವರಾರೋ
ಪೂರ್ವದಲಿ ತಾನು ಮಾಡಿದ ಪುಣ್ಯ
ಪಾಪಗಳ ಕಾವಲನೆ ಮಾಡಿದವರಾರೋ ೨

ಅಲ್ಲಿ ನವಮಾಸ ತುಂಬಿದ ಬಳಿಕ ಕ್ಷಣ
ಮಾತ್ರದಲಿ ನೀಲ ಕುರುಳಿಸಿದವರಾರೋ
ಮೆಲ್ಲ ಮೆಲ್ಲಗೆ ನಡೆಸಿ ಶಿಶುಗಳಲಿ ಕೈಕಾಲು
ಪಲ್ಲವಿಸಿ ಪಸರಿಸಿದರಾರೋ
ಎಲ್ಲವನು ಸಂತೋಷದಿಂದ ಜೋಗುಳಪಾಡಿ
ಅಲ್ಲಿ ತೊಟ್ಟಿಲೊಳಿಕ್ಕಿದವರಾರೋ
ಎಲ್ಲ ದೈವಾಧೀನವೆಂದು ನೋಡದೆ ಜನವಿದೆಲ್ಲ
ಮೈಮರೆತಿಹರು ಮೂಢಜನರು ೩

ಎಂಬತ್ತು ನಾಲ್ಕು ಜೀವರಾಶಿಗಳ ಬೊಂಬೆಯನು
ಮಾಡಿ ಸೂತ್ರದಿ ಕುಣಿಪರಾರೋ
ತುಂಬಿ ತುಳುಕಾಡಿ ತೃಣ ಅಣು ಮಹತ್ತಿನೊಳು
ಪ್ರತಿಬಿಂಬಿಸುತ ಪರಿಪೂರ್ಣನೆನಿಸಲಾರೋ
ಸಂಭ್ರಮದಿ ಸೃಷ್ಟಿ ಸ್ಥಿತಿಲಯಕೆ ನೀ ಚೈತನ್ಯ
ನೆಂಬುದಲ್ಲದೆ ಮತ್ತದಾರೋ
ನಂಬಿರ್ದ ಭಕ್ತರ ಕುಟುಂಬಿ ಎಂಬುದಕಿನ್ನು
ಅಂಬರೀಶನೆ ಸಾಕ್ಷಿಯಲ್ಲದಾರೋ ೪

ಈ ಪರಿಯಲಿ ಲೋಕ ಪಾಲಕ ನೀನಾಗಲೆಲ್ಲಾ
ಪತ್ತು ಬಿಡಸದೇನೋ
ನೀ ಪರೀಕ್ಷಿಸಿದ ಮಾತ್ರದಿಂದೆನ್ನ ಪಾಪಗಳು ಪೋಗವೇನೋ
ಪಾಪ ಪೂರ್ವಾರ್ಜಿತವೆ ಆಗಿರಲಿ ನಿನ್ನ ನಿಜರೂಪವನು
ಚಿಂತಿಸಲು ಜಾರದೇನೋ
ನೀ ಪರಂಜ್ಯೋತಿ ಸ್ವರೂಪ ಭೀಮನಕೋಣೆ
ಶ್ರೀ ಲಕ್ಷ್ಮೀ ರಮಣಗರಿದೇನೋ ೫

## ೭೫

ಹರಿಯೇ ವೀರ ನಾರಾಯಣ ನಾರಾಯಣ
ಎಂಬ ನಾಮವನು ಉಚ್ಚರಿಸೆ
ಸಾರುವರು ಭಕುತರಾದವರು ವೈಕುಂಠವನು
ಆರಾದರೇನು ಮರೆಯದೆ ಹರಿಯಧ್ಯಾನಿಸಲು
ಸಿರಿಯರಸ ಕಾಯ್ದು ಕೊಂಬ ಪ

ಅರಸಕೇಳೈ ಬಳೀಕ ಪಾಂಡ್ಯದೇಶದೊಳೋರ್ವ
ಧರಣಿ ಪತಿ ಪೆಸರು ಇಂದ್ರ ದ್ಯುಮ್ನಧರಾತ್ಮ
ಹರಿ ಪರಾಯಣನೆನಿಸಿ ನಿರುತಸತ್ಯ ಸುಶೀಲ
ಪರಮಾತ್ಮನೊಳಗಾಡುತಾ ಧರಣಿ ಧನಕನಕ
ಕರಿತುರಗದಾಸೇಯ ತೊರೆದು
ವಿರತನಾಗಿಯೆ ಪುರವ ಪೊರಟು ಸುಸ್ಥಿರನಾಗಿ
ಚರಿಸಿ ತಪವನು ಮಾಡುತಿರಲಿತ್ತ
ಬರವಾಯ್ತು ಗಸ್ತ ಶಿಷ್ಯವೆರಸಿ ೧

ಸದಮಳಾತ್ಮರನ ಚಿಂತೆಯಿಂದ ಭೂಪೇಳದಿರೆ
ಮದಮುಖನ ತಪವ ನೋಡುವೆನೆನುತ ಮುನಿ ಮುನಿದು
ತದುಬಿಗರ್ಜಿಸಿ ಶಾಪವೀಯಗಜವಾಗೆನುತ
ಸದು ಹೃದಯನೆದ್ದು ಬಳಿಕ ಪಾದಕ್ಕೆ ವಂದಿಸಿ ಶಾಪ
ವೆಂದು ಬಿಗುಗಡೆಯೆನಲು ಸಾದರದಿಂ ಮುನಿಪನೆಲ
ತೆಂದನರಸನ ಕೂಡೆ ಅದರುದಕದಿ ನೆಗಳು ಪಿಡಿಯೆಗತಿನಿನ
ಗೆಂದು ಹೋದ ಮುನಿಪತಿ ಇತ್ತಲು ೨

ಇಂತು ಭೂಮೀಶ ಶಾಪವ ತಾಳ್ದು ಬಿಸುಸುಯ್ದು
ಕಂತು ಜನಕನೆ ಬಲ್ಲನೆಂತು ಗೆಲಿದಪೆನ್ನುತ
ದಂತಿ ಮುಖವಾಗಿ ಭೂಕಾಂತೆಯೊಳು ಜನಿಸಿ
ಕಾಂತಾರದೊಳ್ ಚರಿಸುತಿರ್ದಗೊಂತೆನಿಸಿವರ

ತ್ರಿಕೂಟಾದ್ರಿ ಮಧ್ಯದೊಳೆಸೆವನಂತ ಋಷಿನಿವಹ
ಸುರ ಸಂತತಿಗಳಲ್ಲಿ ಮಾ
ಕಾಂತನಿಹ ಸಂತತು ನೆಲೆಸಿ ಲಕ್ಷ್ಮೀಕಾಂತ ಮುಂತಿರಲು
ಇಂತೆಸೆದನು ೩

ಕ್ಷೀರ ಸಾಗರ ತಡಿಯ ಗಿರಿಗಳೊಪ್ಪಿರಲಿಂತು
ತರುನಿಕರ ಚೂತಾಮಲಕ
ನೇರಲು ಬಕುಳ ಸುರಗಿ ಸಂಪಿಗೆ ಜಾಜಿ
ಸುರಹೊನ್ನೆ ಪುನ್ನಾಗ ಮೆರೆವಬಿಲ್ವಶ್ವತ್ಥಮಾ
ಕಿರುಗಿಡುವಿನೊಳಗೆ ಚರಿಸುವ ಕರಡಿ ಸೀಳ್ನಾಯಿ
ಮೊರೆವ ಪುಲಿಸಿಂಹ ಭೇರುಂಡ ಮುಂತಿರುತಿರಲು
ಗರುಡ ಗಂಧರ್ವ ಚಾರಣರು ಸುರಕಿನ್ನರರು
ಇರುತಿಹರು ಕಿಂಪುರುಷರು ೪

ತ್ರಿಜಗದೊಳಗೆಣೆ ಗಾಣೆ ಭುಜಗಶಯನನೆ ಬಲ್ಲ
ಗಜರಾಜ ಬೆಳೆದು ಕುಜನರ ಮಾರ್ಗವಂ ಪಿಡಿದು
ಸುಜನರ ಬಾಧಿಸುತ ಮೂಜನವ ಗೋಳಿಡಿಸಿ
ಅಜಸೃಷ್ಟಿ ಬಿರಿಯೆ ಒದರಿ
ನಿಜಪುತ್ರ ಮಿತ್ರಸ್ತ್ರೀಜನ ಸಹಿತಲೊಡಗೊಂಡು
ಋಜ್ಜಸತ್ವದಿಂದ ವನವನು ಮುರಿದು ಸಂಹರಿಸಿ
ಗಜ ಬಜಿಸಿ ಅಬುಜ ಮಿತ್ರನ ಜಳಕೆ ತೃಷೆಯಿಂದ
ಭೂಜಲವ ನರಸಿ ಬಂದ ೫

ಗಂಡು ಹೆಣ್ಣಾನೆಗಳ ತಂಡ ಸಹಿತಲೆ ಬಂದು
ಕಂಡು ಜಲವನು ಈಂಟಿಗುಂಡಿ ಮಡುವನುಸಾರಿ
ಸೊಂಡಿಲಿಂ ಜಲವ ಭೂಮಂಡಲಕೆ ಬೀಸಾದಿ
ಚಂಡಿಗೊಳಿಸುತ ಧರಣಿಯ
ಅಂಡೆಲೆವ ಮದದ ಸ್ತ್ರೀಯರ ಕೂಡಿ

ಖಂಡಿಸುತೆ ಪುಂಡಗಜವಿರಲು ಶಾಪದ
ನೆಗಳು ಖತಿಗೊಂಡು
ಭಂಡು ಮಾಡಲು ಕಾಲಪಿಡಿದಾಕ್ಷಣಕೆ ಗುಂಡಿ
ಮಡುವಿನೊಳಗೆಳೆಯಲು ೬

ಮತ್ತೆ ಅತ್ತೆಳೆಯೆ ನೆಗಳು ಬಳಿಕಿತ್ತೆಳೆವುದುಗಜವು
ಸುತ್ತಲಿಹ ಕರಿಘಟೆಗಳೇನಿದದ್ಭುತವೆಂದು
ಮತ್ತೆ ಸತ್ವದಲೆಳೆಯೆ ತೆತ್ತಿಗನು ಬಾರದಿರೆ
ಚಿತ್ತದೊಳ್ ನೊಂದು ನಿಂದು ಅತ್ತಹಾಯ್ದವು
ತಮ್ಮಗುತ್ತಿಗುಳಿದಿಹ ಹಸ್ತಿ
ಇತ್ತ ಗಜರಾಜ ಕಾದುತಿರಲು ಹಲಕಾಲ ಬತ್ತಿ ಅಸುಗುಂದಿ
ಚಿತ್ತದಿ ತಿಳಿದು ಧ್ಯಾನಿಸುತ ಮತ್ತಾರು ಕಾಯ್ವರೆನುತ ೭

ಇಕ್ಕರ್ತರಿಂತು ಕಾದುತ್ತಿರಲು ಕರಿವರನ
ಸೊಕ್ಕು ಮುರಿದುದು ತಮವುಚೊಕ್ಕಿ ಮುಖವನು ನಭಕೆ
ಇಕ್ಕಿ ಕಿಕ್ಕಿರಿದು ಚಿರ್ರನೆ ಚೀರಿ ಬಸವಳಿಯೆ
ಸೊಕ್ಕಿದುದುನೆಗಳು ಬಳಿಕ
ಮುಕ್ಕುರು ದಿವ್ಯಸಾಗರ ವರುಷ ಪರಿಯಂತ
ಸಿಕ್ಕಿ ನಗಳೊಳು ಕಾದಿ ಕುಕ್ಕುರಿಸಿ ನೀರಿನೊಳು ದಿಕ್ಕನೊಡುತ್ತ
ಕಕ್ಕನೆ ಕರಗಿ ಜ್ಞಾನದಲಿ ಭಕ್ತವತ್ಸಲನ ನೆನೆದ ೮

ರಕ್ಷಿಸೆನ್ನನು ಬಿಡದೆ ಪಕ್ಷಿವಾಹನಗಮನ
ಯಕ್ಷಕಿನ್ನರ ಸೇವ್ಯ ರಾಕ್ಷಸಾಂತಕ ಜಗವ
ಕುಕ್ಷಿಯೊಳಗಿಂಬಿಟ್ಟು
ರಕ್ಷಿಸುವೆ ಭಜಕರನು ಮೋಕ್ಷದಾಯಕನೆ ಕಾಯೋ
ಲಕ್ಷ್ಮೀಶ ಕೇಶವ ಉಪೇಕ್ಷಿಸದೆ ನೀ ಬಂದು
ಭಕ್ಷಿಸುವ ನೆಗಳನೀ ಶಿಕ್ಷಿಸಲು ಬೇಕು
ಪಕ್ಷದನುಜಾಧ್ಯಕ್ಷ ಈಕ್ಷಿಸೆನ್ನಯ ಮೇಲೆ
ಅಕ್ಷಿಯನು ಇಟ್ಟುಬಂದು ೯

ಮುರಹರ ಮುಕುಂದ ನಾರಾಯಣಾಚ್ಯುತ
ಸರಸಿರುಹದಳನಯನ
ಪರಮ ಪಾವನ ಮೂರ್ತಿ ಕರುಣಿಸೆನ್ನನು
ನೆಗಳ ಬಂಧನವ
ಪರಿ ಹರಿಸೋ ಕ್ಷೀರಾಬ್ಧಿ ಶಯನನೆಂದು
ಪರಿ ಪರಿಯ ಸ್ತುತಿಸಲಾಕ್ಷಣ ಮಹಿಮ ಧ್ವನಿಗೇಳ್ದು
ಸಿರಿ ಮುಡಿಯ ನೇವರಿಸಿ ಗರುಡವಾಹನ
ನಾಗಿಕರದಿ ಚಕ್ರವ ಕೊಂಡು
ಭರದಿ ಭಕುತನ ಕಂಡು ಕರಿರಾಜಗಭಯವಿತ್ತ ೧೦

ಎಳೆನಗೆಯ ಸಿರಿ ಮೊಗದ ನಳಿನಾಯತೇಕ್ಷಣದ
ತೊಳಪ ಕದಪಿನ ಮಿಸುಪ ನವರತ್ನ ಕುಂಡಲದ
ಲಲಿತ ಕಂದರದ ಕೌಸ್ತುಭ ಹಾರದುರಸ್ಥಳದ
ಸುಳಿನಾಭಿ ಜಗಜಗಿಸುವ ಹೊಳೆ
ಹೊಳೆವ ಮಣಿಮಕುಟ
ತಿಲಕ ನಿಡುಹುಬ್ಬುಗಳ ಮುಕ್ತಾಫಲವ
ನೇಳಿವದಂತಪಂಕ್ತಿಯ
ಲಲಿತ ಚುಬುರದ ಚಾರು ಪೀತಾಂಬರನ ಆಲಿ
ಕೋರವಿಸೆ ಕಂಡ ೧೧

ಮೇಲೆ ಕೈವಾರಿಸುವ ಸುರರ ದುಂದುಭಿ ಮೊಳಗೆ
ಹೊಳೆಯ ಎತ್ತಿದ ತೋರ ಸತ್ತಿಗೆಯ ತೋರಣದ
ಸಾಲುಗಳ ಸಂದಣಿಯ ಸಂಭ್ರಮದ ಜಾಲವನು ಕಂಡುಗಜವು
ಪಾಲಿಸೈ ಗೋವಿಂದನಾಥ ಬಂಧು ತ್ರಾಹಿ
ಪಾಲಿಸೈ ಸುರವಂದ್ಯ ತ್ರಾಹಿ ಪಾಲಿಸೈ ಭಕ್ತರ
ಭವಾಬ್ಧಿಸಾರ ತ್ರಾಹಿ
ಪಾಲಿಸೈ ತ್ರಾಹಿ ಎನುತ ೧೨

ಗಡಗಡನೆ ನಡುಗತಿರೆ ಕಡಲಶಯನನು ಕಂಡು
ಕಡುಕೃಪೆಯೊಳ್ಳೈ ತಂದು ಮಡುವ ಧುಮುಕಿಯ ಗಜವ
ಪಿಡಿದಾಗ ವಾಮಕರದಿಂದಳೆಯನೆಗಳು ಸಹತಡಿಗೆ ಬರಲಾಗಕಂಡು
ಘುಡು ಘುಡಿಸಿ ಕೋಪದಿಂ ತುಡುಕಿ ಚಕ್ರವತೆಗೆದು
ಪಿಡಿದು ನೆಗಳನು ಕಡಿಯೆ ಒಡನಾಗ ನಿಜರೂಪ
ವಿಡಿದು ಗಂಧರ್ವಪತಿ ಪೊಡಮಟ್ಟು ಶಾಪ
ಬಿಡುಗಡೆಯಾಯಿತೆಂದು ನಡೆದು ೧೩

ಹರಿ ಬಳಿಕ ಕರಿವರಗೆ ವಿಶ್ವರೂಪವತೋರಿ
ತರಣಿಕೋಟಿ ಸಹಸ್ರತೇಜದಿಲ ರಂಜಿಸಿಯೆ
ಕರಿವರನ ಮೈದಡಹಲಾಕ್ಷಣಕೆ ಕರಿಚರ್ಮ
ಪರಿದುಹರಿವ್ಪೋಲೆಸೆದನು
ಕರವಿಡಿದು ಭಕುತನನು ಬೋಳೈಸಿ ನೀರಿನೋಳು
ಬಳಲಿದೆಯಾ ಎಂದು
ಕರುಣಾಕಟಾಕ್ಷದಿಂ ಕರಿವರನ ಸಹಿತ
ಗರುಡನ ನಡರಿ ಗಮಿಸಿದನು ಹರಿತನ್ನ
ವಾಸ ದೆಡೆಗೆ ೧೪

ಅವನುದಯ ಕಾಲದೊಳೆದ್ದು ಪೇಳುವನು
ಆವರಿದ ಭಕ್ತಿ ಭಾವದಲಿದನು ಕೇಳುವರು
ಅವರಿದನನು ಭವವ ಸ್ಮರಿಪರವರುಗಳು
ಪಾವನರು ಪುಣ್ಯಾತ್ಮರು
ಕೋವಿದರು ಧರಗೆ ಗಜರಾಜೇಂದ್ರ ಮೋಕ್ಷವನು
ಸಾವದಾನ ದಲಿದನು ನೇಮದಲಿ ಕೇಳ್ವವರ
ಮಾವಧೂರಮಣ ಚಿಪ್ಪಳಿಯ ಗೋಪೀನಾಥ
ನೆನೆದವರ ಕಾಯ್ವನೆಂದು ೧೫

## ೭೬

ಹರಿ ಭಕುತರಿಗೊಂದು ಶರಣಾರ್ಥಿ ಸಾಂಬ ಶಿವ
ಶರಣರಿಗೊಂದು ಶರಣಾರ್ಥಿ ಪ

ನರಲೋಕದೊಳಗೆ ಸಂಚಾರವ ಮಾಡುವ
ಹರಿದಾಸರಿಗೊಂದು ಶರಣಾರ್ಥಿ
ಪರಮಾತ್ಮ ಪರಿಪೂರ್ಣ ಎಲ್ಲ ಜೀವದೊಳೆಂದು
ಅರಿತಂಥವನಿಗೊಂದು ಶರಣಾರ್ಥಿ
ಮರೆಹೊಕ್ಕ ದೀನರನು ರಕ್ಷಿಪ ಪುಣ್ಯ ಪುರು
ಷರಿಗೊಂದು ಶರಣಾರ್ಥಿ
ಪುರುಷ ಪ್ರಯತ್ನದಿಂದುದ್ಯೋಗವನು ಮಾಳ್ಪ
ಸರಿವಂಥವರಿಗೊಂದು ಶರಣಾರ್ಥಿ ೧

ಧಾರಣಿಯೊಳು ಪೆಸರೊಡೆದು ರಂಜಿಸುವಂಥ
ಕಾರುಣಿಕರಿಗೊಂದು ಶರಣಾರ್ಥಿ
ಹೆದ್ದಾರಿ ಮಾರ್ಗದೊಳು ಸಾಲ್ಮರಗಳ ನೆಟ್ಟು ನೀರೆರೆ
ದವರಿಗೊಂದು ಶರಣಾರ್ಥಿ
ಮೂರು ಕಾಲದಿ ನಿತ್ಯ ಕರ್ಮವ ರಚಿಸುವ
ಚಾರು ಶೀಲರಿಗೊಂದು ಶರಣಾರ್ಥಿ
ಪಾರ ಮಾರ್ಥಿಕವನ್ನು ತಿಳಿದು ಸಂಸಾರ ನಿ
ಸ್ಸಾರ ಮಾಡಿದಗೊಂದು ಶರಣಾರ್ಥಿ ೨

ಕೆರೆಭಾವಿ ದೇವಾಲಯಗಳ ಕಟ್ಟಿಸಿ ದೇವರುತ್ಸವವನು ಬರಿಸುವಗೆ
ಹರಿದಿನತ್ರಯವ ಮನ್ನಿಸಿ ದ್ವಾದಶಿಯನು
ದ್ಧರಿಸಿ ಭುಂಜಿಪಗೊಂದು ಶರಣಾರ್ಥಿ
ಪರದಾರ ಪರದ್ರವ್ಯ ಪರದ್ರೋಹವಿಲ್ಲದ ಮಹಾ
ಪುರುಷರಿಗೊಂದು ಶರಣಾರ್ಥಿ
ಹರಿಹರರೊಳಗೆ ಭೇದವ ಮಾಡಿ ನಡೆಯದ
ದುರಿತ ದೂರರಿಗೊಂದು ಶರಣಾರ್ಥಿ ೩

ಸತ್ತು ಹುಟ್ಟುವ ಭವಶರಧಿಯ ಗೆಲುವಂಥ
ಉತ್ತಮರಿಗೊಂದು ಶರಣಾರ್ಥಿ
ನಿತ್ಯ ಸಾಲಿಗ್ರಾಮಂಗಳನು ಪೂಜಿಸಿ ಹರಿ
ತೀರ್ಥಗೊಂಬನಿಗೊಂದು ಶರಣಾರ್ಥಿ
ಕೃತ್ತಿ ವಾಸನ ಆಗಮೋಕ್ತದಿ ಪೂಜಿಪ
ಭಕ್ತಿವಂತರಿಗೊಂದು ಶರಣಾರ್ಥಿ
ತತ್ವ ವಿಚಾರ ವೇದಾಂತದ ಅರ್ಥವ ಯಾ
ವತ್ತರಿದವಗೊಂದು ಶರಣಾರ್ಥಿ ೮

ಅರವಟ್ಟಿಗೆಯನು ಚೈತ್ರದೊಳಿಕ್ಕಿ ಜನರಿಗೆ
ನೀರೆರಸಿದವರಿಗೊಂದು ಶರಣಾರ್ಥಿ
ಸಿರಿ ತುಳಸಿಯನ್ನು ನೇಮದಲಿ ಪೂಜಿಸುವಂಥ
ಹರಿ ಶರಣರಿಗೊಂದು ಶರಣಾರ್ಥಿ
ತರಣಿಯೆ ತ್ರಿಗುಣಾತ್ಮಕನೆಂದು ಹೃದಯದೊಳರಿ
ದೆರಗುವಗೊಂದು ಶರಣಾರ್ಥಿ
ಮರುಸುತನ ಕೋಣೆ ವಾಸ ಲಕ್ಷ್ಮೀಶನ
ಚರಣ ಪಂಕಜಕೊಂದು ಶರಣಾರ್ಥಿ ೫

## ೭೭

ಹೋಯಿತು ಪರಶುರಾಮನ ದಂಡಿಲಿ ನಷ್ಟ
ವಾಯಿತು ಜನರೆಲ್ಲ ಹೊಡೆತ ಕಡಿತದಿ ಪ

ಮೇಧಿನಿಯೊಳಗಣ ಜನರಿಂಗೆ ದಂಡಿಂದ
ಹೋದುದು ಮನೆಮಾರು ದನಕರು ಮಣಿ ಮುತ್ತು
ತೀರ್ದುದು ಕಂಚು ತಾಮ್ರಗಳು ಬಹುಕಾಲ
ಸಾಧಿಸಿದೊಡವೆ ಸಾಧನ ಸಂಪತ್ತುಗಳೆಲ್ಲ ೧

ಉಡುವ ತೊಡುವ ಜವಳಿ ಅಡಕೆ ಮೆಣಸು ಭತ್ತ
ಕಡಿತ ಕಂಠಗಳಾಬ್ರ ಮುಡಿ ಉಪ್ಪುಗುಢಕಲ್ಲು

ಗಡಿಗೆ ಮಡಕೆ ಎಣ್ಣೆ ಕೊಡವು ಕಬ್ಬಿಣದ ಕತ್ತಿ
ಅಡಿಯಿಟ್ಟ ಚಿಟ್ಟು ಪಾಟ್ಟಿಗಳೊಂದುಳಿಯದಂತೆ ೨

ಕೊಟ್ಟದೊಳಗೆ ಇಟ್ಟವಸ್ತು ವಡವೆಯೆಲ್ಲ
ನಷ್ಟವಾಯಿತು ಹಾರೆ ಕೊಡಲಿ ಗುದ್ದಲಿ ಕುಳ
ಬಟ್ಟಲು ಹಂಡೆ ಕೊಪ್ಪರಿಗೆ ಇಕ್ಕುವ ಗುಂಡಿ
ಹುಟ್ಟು ಚಲುಕದ ಮಣಿ ಮರಿಗೆ ಸರ್ವಸ್ವವು ೩

ಮುತ್ತಿನ ಸರ ಕೆಂಪುಗೆತ್ತಿಗೆ ನಗ ಮುದ್ರೆ
ಯೊತ್ತು ಉಂಗುರ ಜಪಮಣಿ ಮಾಲೆ ಹವಳ ಯಾ
ವತ್ತು ಪೂಜಿಪ ಪಂಚ ಮೂರ್ತಿಯಾರತಿ ಸೊಡ
ರೆತ್ತುವ ನಗನಾಣ್ಯವೆಲ್ಲ ಸುಲಿಗೆಯಿಂದ ೪

ಅಂಧಕಾರಕೆ ನೆರವಾದಂತೆ ದುರ್ಭಿಕ್ಷ ಬಂದಿತು ಸಂಗಡ
ತಂಡುಲ ಗದ್ಯಾಣವೊಂದಕ್ಕೈದಾಗಿ ಮುಗಿತು
ಹರಿನಂದನ ಕೋಣೆ ಲಕ್ಷ್ಮೀಶನೊಬ್ಬನೆ ಬಲ್ಲ ೫

## ಆತ್ಮನಿವೇದನೆ

### ೭೮

ಇನ್ನೇತರೊಳಗಾಸೆ ಎನಗಿಲ್ಲವೋ ಈಗಳಿನ್ನು ಹರಿನಾಮ
ಸಂಕೀರ್ತನೆಯೊಂದು ಹೊರತಾಗಿ ಪ

ನೋಡಿ ಸಾಕಾಯ್ತು ಲೋಕದ ಪ್ರಪಂಚವನು ಪೇ
ಚಾಡಿ ಸಾಕಾಯ್ತು ದರಮಂ ಪೊರೆಯಲು
ಆಡಿ ಸಾಕಾಯ್ತು ಸುಜನರೊಳ ನೃತಗಳನು ಒಡ
ನಾಡಿ ಸಾಕಾಯ್ತು ಕುಜನರ ಸಂಗದೊಳಗೆ ೧

ಉಂಡು ಸಾಕಾಯ್ತು ಸಂಸಾರ ಸುಖ ದುಃಖವನು ನಾ
ಕಂಡು ಸಾಕಾಯ್ತು ಸುಜನರ ಭಂಗವನು
ತಂಡಿ ಸಾಕಾಯ್ತು ಪರಸೇವೆಯನು ಮಾಡಿ ಜನ
ರಂಡಲೆದು ಬೇಡಿ ಸಾಕಾಯ್ತು ಈ ಭವಕೆ ೨

ತಿರು ತಿರುಗಿ ಸಾಕಾಯ್ತು ತಲೆ ಹಳಿತ ನಾಯಂತೆ
ಪರಿ ಪರಿಯ ದುಃಖಗಳನುಣ್ಣುತ
ಚರಿಸಿದೆನು ಮರುತಸುತ ಕೋಣೆ ಲಕ್ಷ್ಮೀರಮಣ
ಇರಿಸಿದಂತಿರ ಬೇಕು ಸಕಲಜನರು ೩

## ೭೯

ಏನ ಮಾಡಲಿ ಎನ್ನ ರೋಗಕೆ ರಾಮ
ಧ್ಯಾನದಮೃತವುಂಡು ಪೋಗ ಬೇಕಲ್ಲದೆ ಪ

ಗೂಡಿನೊಳಗೆ ಜರೆ ಮುತ್ತಿತು ಅದಕೆ ಬಲ
ಗೂಡಿ ರೋಗವು ಮತ್ತೆ ಪುಟ್ಟಿತು ಕಾಡಿನೌಷಧಿಯ
ಕೊಂಡು ತೀರಿತು ನಿತ್ಯ ಮಾಡುವ ಜಪತಪ ನಿಂತಿತು ೧

ಯಾರಾರೇನೆಂದುದೆಲ್ಲವ ಮಾಚಿತು ಅದು
ಸಾರ ನಿಸ್ಸಾರವಾಗಿ ಹೋಯಿತು ಮಾರುದೂರ
ನಡೆಯೆಕಾಲುಬತ್ತಿತು
ಶರೀರದೊಳಗೆ ಕ್ಷೀಣವಾಯಿತು ೨

ವಾಂತಿ ಭ್ರಾಂತಿಗಳೆರಡಾಯಿತು ರೋಗ
ಶಾಂತಿಯಿಲ್ಲದೆ ಚಿಂತೆ ಬಂದಿತು ಮುಖದಕಾಂತಿ
ಕಮಲಕಂಡಿತು ಕಾಲ
ಬಂತೊ ಎಂಬಂತೆ ಮನವಾಯಿತು ೩

ಹಿಂದೆ ಮಾಡಿದ ಪಾಪ ಬಂದಿತು ಈಗ
ಳೊಂದುರುಪಾಗಿ ಎನ್ನ ಕಾಡಿತು ಎಂದು
ಮನದಿಹಂಬಲವಾಯಿತು ಇನ್ನು
ಎಂದನೆಂದರೆ ದನಿ ಕುಂದಿತು ೪

ಕಾಮನಯ್ಯನ ಚಿಂತೆ ಬಂದಿತು ರೋಗ
ನಾಮಸ್ಮರಣೆಯಿಂದ ಹೋಯಿತು ಕ್ಷೇಮ ಕುಶಲಕೆಲ್ಲ
ಭೀಮನ ಕೋಣೆ ಲಕ್ಷ್ಮೀರಮಣನಪ್ಪಣೆಯಿದ್ದಂತಾಯಿತು ೫

## ೮೦

ಬಿಡದೆ ರಕ್ಷಿಸೊ ಎನ್ನನ್ನು ಜಗದೊಡೆಯ ನಂಬಿದೆ
ನಿನ್ನ ಚರಣಾರವಿಂದವ ಪ

ಪರಮ ಪುರುಷನಿನ್ನ ಚರಣ ಪಂಕಜವನ್ನು
ನಿರುತ ನಂಬಿದೆ ಎನ್ನದುರಿತ ಪರ್ವತವನ್ನು
ಸುರಪ ವಜ್ರದಿ ಗಿರಿಗಳನು ಖಂಡಿಸಿದವ್ರೋಲ್
ತರಿದು ರಕ್ಷಿಸೋ ಮುರಹರನೆ ಸ್ಮರಣೆಯಿತ್ತು ೧

ಮಕ್ಕಳಾಟಿಕೆಯಿಂದ ಕೆಲವು ದಿವಸಸಂದು
ಸೊಕ್ಕಿ ಜವ್ವನ ಕಾಲ ಬರಲುಸ್ತ್ರೀಯರಿಗೆ ಕ
ಣ್ಣಿಕ್ಕಿ ಮುದದಿ ದಿನಗಳೆದು ಮರೆತೆನೀಗಳು
ಸೀತಾ ರಮಣ ಸ್ಮರಣೆಯಿತ್ತು ೨

ಚಿಂತೆಯೊಳಗೆ ವಿಧಿ ಬರೆದ ಲಿಖಿತವೆಲ್ಲ
ಸಂತು ದರ್ಜನರೊಡನಾಟದೊಳಗೆ ಕಾಲ
ವಿಂತು ಸವೆದು ಜರೆ ಮುಸುಕಿತೆನೆಗೆ ಲಕ್ಷ್ಮೀ
ಕಾಂತ ನಿನ್ನಯ ನಾಮ ಸ್ಮರಣೆಯಂತ್ಯದೊಳಗಿತ್ತು ೩

## ೮೧

ರಕ್ಷಿಸೆನ್ನನು ಲಕ್ಷ್ಮೀರಮಣ ಸುರಪಕ್ಷಪಾವನ ಪದ್ಮಚರಣ
ಪಕ್ಷಿವಾಹನ ಕಮಲಾಕ್ಷ ಭಕುತಜನ
ಮೋಕ್ಷದಾಯಕ ಹಿರಣ್ಯಾಕ್ಷ ಸಂಹರಣ ಪ

ಅಂಗಜಪಿತ ಚಾರುಚರಣ ಮೋಹನಾಂಗ
ಅಸುರರ ಸಂಹರಣ
ತುಂಗ ವಿಕ್ರಮ ಘನ ಸಂಗರ ವಿಜಯ
ಶ್ರೀ ರಂಗ ನಾಮವೆ ಪಾಪಭಂಗ ಸಂಹರಣ ೧

ಧರೆಯ ನಳೆದ ಚಾರುಚರಣ ಘೋರ
ದುರಿತನಾಶನ ನಾಮಸ್ಮರಣ
ಸ್ಮರಿಸುವ ಸುಜನರಾಭರಣ ಗೋವರ್ಧನೋದ್ಧರಣ
ಭೂರಮಣ ತುಳಸಿ ಮಾಲಾಭರಣ ೨

ಕಮಲಭವಾರ್ಜಿತ ಚರಣ ಚಾರುವಿಮಲ ಭಾಸ್ಕರ ಶಶಿಕಿರಣ
ಸುಮನಸ ಮುನಿಭಕ್ತರಿಗೆ ಕಾಮಿತಧೇನು
ವಿಮಲಾತ್ಮಕ ಕಾಮಪಿತ ಹೇಮಾಭರಣ ೩

ವಾಣಿ ಪತಿಯ ಪೆತ್ತ ಸುಗುಣ ಮಾಯಾಶ್ರೇಣಿ
ಪೂತನಿಯ ಸಂಹರಣ
ಮೇಣಹಿಶಯನಲಂಕಾರ ಮಾಣಿಕ್ಯದಾಭರಣ
ಬಾಣಾಸುರಖರ ಹರಣ ೪

ಕುಂತಿಸುತರ ಮೇಲೆ ಪ್ರಾಣ ಕರುಸಂತತಿಗಳ
ಮೇಲೆ ಬಾಣ
ಎಂತು ಬಣ್ಣಿಪೆ ನಿನ್ನ ಮಹಿಮೆಯ ಶ್ರೀ ಲಕ್ಷ್ಮೀಕಾಂತ
ಭೀಮನಕೋಣೆವಾಸಿ ನಾರಾಯಣ ೫

# ತಾತ್ವಿಕ ಹಿನ್ನೆಲೆಯ ಹಾಡುಗಳು

## ೮೨

ಅರ್ಥವಿಲ್ಲದ ನರನು ವ್ಯರ್ಥ ಬಹುಕಾಲ
ಪೃಥ್ವಿಯೊಳು ಬಾಳ್ವಡವನೆ ಪುರುಷಾರ್ಥ ಪ

ನೆಂಟರಿಷ್ಟರ ಮನೆಗೆ ಪೋದರಾ ಬಾಂಧವರು
ಒಂಟೆಯಂದದಿ ನಿನ್ನ ನೋಡುತಿಹರು
ಪಂಟಿಯನು ತೆಗೆಯಲಿಕೆ ಬಂದನೆಂಬರು ಒಳಗೆ
ಗಂಟಲೊಣಗಿದವರಿಗೆ ತೃಷೆ ಕೇಳರೋ ೧

ಹತ್ತು ಮಂದಿಯ ನಡುವೆ ಕುಳ್ಳಿರಲಿಕವರು ಗೋ
ಣೆತ್ತಿ ನೋಡರು ಕೂಡೆ ಮಾತಾಡರು
ವಿತ್ತವಿದ್ದವ ಬಂದಲೆದ್ದು ಕೊಂಡುಪಚರಿಸಿ
ಪುತ್ರ ಮಿತ್ರ ಕಳತ್ರ ಸುಖ ಕೇಳ್ವರೋ ೨

ಸಕ್ಕರೆಗೆ ಸಮವೆನಿಪ ಬೆಲ್ಲ ಜಲ ಜೀರಿಗೆಯ
ನಿಟ್ಟು ಹರಿವಾಣದಲಿ ತಂದಿಡುವರೋ
ತೆಕ್ಕೊಳ್ಳಿರೆಂದು ಸನ್ಮಾನಿಸುತ ಸ್ನಾ
ನಕ್ಕೆ ಏಳಿರೆಂದುಡಲು ಮಡಿ ಕೊಡುವರೋ ೩

ಕೊಟ್ಟು ಮಣೆ ಕುಡಿ ಬಾಳೆಯನು ಮಾಡಿ ಕುಳ್ಳಿರಿಸಿ
ಅಟ್ಟದನು ಸಾಲ್ಗೊಳಿಸಿ ನೀಡುತಿಹರೋ
ದುಷ್ಟಗೆ ಮನೋಹರಗಳೆನಿಸುತಿಹವಗ್ಗರಣೆ
ಕೊಟ್ಟರ್ದ ಶಾಖಗಳನುಣಬಡಿಪರೋ ೪

ಕಡುಬು ಕಜ್ಜಾಯ ಪಾಯಸ ಕ್ಷೀರದಧಿ ಘೃತವ
ಸಡಗರಿಸಿ ಮೃಷ್ಟನ್ನ ಪಾನದಿಂ
ಕಡು ಹರುಷದಿಂ ತೃಪ್ತಿ ಪಡಿಸುವರು ಧನಿಕನನು
ಬಡವಗಿಕ್ಕುವ ಕೈಯ ಲಕ್ಷ್ಮೀಶ ಬಲ್ಲ ೫

## ೮೩

ಇಂದಿನಾಜನ್ಮದಲಿ ದರಿದ್ರನು
ಹಿಂದಿಲ್ಲ ಮುಂದಿಲ್ಲ ಇಂದು ಕೊಡಲಿಕೆ ಇಲ್ಲ
ಎಂದೆಂದಿಗೂ ಹುಟ್ಟು ದರಿದ್ರನು ಪ

ಮುಂದಿನ ಜನ್ಮದಲಿ ದಾನ ಧರ್ಮಗಳನ್ನು
ಅನ್ನವನು ಅತಿಥಿಗಿಕ್ಕದಕಾರಣ
ಚನ್ನಾಗಿ ವ್ರತ ನೇಮಗಳನು ಶಿವ ಪೂಜೆಯನು ತನ್ನ
ಕೈಯಾರೆ ಮಾಡದಕಾರಣ ೧

ತೀರ್ಥಕ್ಷೇತ್ರಗಳಲ್ಲಿ ಗೋದಾನ ಧನವ ಸತ್ಪಾತ್ರಕೀಯಲು
ಇಲ್ಲದ ಕಾರಣ
ಮಾತೃ ಪಿತೃ ಗುರುದೇವತಾ ಭಕ್ತಿಯಿಲ್ಲದಿರೆ ಧಾತ್ರಿಯೊಳು
ದರಿದ್ರವದುಕಾರಣ ೨

ಬೇಡುವುದು ಪರರೊಡನೆ ಕಾಡುವುದು ಕೊಡದಿರಲು
ಮಾಡುವುದು ಕೋಪವನು ಅದು ಕಾರಣ
ಗೂಡಿನೊಳು ರುಜೆರೋಗ ಹುಟ್ಟಿದಣಿಯುತ್ತಿಹುದು
ರೂಢಿಯೊಳು ದರಿದ್ರವದುಕಾರಣ ೩

ಉಣ್ಣಲುಡಲಿಕೆ ಇಲ್ಲ ಹೆಣ್ಣಿನಲಿ ಸುಖವಿಲ್ಲ ಬಣ್ಣ
ಬಂಗಾರವಿಲ್ಲದು ಕಾರಣ
ತಣ್ಣನಿರಲಿಕೆ ಒಂದು ಮನೆಯಿಲ್ಲ ಸ್ಥಳವಿಲ್ಲ
ಮುನ್ನದಾನವನು ಮಾಡದಿಹಕಾರಣ ೪

ಸಿರಿವಂತನಾಗ ಬೇಕಾದರೆ ಶಿವಾರ್ಚನೆಯ
ನೆರೆಮಾಡಿ ಭಕ್ತೀಯೊಳುದಾರಿದ್ರವ ಪರಿಹರಿಸಿ
ಮರುತ ನಿಲತ ಕೋಣೆ ಲಕ್ಷ್ಮೀರಮಣ
ನೊಲಿದವರಿಗೆ ಭಾಗ್ಯ ಬಹುದದುಕಾರಣ ೫

## ೮೪

ಇಂದಿನ ದಿನ ಸುದಿನ ನಾಳೆಗೆಂದರೆಂದು ಕಠಿಣ
ಮಂದಮತಿಯು ನೀನಾಗದೆ ಈಗ ಮುಕುಂದನ ನಾಮ
ಕೀರ್ತನೆಯ ಮಾಡುವುದಕೆ ಪ

ಯೋಗಿಗಳೊಡನಾಡು ವಿಷಯದ ಭೋಗವ ನೀಡಾಡು
ಆಗಳು ಈಗಳು ಯಾವಾಗಲೂ ಪೊಲೆಗೂಡಿನೊಳಗೆ
ನಿನ್ನ ನೀ ತಿಳಿವುದಕೆ ೧

ಅಸ್ಥಿರ ದೇಹವಿದುನಾನಾವಸ್ಥೆ ಬಾಧಿಸುತಿಹುದು
ಕಸ್ತೂರಿರಂಗನ ದಾಸರೊಡನೆ ಉದಯಾಸ್ತಮಾನವು
ಬಿಡನೊಡನಾಡುವುದಕೆ ೨

ಸಾಧು ಸಂಗತಿಯಿಂದ ಪಾಪವಿಚ್ಛೆದನವದರಿಂದ
ಸಾಧಿಸಲಹುದು ಭೀಮನ ಕೋಣೆವಾಸ ಚಿದಾನಂದ
ಲಕ್ಷ್ಮೀರಮಣನ ಪೂಜಿಸಲಿಕೆ ೩

## ೮೫

ಇದ್ದರೆ ಹೀಗೆ ಇರಬೇಕು ಇಲ್ಲದಿದ್ದರೆ ಕಾಯವ ಬಿಡಬೇಕು
ಶುದ್ಧ ಚಿತ್ತವಾಗಿ ಹೃದಯದೊಳಿದ್ದ ವಸ್ತುವನ್ನು ನಿನ್ನ
ಬುದ್ಧಿಯಿಂದ ನೀನೆ ತಿಳಿಯುತ್ತಿದ್ದು ಜೀವನ್ಮುಕ್ತನಾಗಿ ಪ

ಕಲ್ಲು ಮರಳು ಕಾಷ್ಠತರುಗಳಲ್ಲಿ
ಜಲದಿ ಜೀವ ನಿಚಯದಲ್ಲಿ ತೃಣ ಸಮೂಹ
ಗಿರಿಗಳಲ್ಲಿ ಚರಿಸುವ
ಹುಲ್ಲೆ ಕರಡಿ ವ್ಯಾಘ್ರ ಸಿಂಹದಲ್ಲಿ ಪಕ್ಷಿ ನಾನಾಮೃಗ
ಗಳಲ್ಲಿ ವಸ್ತುವೊಬ್ಬನಲ್ಲದಿಲ್ಲವೆಂದು ಭಾವಿಸುತ್ತ ೧

ದ್ರಷ್ಟವಾಗಿ ತೋರ್ಪುದೆಲ್ಲ ನಷ್ಟವಾಗಿ ಪೋಪುದೆಂದು
ದಿಟ್ಟನಾಗಿ ತಿಳಿದುಜ್ಞಾನ ದೃಷ್ಟಿಯಿಂದಲೆ
ದುಷ್ಟಜನರ ಸಂಗವನ್ನು ಬಿಟ್ಟು ಅರಿಗಳರುವರನ್ನು
ಕುಟ್ಟಿ ಕೆಡಹಿ ಆಶಪಾಶವೆಂಬ ಹಗ್ಗವನ್ನು ಹರಿದು ೨

ಗೇರು ಹಣ್ಣಿನ ಬೀಜ ಹೊರಸಾರಿ ಇರ್ದವೊಲು ಸಂ
ಸಾರವೆಂಬ ವಾರಿಧಿಯೊಳು ಕಾಲಗಳೆಯುತ
ನೀರ ಮೇಲಕಿದ್ದ ನಳಿನದಂತೆ ಹೊರಗೆ ಬಿದ್ದು ಬಕನ
ವೈರಿ ಕೋಣೆ ಲಕ್ಷ್ಮೀಪತಿಯ ಚಾರು ಚರಣ ಸ್ಮರಣೆಯಿಂದ ೩

## ೮೬

ಇವರಿಂದಲೆ ಕೆಟ್ಟಿತು ಜಗವು
ಇವರರುವರ ಹಿಡಿದು ಬಂಧಿಸಿ ನೀವು ಬೇಗ ಪ

ಬಿಮ್ಮನೆ ಬಿಗಿದು ಕಾಮನ ಕಟ್ಟೆ ಅವನ
ತಮ್ಮನ ಹಿಡಿದು ತಲೆಯ ಕುಟ್ಟಿ
ಸುಮ್ಮನೆ ಲೋಭನ ಕೈ ಕಟ್ಟಿ ಗುಮ್ಮಿ
ಜಮ್ಮನೆ ಮೋಹನ ದವಡೆಗೆ ತಟ್ಟಿ ೧

ದಂಡಿಸಿರೈ ಮದವೆಂಬುವನ ತಲೆಯ
ಚಂಡ ಹಾರಿಸಿ ಮತ್ತೆ ತುಡಿಗೆ ಮತ್ಸರನ
ಮಂಡೆ ಮಂಡೆಗೆ ತಟ್ಟಿರಿ ಇವರ
ಬಿಡದೆ ಹೆಂಡಿರು ಮಕ್ಕಳಸೆರೆಯೊಳಗಿಕ್ಕಿ ೨

ಅರಿಗಳನರುವರ ಜಯಿಸಿ ಸದ್ಗುರುವಿನ
ಕರುಣ ಕಟಾಕ್ಷವ ಧರಿಸಿ
ಪರಮಾತ್ಮ ಪರಿಪೂರ್ಣನೆನಿಸಿ
ಹರಿಸೂನು ಕೋಣೆ ಲಕ್ಷ್ಮೀಶನ ಸ್ಮರಿಸಿ ೩

## ೮೭

ಈಗಳೋ ಆಗಳೋ ಇನ್ನಾವಾಗಳೋ ಜೀವನಿದು
ಗೂಡಿನಿಂದ ಸಾಗಿ ಹೋಗುವಂಥ ಕಾಲ ಪ

ಏಳು ಏಳು ಎಂದು ಯಮನ ಆಳು ಬಂದು ಪಾಶವಿಕ್ಕಿ
ಕಲ್ಲು ಮುಳ್ಳು ಮೇಲೆ ಎಳೆದು ಒಯ್ವ ಹೊತ್ತು ೧

ಅಷ್ಟಪುರದ ಕಾವಲವರು ಕಟ್ಟ ಕಡೆಗೆ ತೊಲಗೆ ಬಾಯ
ಬಿಟ್ಟು ಹೊರಗೆ ಜೀವ ಕೆಂಗಟ್ಟು ಹೋಗುವಂಥಕಾಲ ೨

ದಾರಿಯೊಳಗೆ ಪಾಪಿಗಳನು ಘೋರ ಬಡಿಸಿ ದಂಡದಿಂದ
ಬೇರು ಗೋಲೆಯ ಕೊಂದು ಯಮನ ಊರಿ
ಗೊಯ್ವ ಹೊತ್ತುವ್ಯಾಳ್ಯಾ ೩

ಹೆಂಡಿರಿಲ್ಲ ಮಕ್ಕಳಿಲ್ಲ ಬಂಧು ಬಳಗವಿಲ್ಲವಲ್ಲಿ
ಖಂಡವನ್ನು ಕಿತ್ತು ನರಕದ ಗುಂಡಿಗದ್ದಿ ತೆಗೆವ ಕಾಲ ೪

ಬುದ್ಧಿವಂತರಾದರೆಚ್ಚರಿದ್ದು ಪಾಪವನ್ನು ಮಾಡ
ದಿದ್ದು ಮರುತಸುತನ ಕೋಣೆ ಲಕ್ಷ್ಮೀಪತಿ ಸ್ಮರಣೆಯಿದ್ದು
ಭವನಗೆಲವ ಹೊತ್ತು ೫

## ೮೮

ಏನ ಮಾಡಿರಿಲ್ಲವೋ ನೀ ಪಡೆಯದ ಮೇಲಿನ್ನೇನ
ಮಾಡಿದರಿಲ್ಲವೋ ಪ

ಆಸೆ ಮಾಡಿದರಿಲ್ಲ ದೇಶ ತಿರುಗಿದರಿಲ್ಲ
ಈಶರೀರವ ದಣಿಸಿ ಘಾಸಿ ಮಾಡಿದರಿಲ್ಲ ೧

ಮೊಟ್ಟೆಯನು ಹೊತ್ತರಿಲ್ಲ ಕಷ್ಟ ಮಾಡಿದರಿಲ್ಲ
ಘಟ್ಟ ಬೆಟ್ಟವ ಹತ್ತಿ ಕುಟ್ಟಿ ಕೊಂಡರು ಇಲ್ಲ ೨

ಟೊಂಕ ಕಟ್ಟಿದರಿಲ್ಲ ಲಂಕೆಗೆ ಹೋದರೂ ಇಲ್ಲ
ಬೆಂಕಿ ಬಿಸಿಲೊಳು ತಿರುಗಿ ಮಂಕು ಮರುಳಾದರಿಲ್ಲ ೩

ಊರನೀ ಬಿಟ್ಟರಿಲ್ಲ ಪರ ಊರಿಗೆ ಹೋದರಿಲ್ಲ
ಆರಿಗ್ಹೇಳಿದರಿಲ್ಲವಾರಸೇರಿದರಿಲ್ಲ ೪

ವಾತಸುತನ ಕೋಣೆ ಲಕ್ಷ್ಮೀಶನು
ಆತ ಕೊಟ್ಟರೆ ಉಂಟು ಆತ ಕೊಡದರಿಲ್ಲ ೫

## ೮೯

ಏನಾದರೇನಲ್ಲಿ ಇರಕೂಡದು ಹೋಗಿ
ಆನಂದ ಕಾನನದೊಳಿರೆ ಸುಖವದು ಪ

ನರಮನುಜರೊಳಗಿಲ್ಲಿ ಜನಿಸಿಭೂತಳಕೆಲ್ಲ
ದೊರೆಯೆನಿಸಿ ಭೋಗ ಪಡಿಸುವುದರಿಂದಲು
ನೊರಜಾಗಿ ಜನಿಸಿ ಕಾಶಿಯೊಳು ಮಣಿ ಕರ್ಣಿಕೆಯ
ಸರಸಿಯೊಳು ಚರಿಸಿ ಮಡಿದರೆ ಮುಕ್ತಿಯಹುದು ೧

ಕೊಕ್ಕದಲಿ ವನಿತೆ ಮನೆಮಕ್ಕಳಲಿ ಪಶುಗಳಲಿ
ಹೆಕ್ಕಳದೊಳಿಲ್ಲಿ ಸಾವುದರಿಂದಲು
ಹೊಕ್ಕು ಮನೆ ಮನೆ ಬಿಡದೆ ಕಾಶಿಯಲಿ ತಿರಿದುಂಡು
ಡೊಕ್ಕೆಯನು ಬಿಡೆ ಮೋಕ್ಷ ಪದವಿಯಹುದು ೨

ಹರಿ ಸುತನ ಕೋಣೆ ಲಕ್ಷ್ಮೀಪತಿಯ ಪಾದ
ಸರಸಿರುಹದಲಿ ಜನಿಸಿರ್ದ ಜಾಹ್ನವಿಯಲಿ
ನರ ಮುಳುಗಿ ಕಾಶಿ ವಿಶ್ವೇಶ್ವರನ ಸನ್ನಿಧಿಯೊಳೊರಗಿದರೆ
ಮರಳೆ ಜನ್ಮಕೆ ಬಾರೆನೋ ೩

## ೯೦

ಏನಿದು ಬರಿ ಮಾಯೆ ತೋರ್ಪುದಿದೆಲ್ಲವು ಪುಸಿಮಾಯೆ
ಮಾನಿನಿ ಮನೆಮನೆ ವಾರ್ತೆ ಮಕ್ಕಳು
ತಾನಿದು ಕನಸಿನ ಬಾಳ್ವೆ ನಿದಾನ ಪ

ಕೇರೆಯ ನುಂಗಿ ಓತಿ ಕೊಸರುತಿರಲು ತೆರೆಯಿತೆನಗೆ ಕಣ್ಣು
ವಾರೆ ಮಾಡಿದರದು ತಿಳಿವುದೋ ಉಳಿವುದೋ
ತೆರೆಯಕ್ಷುಧೆಗೇನು ಕಾಣೆನುಗತಿಯ ೧

ಯಾವಾವ ತನು ವಿಡಿದು ಬರುವುದೋ ಆವಾವ ಠಾವಿನಲಿ
ಜೀವ ಜೀವವ ತಿಂದು ಜೀವಿಸಿಕೊಂಡು
ಸಾಯುತ ಜನಿಸುತಲಿರುವುದು ಪ್ರಾಣಿ ೨

ತಿಳಿಯಲೊಂದಕೆ ಒಂದು ತಿನಿಸಿಗೆ ಬೆಲೆ ಮಾಡಿದವ ಬೇರೆ
ಬಳಗು ಹೊರಗು ತಾನೆ ಬೆಳಗುತಲಿರುವನು
ಚಲನ ಭವನ ಕೋಣೆ ಲಕ್ಷ್ಮೀರಮಣ ೩

## ೯೧

ಏನು ಇದ್ದರೇನು ನಿನ್ನ ಸಂಗದ ಸಂಗಡ ಬಾರದೇನು
ದಾನ ಧರ್ಮವ ಮಾಡಿದ್ದೊಂದು ಬೆನ್ನಬಿಡದದೇನು ಪ

ಆಳು ಕಾಳು ಮಂದಿ ಮನುಷರು ಬಹಳವಿದ್ದರೇನು
ಮಾಳಿಗೆ ಕೈಸಾಲೆ ಚಂದ್ರಶಾಲೆಯಿದ್ದರೇನು
ನೀಲ ಮುತ್ತು ಕೆಂಪಿನುಂಗುರ ಕೈಯಲಿದ್ದರೇನು
ಕಾಲನವರು ಎಳೆಯುತಿರಲು ನಾಲಗೆಗೆ ಬಾರದೇನು ೧

ನೆಟ್ಟ ಹತ್ತಿಲು ತೋಟ ತೆಂಗು ಎಷ್ಟುತಾನಿದ್ದರೇನು
ಹಟ್ಟಿಯೊಳಗೆ ಹಸುವು ಮಹಿಷಿ ಸಾವಿರವಿದ್ದರೇನು
ಪಟ್ಟೆ ಶಾಲು ಚಿನ್ನದ ಕುಳದ ಘಟ್ಟಿಯಿದ್ದರೇನು
ಕಟ್ಟಿಯಿಟ್ಟ ಗಂಟುನಿನ್ನ ಸಂಗಡ ಬಾರದೇನು ೨

ಲಕ್ಷವಿತ್ತ ಜಯಿಸಿ ರಾಜ್ಯ ಪಟ್ಟವಾದರೇನು
ಕಟ್ಟಿದಾನೆ ಮಂದಿ ಕುದುರೆ ಹತ್ತಿರಿದ್ದರೇನು
ನೆಟ್ಟನೆ ಜೀವಾತ್ಮ ಗೂಡ ಬಿಟ್ಟು ಪೋಗದೇನು
ಕುಟ್ಟಿ ಕೊಂಡಳುವುದರೆ ಮಂದಿ ಎಷ್ಟು ಇದ್ದರೇನು ೩

ಮಕ್ಕಳು ಮೊಮ್ಮಕ್ಕಳು ಹೆಮ್ಮಕ್ಕಳಿದ್ದರೇನು
ಚಿಕ್ಕ ಪ್ರಾಯದ ಸತಿಯು ಸೊಸೆದಿಕ್ಕಳಿದ್ದರೇನು
ಲೆಕ್ಕವಿಲ್ಲದ ದ್ರವ್ಯ ನಿನಗೆ ಸಿಕ್ಕುಯಿದ್ದರೇನು
ಡೊಕ್ಕೆ ಬೀಳೆ ಹೆಣವ ಬೆಂಕಿಗಿಕ್ಕಿ ಬರುವರೋ ೪

ಹೀಗೆ ಎಂದು ನೀನು ನಿನ್ನ ತಿಳಿದು ಕೊಳ್ಳಬೇಕೋ
ಆಗೋದ್ಹೋಗೋದೆಲ್ಲ ಈಶ್ವರಾಜ್ಞೆ ಎನ್ನ ಬೇಕೋ
ಮಾಗಧ ವೈರಿ ಕೋಣೆ ಲಕ್ಷ್ಮೀರಮಣನ ಭಜಿಸಬೇಕೋ
ಯೋಗ ಮಾರ್ಗದಿಂದ ನೀನು ಮುಕ್ತಿ ಪಡೆಯ ಬೇಕೋ ೫

## ೯೨

ಏನು ಮರುಳಾಗುವೆಯೇ ಎಲೆಮಾನವ
ನಿನ್ನ ಮಾನಿನಿಯ ಗುಣಕೆ ನೀ ಹಿಗ್ಗಿ ಹಿಗ್ಗಿ ಪ

ದಾನ ಧರ್ಮಗಳ ಕೊಡಬೇಕೆಂದರೊಡ ಬಡಲು
ಹೀನ ಗುಣಗಳನೆ ತಾ ಸೇವಿಸುವಳು
ಜ್ಞಾನ ಮೋಕ್ಷಾದಿಗಳ ಹಾದಿಯನುಕಟ್ಟಿ ಭವ
ಕಾನನವನೆ ಹೊಗಿಸಿ ತೊಳಲಿಸುವಳು ೧

ನರಕವನು ತನ್ನಲ್ಲಿ ನೆಲೆಮಾಡಿ ಕೊಂಡಿಹಳು
ಪರಿಪರಿಯ ಮೋಹಗಳ ಬೀಸುತಿಹಳು
ಸ್ಮರನ ಬಾಣವ ಮಾಡಿ ಸಾಲು ಗೊಲೆಕೊಲ್ಲುವಳು
ಅರಿಯದವರಂತೆ ಮಿಣ್ಣಗೆ ಇರುವಳು ೨

ತನ್ನಮನ ಬಂದಂತೆ ಚರಿಸುವಳು ಪಗಲಿರುಳು
ಕನ್ನಗೊಯ್ಕರ ವೋಲು ಕೊರೆಯುತಿಹಳು
ಭಿನ್ನಭಾವದಿ ನಡೆದು ಮನೆಯ ಪಾಲ್ಮಾಡುವಳು
ಕಣ್ಣಿನೊಳು ಕಂಡೊಡವೆಗಳನಿರಿಸಳು ೩

ಮಾಯೆ ತಾನೇ ಸುದತಿ ಯಾಕಾರೆ ಯಾಗಿಹಳು
ನೋಯೆ ನುಡಿವಳು ಕಂಡ ಕಂಡವರೊಳು
ಹೋಯೆಂದು ಕೂಗುವಳು ಶಿಕ್ಷಿಸಳು ನಿನ್ನನುರೆ
ಬಾಯೊಳಗೆ ಭಯಬಿಡಿಸಿ ಹಾಗಿಸುವಳು ೪

ಕಾಮ ಕ್ರೋಧಾದಿಗಳ ಕೀಲ ಬಲಗೊಳಿಸುವಳು
ಪ್ರೇಮ ಗೆಡಿಸುವಳೆಲ್ಲ ಬಾಂಧವರನು
ಭೂಮಿಯೋಳಗಧಿಕ ಭೀಮನ ಕೋಣೆ
ಲಕ್ಷ್ಮೀಪತಿಯ ನೆನೆನೆನೆದು ಸಖಿಯಾಗು ಕಂಡ್ಯಾ ೫

## ೯೩

ಏನೇನು ಬುದ್ಧಿ ನಿನಗಿಲ್ಲವೋ ಮೃತ್ಯುವಧೀನನಾಗಿ
ಕೆಡದಿರು ಮೂಢ ಮನುಜ ಪ

ನಿನ್ನೊಳಗೆ ನೀ ತಿಳಿದು ನೋಡಿದರೆ ಮಾಯೆ
ಚೈತನ್ಯ ಸಾಲದು ಕಾಯಕಂ ಮುಸುಕಲು
ಪನ್ನಗಾರಿ ಧ್ವಜನ ನಾಮಬ ಸಂಕೀರ್ತನೆಯ
ಚೆನ್ನಾಗಿ ಮಾಡುಲದುಸಾಫಲ್ಯವು ೧

ನಾನು ನಾನೆಂದೆಂಬ ಹಮ್ಮಿನಲಿ ಮನ ಮುಳುಗಿ ಶ್ವಾನ
ಸೂಕರನಂತೆ ಸಂಚರಿಸುತ
ಸ್ನಾನ ಸಂಧ್ಯಾವಂದನಾದಿ ಹರಿಯರ್ಚನೆಗಳೇನು
ಇಲ್ಲದೆ ಕಾಲವನು ಕಳೆವರ ೨

ಅಂತಕನ ದೂತರಿಗೆ ಕೈಸಿಕ್ಕದಿರು ಮರುಳು ಭ್ರಾಂತೆ
ಸದ್ಗುರುಗಳ ಕಟಾಕ್ಷದಿಂದ
ಅಂತರಂಗದೊಳು ಭೀಮನ ಕೋಣೆ ಶ್ರೀ ಲಕ್ಷ್ಮೀಕಾಂತನನು
ಭಜಿಸಲಪ್ಪುದು ಮೋಕ್ಷಪದವಿ ೩

## ೯೪

ಏನೇನಿಲ್ಲದ ಧನಹೀನನಿಗೆ ಹರಿ ನಾಮವೆ ಭಾಗ್ಯಕರ
ನೀನಿದನರಿತು ಜಪಿಸುಬಿಡದನುದಿನ
ಸಾಧಿಸು ಮುಕ್ತೀಕರ ಪ

ಹಿಂದಣ ಜನ್ಮದೊಳಗೆ ದಾನದರ್ಮಗಳ
ನೊಂದನು ಮಾಡದಿರೆ
ಇಂದಿನ ಜನ್ಮದೊಳಗೆ ದಾರಿದ್ರ್ಯವು ಬಂದು ಪೀಡಿಸುತಲಿದೆ
ಮುಂದೆ ಸಾಧಿಸಿ ಕೊಂಬೆನೆಂದರೆ ಕೈಯೊಳೊಂದರೆ ಕಾಸಿಲ್ಲವು
ನೊಂದೆನುಭವ ಸಿಂಧುವಿನೊಳು ಮುಳುಗಿ ಮುಕುಂದ
ಪಾಲಿಸೋ ಹರಿಯೇ ೧

ದಟ್ಟ ದಾರಿದ್ರ್ಯದೊಳಗೆ ಹುಟ್ಟಿದೆನೆಂದು
ಕುಟ್ಟಿ ಕೊಂದರೆ ಪಣೆಯ
ಕೊಟ್ಟು ನಡೆಸಿ ಕೊಂಬುವರಿಲ್ಲ ಮರುಳೆ
ನಿನ್ನಿಷ್ಟವಮನ ದಣಿಯ
ದಿಟ್ಟಿಸಿ ನೋಡಲು ಪೂರ್ವದೊಳಗೆ
ಪಡೆದಷ್ಟು ಉಣ್ಣಬೇಕಲ್ಲದೆ
ಹುಟ್ಟಿದನಿತನುಂಡು ಇನ್ನಾದರು ಮನ ಮುಟ್ಟಿ
ಪೂಜಿಸೋ ಹರಿಯೆ ೨

ಸಾಕಾಯಿತು ಸಂಸಾರದೊಳಗೆ ಕ್ಷಣ
ಮಾತ್ರವು ಸುಖವಿಲ್ಲ
ಸಾಕು ನೀ ಪಡೆದುದನುಂಡು ಸುಖಿಸಿ
ಜಗದೇಕ ವಂದ್ಯನ ನೆನೆಸು

ಲೋಕದೊಳಧಿಕ ಭೀಮನ ಕೋಣೆ
ಶ್ರೀ ಲಕ್ಷ್ಮೀಶನ ಭಜಿಸಿದರೆ
ಬೇಕಾದನಿತುವನಿತ್ತು ಕಡೆಗೆ ತನ್ನ ಲೋಕವ ಪಾಲಿಪನು ೩

## ೯೫

ಒಂದು ಕೊಟ್ಟರೆ ಶಿವ ಮತ್ತೊಂದು ಕೊಡನಯ್ಯ
ಆನಂದ ವಸ್ತುವಿಗೊಂದು ಲೀಲೆ ಇದಯ್ಯ ಪ

ರೊಕ್ಕವಿದ್ದವರಿಗೆ ಮಕ್ಕಳೆಂಬವರಿಲ್ಲ
ಮಕ್ಕಳಿದ್ದರೆ ತಕ್ಕವನಿತೆಯಿಲ್ಲ
ಚೊಕ್ಕಸತಿಯು ಸಿಕ್ಕಿತಾನುರೂಪದೊಳಿರೆ
ಪಕ್ಕನೆ ಅಗಲಿ ಪೋಗುವರಯ್ಯ ೧

ಚೆಲುವ ಹೆಣ್ಣಿಗೆ ತಕ್ಕ ಚೆಲುವ ಪುರುಷನಿಲ್ಲ
ಚೆಲುವ ನಾದವ ಗೊಳ್ಳೆಲಲನೆಯಿಲ್ಲ
ಹಲವು ಜನ್ಮದ ಪುಣ್ಯ ಫಲದಿಂದ ಸೇರಲು
ಹೊಳೆದು ಹೋಗುವರಿದರೊಳಗೊಬ್ಬರಯ್ಯ ೨

ಸತಿ ಸುತರು ಇರುತಿರಲು ದಾರಿದ್ರ ತಿಂಬುವುದಕಿಲ್ಲ
ಗತಿಯಿಲ್ಲದವನಿಗೆ ನರಕವಿಲ್ಲ
ಅತಿಶಯವಾಗಿ ತಿಂಬುದಕ್ಕಿದ್ದ ನರರಿಗೆ
ಸತತ ಶಾರೀರ ಸುಖವಿಲ್ಲವಯ್ಯ ೩

ಉಂಬಲೂಡಲು ಸರ್ವಸಕಲ ಸಂಪತ್ತೆಲ್ಲ
ತುಂಬಿರಲು ತನ್ನ ಗೃಹದೊಳೆಲ್ಲ
ಬೆಂಬಿಡದೆ ರೋಗವು ಪುಟ್ಟಿತನುವಿನೊಳ್
ತಿಂಬುದಕವಗೆ ಬಾಯಿಗಳಿಲ್ಲವಯ್ಯ ೪

ಸಕಲ ಜೀವರಿಗು ಚಿಂತೆಗಳಿಲ್ಲದವರಿಲ್ಲ
ಸುಖವು ಸ್ವಪ್ನದೊಳು ಕಾಣುವುದಿಲ್ಲವಯ್ಯ
ಬಕನ ವೈರಿಯ ಕೋಣೆಯ ಲಕ್ಷ್ಮೀಪತಿ ಪ್ರಿಯ
ಮಕರ ಕೇತನ ವೈರಿಯಾಟವಿದಯ್ಯ ೫

## ೯೬

ಕೆಟ್ಟಿತು ಕಾಲಗತಿಯು ದುರ್ಜನರಟ್ಟಳಿಯಲಿ ಜಗತಿ
ಹೊಟ್ಟು ಬೇವಂದದಿ ಬೇಯುತಲಿದೆ ವರ್ಮ ಬಿಟ್ಟು
ಕೆಡಿಸುವರು ಸಾದುಸಜ್ಜನರು ಪ

ಊರು ಕೇರಿ ಕೇರಿಗಳೊಳಗೆ ಒಳಿತುಣಲಾರು ಸೈರಿಸಹರು
ಕ್ರೂರ ಜನರು ಕೂಡಿ ಕೆಡಿಸುವ ಬಗೆಯ
ವಿಚಾರವನೆಣಿಸುತಹರು ದುರ್ಜನರು ೧
ಒಳಗು ಹೊರಗು ಹುಳುಕನರಸುತ ಕಾಣದೆ ಕಳವಳಿಸಿ
ಒಳಗೆ ಕದಿನಿ ಉಂಟೆನುತ ಚಾಡಿಯ ನಾಡಿ ತಿಳಿಯದಂದದಿ
ಮುದಿಗೂಬೆಯಂತಿಹರು ೨

ಮನ ಮುನಿಸುಗಳಿಂದ ಸಜ್ಜನರನು ದನಿಗಳ ಮುಖದಿಂದ
ತನು ಬಿರಿಯಲು ಕೊಲಿಸುವ ಬಗೆಯನು
ವಾಯುಸುತನ ಕೋಣೆಯಲಕ್ಷ್ಮೀರಮಣನೇ ಬಲ್ಲ ೩

## ೯೭

ಕಾಲನವರ ದಂಡು ಬರುತಿದೆ ಬಂದು
ಮೂಲ ದೇಹದಿ ಪಾಳ್ಯ ಬಿಡುತಿದೆ
ನಾಳೆ ನಾಡದೋ ಕಾಣೆ ತಮಪುರವಿದು
ಹಾಳಾಗುವ ಕಾಲ ಬರುತಿದೆ ಪ

ಬಂದು ಬಂದವರೆ ಮುಕ್ತಿಗೆಯಿಕ್ಕಿ ರವಿ
ನಂದನ ನಾಳುಪದ್ರವನಿಕ್ಕಿ
ಹಿಂದು ಮುಂದಕು ಭಾವಣೆಯಿಕ್ಕಿಪುರದ
ಮಂದಿಯ ಕಾವಲನಿಕ್ಕಿ ೧

ಪುರದೊಳಗೇನು ಬೀಯಗಳಿಲ್ಲ ಮುಂದೆ
ಬರುವ ಮಾರ್ಗವ ಕಟ್ಟಿದರೆಲ್ಲ
ಕರಣವೃತ್ತಿಗಳು ತಗ್ಗಿತು ಎಲ್ಲ ಕೋಟೆ
ಜರಿದು ಹೋಯಿತು ಸುತ್ತಲು ಎಲ್ಲ ೨

ಕಾಲು ಕೈಗಳ ಧಾತು ತಪ್ಪಿತು ನುಡಿದ
ನಾಲಗೆ ಹಿಂದಕೆ ಸರಿಯಿತು
ಕಣ್ಣಾಲಿಯೊಳಗೆ ನೀರು ಉಕ್ಕಿತು ವಸ್ತು
ಗಾಳಿಯೊಳಗೆ ಮಾಯವಾಯಿತು ೩

ಮಡದಿ ಮಕ್ಕಳಿಗೆಲ್ಲ ಹೊಡೆದಾಟ ಬಲಕೆ
ಎಡಕೆ ಹೊರಳದಿರಿ ಎನುವಾಟ ಕಿಚ್ಚೆ
ಯೊಡನೆ ಗೂಡನು ಸುಡುವಾಟ ಕೆಲವು
ಕಡೆಯವರೆಲ್ಲ ತೆರಳುವಾಟ ೪

ಹೇಳದ ಯಮದೂತರಿಗಂದು ಕಡು
ಖೂಳ ಪಾಪಿಗಳೆಳತಹುದೆಂದು ಲಕ್ಷ್ಮೀ
ಲೋಲ ನಾಳು ಗಳಮುಟ್ಟದಿರೆಂದು
ತನ್ನಾಳಿಗೆ ಕಟ್ಟು ಮಾಡಿದನಂದು ೫

## ೯೮

ಕೆಟ್ಟ ಕಾಲ ಬಂತು ಪ್ರಜೆಗೆ ಎಷ್ಟು ಪೇಳ್ವರೇನು ಕೆಲಸ
ದಿಟ್ಟ ಅರಿಗಳನು ಕುಟ್ಟಿ ತೆಗೆಯದಿದ್ದಮೇಲೆ ಪ

ದಂಡು ಬಂತು ಎಂದು ಜನರು ಗಂಡು ಹೆಣ್ಣು ಮಕ್ಕಳೆಲ್ಲ
ಕಂದುಗಳನು ಕಟ್ಟಿ ಗೋವಿನ ಹಿಂಡ ನೆಲ್ಲ ದಾರಿಗೊಳಿಸಿ
ಕಂಡ ಕಡೆಗೆ ಹೋಗಿ ಸೇರಿಕೊಂಡುಯಿರಲು ಸೋವಿನಿಂದ
ದಂಡಿನವರು ದಾರಿಗಟ್ಟಿಕೊಂಡು ಸುಲಿದು ಕಡಿದ ಮೇಲೆ ೧

ಅಲ್ಲಿ ಬಂತು ಇಲ್ಲಿ ಬಂತು ಎಂದು ಬೆದರಿಕೊಂಡು
ಕುಣಿಗಳಲ್ಲಿ ಭತ್ತಭಾಂಡವಿಕ್ಕಿ ನಿಲ್ಲದೆಲ್ಲ ಊರಬಿಟ್ಟು
ಕಲ್ಲು ಮುಳ್ಳು ಗುಡ್ಡಕಾನಿನಲ್ಲಿ ಸೇರಿಕೊಂಡು
ಬಚ್ಚಿಯಿಟ್ಟ ವಸ್ತು ವಡವೆ ಅಲ್ಲಿ ನಷ್ಟವಾದ ಮೇಲೆ ೨

ಮತ್ತೆ ಕುದುರೆಯಿಲ್ಲ ಮಂದಿಹೊತ್ತು ಪ್ರಜೆಗಳನ್ನು ಮಾರ್ಗ
ದೊತ್ತಿನಲ್ಲಿ ತರುಬಿ ನಿಂದು ಕತ್ತಿಯನ್ನು ಕಿತ್ತು ಗೋಣ
ಕುತ್ತಿ ಕೆಡಹಿ ಕೆಲರ ಮೈಯ ರಕ್ತವನ್ನು
ಬರಿಸಿ ಯಾವತ್ತು ವಡವೆ
ವಸ್ತುಗಳನು ಮತ್ತು ಮತ್ತು ಸುಲಿದಮೇಲೆ ೩

ಮುಟ್ಟು ಪಟ್ಟೆ ಸಹಿತವರಡಿಯೆತ್ತ ಕೊಟ್ಟು ಬೀಳ ಭೂಮಿ
ನಷ್ಟ ತೆತ್ತು ಹಳೆಯ ಅರಿವೆ ಬಟ್ಟೆಗಟ್ಟಿ ಬೀದಿ ಬದಿಗೆ
ಕಟ್ಟಿ ದನವ ಹಿಂಡು ಗುರಿಯ ಕೆಟ್ಟ ಗೌಡಿ ದ್ವಿಗುಣಿಸಂಕ ತೆತ್ತು
ಕೊಟ್ಟು ಪ್ರಜೆಗೆ ಘಟ್ಟ ಬೆಟ್ಟ ವಾಸ ವಾದಮೇಲೆ ೪

ಇಕ್ಕಿ ಕದವ ರಾಜ್ಯವನ್ನು ಹೊಕ್ಕು ಅರಿಗಳೆಲ್ಲ ಸುಲಿದು
ಸೊಕ್ಕಿನಿಂದ ಪಾಳ್ಯವನ್ನು ಹೊಕ್ಕರಯ್ಯ ನಮ್ಮ ಕಡೆಗೆ
ದಿಕ್ಕಕಾಣೆ ಪ್ರಜೆಗಳನ್ನು ರಕ್ಷಿಸುವರು ಬೇರೆಉಂಟು
ಭಕ್ತಿಯಿಂದ ಭೀಮನ ಕೋಣೆ ಲಕ್ಷ್ಮೀರಮಣನ
ನಂಬಿ ಜನರು ೫

## ೯೯

ಕೆಟ್ಟು ಹೋಯಿತು ಪ್ರಜೆಗಳು ಎಲ್ಲಾ ಬಾಯ
ಬಿಟ್ಟುಪಾಯವ ಹೇಳುವರಿಲ್ಲ ಪ

ಸುಳ್ಳು ಹೇಳಲು ಹೆದರುವುದಿಲ್ಲ ಪೊಳ್ಳಾಗಿ
ಹಲ್ಲ ಬಿಡುವರು ಎಲ್ಲ
ಕಲ್ಲೆದೆಯರು ಕರೆಸಿದರೆಲ್ಲ ಚಿನ್ನ ಬೆಳ್ಳಿ
ತಾಮ್ರಗಳ ಮಾರಿದರೆಲ್ಲ ೧

ಹೆಚ್ಚು ಮಟ್ಟಿಗೆ ತೇರುಗಳಿಂದ ಒಳ್ಳೆ
ಚೊಚ್ಚಲಾಕಳು ಎಮ್ಮೆಗಳಿಂದ
ಹೆಚ್ಚಿನಾಭರಣಗಳಿಂದ ಕೊಟ್ಟು ನಿಶ್ಚಲವಾಯಿತು
ಕೋರಡೆಯಿಂದ ೨

ತಿಂಬೆವೆಂದರೆ ಅನ್ನಕೆ ಇಲ್ಲ ಮುಂದೆ ನಂಬಿ
ಕೊಡುವೆನೆಂಬುವರಿಲ್ಲ
ಡಿಂಬವಿದೇಕೆ ಬೀಳುವುದಿಲ್ಲ ಎಂದೆಂಬರು
ಚಿಕ್ಕ ದೊಡ್ಡವರೆಲ್ಲ ೩

ಸರಕಿನ ಮಾರು ಮಾರ್ಗವು ಕೆಟ್ಟು ಮೆಣಸಿನ
ಸೆರೆಯ ಮಾರಲಿಕಿಲ್ಲದೆ ಕೆಟ್ಟು ಮತ್ತರ ಮನೆಗದರ
ಪ್ರಜೆ ಬಾಯಿಬಿಡುತಿದೆ ಬಾಯನು ಬಿಟ್ಟು ೪

ನರಗುರಿಯಾಯ್ತು ಪ್ರಜೆಗಳು ಎಲ್ಲ
ದೊರೆಗಳಿಗಳ್ಳೆಷ್ಟು ಕರುಣವಿಲ್ಲ
ಇನ್ನಿರುವ ಬಗೆಯ ಕಾಣುವುದಿಲ್ಲ ಮುಂದೆ
ಹರಿಸೂನು ಕೋಣೆ ಲಕ್ಷ್ಮೀಶನೆ ಬಲ್ಲ ೫

## ೧೦೦

ಕುಟ್ಟಿ ಕೊಳ್ಳೊ ಮಾಣಿ ನಿನ್ನ ಹುಟ್ಟಿಸಿರುವ ದೈವಕೆ
ಹೊಟ್ಟೆ ತುಂಬ ಬಾಯಿಗಾನು ಬಿಟ್ಟೆನೆಂದ್ರೆ ಕ್ಷೀರವಿಲ್ಲ ಪ

ಕೊಟ್ಟು ಪಡೆಯಲಿಲ್ಲ ಮುನ್ನಹುಟ್ಟಿ ಪಡೆಯಲಿಲ್ಲ ಮುಂದೆ
ಹಟ್ಟಿಯೊಳಗಣಾಕಳೆಲ್ಲ ನಷ್ಟವಾಯ್ತು ರೋಗದಿಂದ ೧

ಅತ್ತು ಸಾಯ ಬೇಡ ನೀನು ಎತ್ತಿ ಕೊಂಬರೊಬ್ಬರಿಲ್ಲ
ಭತ್ತವನ್ನು ಕುಟ್ಟಿ ನಾನು ತುತ್ತಮಾಡಿ ತಿನ್ನಿಸುವೆನು ೨

ನೀರು ಕಾದು ಬಂತು ಬಿಸಿಯ ನೀರ ನೆರೆವೆನೀಗ ನಿನಗೆ
ಸಾರಿ ಮೊಲೆಯ ನೂಡಿ ನನ್ನ ಸೀರೆ ಸೆರಗಹಾಸಿ ಕೊಡುವೆ ೩

ದೊಡ್ಡ ಕೂಸ ಕಾಣೆಯವಳು ಗುಡ್ಡೆ ಬಸವಿಯಾದಳೀಗ
ಚಡ್ಡೆಯಲ್ಲದೆ ಹೋಗುತಿಹಳು ಸಡ್ಡೆ ಮಾಡಳೆನ್ನಮಾತ ೪

ಇಂತೆನುತ್ತ ಬಾಲಕನ್ನ ಸಂತವಿಟ್ಟು ನಾರಿ ಲಕ್ಷ್ಮೀ
ಕಾಂತ ಮಾಡ್ದ ಲೀಲೆಗಳನು ನಿಂತು ಪಾಡಿಪೋದಳಾಕೆ ೫

## ೧೦೧

ಕೋಲು ಕೋಲೆ ಕೋಲು ಕೋಲನ್ನ ಕೋಲೆ
ಮೂಲೆ ಮೂಲೆಯ ಹೊಕ್ಕು ಅಡಗಿರ್ದ ಕೋಲೆ ಪ

ಕೆಂಜಿಗ ಉಡನು ಬಂದು ಮುಂಚಿಕವಲ ಕೊಟ್ಟು
ಅಂಚೆಡೆಗಳನೆಲ್ಲ ಸುಲಿದಿರ್ದ ಕೋಲೆ ೧

ಆನೆ ಕುದುರೆಯಿಲ್ಲ ಸೇನೆ ಬಹಳವಿಲ್ಲ
ಏನೆಂದು ಬೆಸಗೊಂಬರಿಲ್ಲದ ಕೋಲೆ ೨

ಮುನಿಯ ಭಾವನದಂಡು ಮನೆ ಮನೆಗಳ ಹೊಕ್ಕು
ಧನಕನಕಂಗಳ ಸುಲಿದಿರ್ದ ಕೋಲೆ ೩

ಮಕ್ಕಳು ಮರಿಗಳು ವೃದ್ಧ ಜವ್ವನರನ್ನು
ದಿಕ್ಕುದಿಕ್ಕಿನ ಕಾನಿಗಟ್ಟಿದ ಕೋಲೆ ೪

ಜನರನ್ನು ತರಿದು ಸುಲಿದು ಕರುಗಳ
ತರುಗಳ ಹಿಂಡನು ಹೊಡೆದಿರ್ದ ಕೋಲೆ ೫

ಕೊಟ್ಟ ಕಣ್ಣಿಯನೆಲ್ಲ ಕಿತ್ತೊಯ್ದು ಸೂಸ್ಯಾನು
ಪಟ್ಟೆ ಪೀತಾಂಬರಗಳ ನೊಯ್ದ ಕೋಲೆ ೬

ದಂಡೋ ಭಂಡೋ ಪುಂಡೋ ಕಾಣಿ ಜೀವರನೆಲ್ಲ
ಹಾಡಿ ಹಿಳಿದು ಹಿಪ್ಪೆಹೀರಿದ ಕೋಲೆ ೭

ಇಟ್ಟವಡವೆ ವಸ್ತು ಇಟ್ಟಲ್ಲಿ ಇಲ್ಲದೆ
ಕೆಟ್ಟು ಜನರು ಹೊಟ್ಟೆ ಹೊಡಕೊಂಬರು ೮

ಉಟ್ಟು ತೊಟ್ಟುದನೆಲ್ಲ ಸುಲಿದುಬೆತ್ತಲೆ ಮಾಡಿ
ಬಿಟ್ಟು ಮನೆಗೆ ಬೆಂಕಿ ಕೊಟ್ಟೋದ ಕೊಲೆ ೯

ಕೆಲರ ತಲೆಯ ಕುಟ್ಟಿ ಕೆಲರು ಸುಲಿದು ಬಿಟ್ಟು
ಕೆಲರಿಗೆ ಮುರುವಾಳ ವಿಕ್ಕಿದ .ಕೋಲೆ ೧೦

ಅಟ್ಟಡಿಗೆಯ ನುಂಡು ಇಟ್ಟೊಡವೆಯ ಕೊಂಡು
ಕುಟ್ಟಿ ಖಂಡವ ಚೂರು ಮಾಡಿದ ಕೋಲೆ ೧೧

ಉಪ್ಪಿನಕಾಯಿ ಕೊಡ ತುಪ್ಪ ತೈಲದ ಪಾತ್ರೆ
ಜಪ್ಪಿ ವಡೆದು ನೆಲ ಕುಣಿಸಿದ ಕೋಲೆ ೧೨

ಚಿನ್ನ ಚಿಗುರು ಬೆಳ್ಳಿ ಕಂಚು ತಾಮ್ರಗಳನ್ನು
ನುಣ್ಣಗೆ ಹೊರೆಗಟ್ಟಿ ಹೊತ್ತೊಯ್ದ ಕೋಲೆ ೧೩

ಉಣ್ಣ ಉಡಲಿಕ್ಕಿಲ್ಲ ಹೊನ್ನು ಕೈಯೊಳಗಿಲ್ಲ
ಎಣ್ಣೆ ಬೆಣ್ಣೆಗೆ ಬಾಲ ನಳಿಸಿದ ಕೋಲೆ ೧೪

ಮುಂಜ ಮುಚ್ಚಲಿಕಿಲ್ಲ ಗಂಜಿಗೆ ಲವಣಿಲ್ಲ
ಸಂಜೆ ದೀಪಕೆ ತೈಲವಿಲ್ಲದೆ ಕೋಲೆ ೧೫

ಅತಿಥಿಗಿಕ್ಕಲಿಲ್ಲ ಪ್ರತಿಮೆ ಪೂಜೆಗಳಿಲ್ಲ
ವ್ರತನೇಮಗಳನು ಕಟ್ಟಿರಿಸಿದ ಕೋಲೆ ೧೬

ತೆಪಕಾರನ ಪದಾರ ಕಾಲಟದೊಳು
ಜಪ ತಪಗಳಿಲ್ಲದೆ ಕೊಳ ತನ್ನಿಸಿದ ಕೋಲೆ ೧೭

ನಗರದ ಕೋಲೆದ್ದು ತೆಪರಾರ ಮೇಲ್ಬಿದ್ದು
ಜಿಗಿದು ಹಿಂದಕೆ ಜಾರಿ ಜುಣುಗಿದ ಕೋಲೆ ೧೮

ಹಿಂದಣ ಬೆಳೆಮಣ್ಣ ಕೂಡಿತು ಕುಳಿಯಲಿ
ಮುಂದಣ ದುದುರಿತು ಹಣ್ಣಾಗಿ ಕೋಲೆ ೧೯

ಕೆಳಗು ಮೇಲಕು ದಂಡು ಬಳಪ್ರಾಂತ ದೊಳುದಂಡು
ನೆಲೆಗೊಂಡು ಜನರು ತಲ್ಲಣಿಪರು ಕೋಲೆ ೨೦

ಸುಬ್ಬರಾಯನ ವೀರಭದ್ರನ ಪ್ರಸಾದ
ಸರ್ವಜನರ ಬಾಯ್ಗೆ ಬಿತ್ತಣ್ಣ ಕೋಲೆ ೨೧

ಧರೆಯ ಭರವಪಹರಿಸಲು
ನರರೂಪ ಧರಿಸಿ ಲಕ್ಷ್ಮೀಶನು ಹೊಯ್ಲೂವ ಕೋಲೆ ೨೨

## ೧೦೨

ಛೀ ಛೀ ಬಿಡು ಸಂಸಾರಾಬ್ಧಿಯ ದಾಂಟಲು ನಾವೆಯಚಾಚು
ಛೂ ಛೂ ಎಂದರು ಸರ್ವನು ಒಂದಿಷ್ಟು ನಾಚಿಕೆಯಿಲ್ಲ ಈಸು ಪ

ಆಯಾಸ ಗೊಳುತಿಲ್ಲರುವುದರಿಂದಲು ಕಾಯವ
ಬಿಡುವುದೆ ಲೇಸು
ಬಾಯೊಳು ಬ್ರಹ್ಮವ ನುಡಿದರೆ ಬ್ರಹ್ಮದ
ಗಾದಿಯು ತಿಳಿಯದು ಈಸು
ಮಾಯೆಯ ಮರೆಯಲಿ ಏನು ತೋರದು
ಪ್ರಾಚೀನ ಕರ್ಮವಿ ದೀಸು
ನಾಯಕ ನರಕಕೆ ಬೀಳದೆ ಮನದೊಳು
ತಾರಕ ಮಂತ್ರವ ಸೂಸು ೧

ಹೊನ್ನಿನ ಬಳಿಯಲಿ ಸರ್ವಾಭರಣವು ಚಿನ್ನವು ಎನಿಸದ ಹಾಗೆ
ಕನ್ನಡಿ ಮಸಕನು ಬೆಳಗಲು ವದನವು
ಚೆನ್ನಾಗಿ ತೋರುವಹಾಗೆ
ಕಣ್ಣಲಿ ಕಾಣುವುದೆಲ್ಲ ಕಡೆಯಲಿ ನುಣ್ಣಗೆ ಲಯವಾದಹಾಗೆ
ತನ್ನೊಳುತಾನೆ ಜ್ಞಾನದಿ ತಿಳಿಯಲು ಚಿನ್ಮಯ
ರೂಪನು ತಾನಾದ ಹಾಗೆ ೨

ರೇಚಕ ಪೂರಕ ಕುಂಭಕವಿರವನು ಸಾಧಿಸು ನಿನಗದು ಊಚು
ಯಾಚಿಸು ಗುರುವಿನ ಕರುಣದ ಕಿಡಿಯಲಿ
ಜ್ಯೋತಿಗೆ ಬತ್ತಿಯ ಚಾಚು
ಈ ಸಚರಾಚರ ದೊಳಗಣ ಜನರಿಗೆ
ನೀಚರ ಸಂಗಕೆ ನಾಚು
ಕೀಚಕನ ವೈರಿಯ ಕೋಣೆ ಲಕ್ಷ್ಮೀಶನ
ಗೋಚರ ದೊಳು ಲಘುತೋಚು ೩

## ೧೦೩

ದಿಕ್ಕೆಯಿಲ್ಲ ನಮ್ಮ ಕಡೆಗೆ ಸೊಕ್ಕಿ ಬಂದರಾರೆರು
ಚಿಕ್ಕ ಮನುಷ ಕೆಂಚೆಗೌಡ ಠಕ್ಕ ಮುನಿಯ ಭಾವಬಿರಿಯ
ಬೆಂಕಿಯಂತೆ ತೋರ್ಪನೊಬ್ಬ ಪರಶುರಾಮನು ಪ

ಆನೆಯಲ್ಲಿ ತೇಜಿಯಿಲ್ಲ ಸೇನೆ ಬಹಳವಾಗಿಯಿಲ್ಲ
ಹೀನಗೆಟ್ಟು ದಂಡು ಬಂದು ಮಾನಗೊಂಡು ಹೆಣ್ಣುಗಳನು
ಭಾನು ಮುಟ್ಟಲೆತ್ತಿ ಆಸಿಯ ದೀನ
ಜನರ ಕೊಚ್ಚಿ ಕಡಿದು ಪ್ರಾಣವನ್ನ ಕೊಳ್ಳಲಿನರು
ಬೇಕು ಬೇಡೆಂದೆಂಬರಿಲ್ಲ ೧

ಆರು ಮೂರೆ ಮಂದಿ ಬಂದು ಊರ
ಮನೆಗಳನ್ನು ಹೊಕ್ಕು
ಚಾರುವರಿದು ಕೊಟ್ಟ ಕಣ್ಣಿಯ ಸೂರೆಮಾಡಿ ಕಟ್ಟಿಕೊಂಡು
ತೆರೆದ ಮನೆಯ ಸುಟ್ಟು ದಾರಿದೆಗೆದು ಹೋಗುವಾಗ
ಧೀರರಾಗಿ ನಿಲ್ಲಿರೆಂದು ಎಂಬವರೊಬ್ಬರಿಲ್ಲ ವೋ ೨

ಯಾವಜನರ ದಂಡು ಗಂಟು ಹಣದಾಸೆಗಾಗಿ ಮಾಡಿ
ದಾವ ಕಡೆಗೆ ಬರುವರೆಂದು ಸೋವ ನೋಡು ತಲ್ಲಿತಮ್ಮ
ಜೀವ ದೊಳಗೆ ಜೀವ ವಿಲ್ಲದಾಗಿ ಜನರುಬಾಯಬಿಡಲು
ಕೋವಿ ಕತ್ತಿ ಎಂಬುದೊಂದು ಶಬ್ದವಿಲ್ಲ ನಮ್ಮ ಕಡೆಗೆ ೩

ಬೀಸಿ ಬೀಸಿ ಕತ್ತಿಯನ್ನು ಸಾಸವನ್ನು ತೋರಿರೋರ
ದಾಸೆಗಾಗಿ ಕಂಡ ಜನರ ಮೋಸದಿಂದ ಕಡಿದುಕೊಚ್ಚಿ

ಲೇಸುಗಾಣದಾಗಿ ಮತ್ತೆ ಭಾಸೆಯಿಂದ ತಮ್ಮ ತಾವೆ
ನೇಸರಡಗಿ ಬಂತು ಪೋಪ ಪಾಳ್ಯಕೆಂದು
ಮಾರ್ಗವಿಡಿಯೆ ೪

ಕೆಟ್ಟು ಪ್ರಜೆಯು ನಾಶವಾಗಿ ಸುಟ್ಟು ಮನೆಯು ಮಾರುಬಿದ್ದು
ಹಟ್ಟಿಯೊಳಗಣಾಕಳೆಲ್ಲ ನಷ್ಟ ತೋಟತುಡಿಗೆ
ನಿಟ್ಟು ಹಾಳುಸುರಿಯೆ ಪ್ರಜೇಯು ಹೊಟ್ಟೆಗಿಲ್ಲ ದಳಲುತಿಹುದು
ಸೃಷ್ಟಿ ಗೊಡೆಯನಾದ ಲಕ್ಷ್ಮೀರಮಣ ಬಲ್ಲನೆಲ್ಲವನ್ನು ೫

## ೧೦೪

ದಂಡು ಬರುತಿದೆ ಆರೇರ ದಂಡು ಬರುತಿದೆ
ದಂಡಿನೊಳಗೆ ಸಿಕ್ಕಿ ಸೋಲಿಸಿ ಕೊಂಡು
ಬಂದೆವು ನಾಲ್ಕು ಮಂದಿ ಪ

ಅಮ್ಮ ಲಿಮ್ಮಿ ಬೊಮ್ಮಿ ನಾನು ಸುಮ್ಮನೊಂದು ಮರೆಯಲಿರಲು
ಜಮ್ಮನವರು ಬಂದು ಹಿಡಿದು ಗುಮ್ಮಿಹೋದರು ನಮ್ಮನ್ನೆಲ್ಲ ೧

ಅತ್ತೆಮಾವ ಮೈದುನರು ಎತ್ತಹೋದರೋ ಕಣ್ಣಲಿಕಾಣೆ
ಕತ್ತೆ ಹೆಣ್ಣೆ ಹೋಗು ಎಂದು ಬತ್ತಲೆಬಿಟ್ಟರು ಎನ್ನ ೨

ದಿಂಡ್ಯ ದಿಂಡ್ಯ ಜವ್ವನೆಯರು ಕಂಡ ಕಂಡೆಗೆ ಹೋಗಿ ಬೇಗ
ದಂಡಿನವಗೆ ಸಿಕ್ಕಿ ಕೆಟ್ಟು ಕೊಂಡು ಬಾಳ್ವುದೊಳ್ಳಿತಲ್ಲ ೩

ರಂಡೆ ಮುಂಡೆರೆಂದವರು ಬಿಡರು ಕಂಡಮಾತ ಹೇಳುತೇನೆ
ಪೆಂಡಾರರಿಗೆ ಸಿಕ್ಕು ಕೆಟ್ಟು ಗಂಡು ಕೂಸು ಪಡೆಯದಿರಿ ೪

ಮಾನವುಳ್ಳ ಹೆಣ್ಮಕ್ಕಳು ನಾನು ಪೇಳ್ವಮಾತಕೇಳಿ
ತಾನೆ ಸೇರಿ ಲಕ್ಷ್ಮೀರಮಣ ಧ್ಯಾನವನ್ನು ಮಾಡುಕಂಡ್ಯಾ ೫

## ೧೦೫

ದುರ್ಜನರಿಗೀ ಕಾಲ ಶುಭದಕಾಲ ಸಾದು
ಸಜ್ಜನರಿಗನ್ನಕಿಲ್ಲದ ಸಾವಕಾಲ ಪ

ಅರಮನೆಯ ಬಾಗಿಲನು ಕಾದು ಕೊಂಡಿರ್ದು ನೃಪ
ವರನೊಡನೆ ಮಾತುಕಥೆಗಳ ನಡೆಸುತ
ವರಮಂತ್ರಿಯಾಗಿ ರಾಜಾಧಿ ಕಾರಂಗಳನು
ನಿರುತ ಮಾಡುವಂಗೆ ಇದು ಒಳಿತು ಕಾಲ ೧

ಅಡಗಡಿಗೆ ಮಂತ್ರಿಗಳನಾಶ್ರಯಿಸಿ ಕೋವಿದರು
ಗಡಿಗಳನು ಕೊಡಿಸೆನಗೆ ತನಗೆನ್ನುತ
ಒಡನೆ ಮೇಲಾಡಿ ಹೆಚ್ಚಿಗೆ ಮುಟ್ಟಿಗೆಯ ಹೊತ್ತು
ಕೊಡಿರೆಂದು ಪ್ರಜೆಗಳನು ಬಡಿವ ಕಾಲ ೨

ಮತ್ತಿವರನಾಶ್ರಯಿಸಿ ಕೆಲರು ಮಣಿಹಂಗಳನು
ಪೊತ್ತು ಸೀಮೆಯ ಗ್ರಾಮಗಳ ನೋಡುತ
ಇತ್ತ ಕುಳ ಸ್ಥಳ ವಂಚನೆಗಳೆಂದು ಬಂದ ಕಾ
ರೆತ್ತ ಲೊಕ್ಕಲು ಬಾಯ ಬಿಡುವ ಕಾಲ ೩

ಬುಡಗಳನ್ನು ಗೈದೆ ಹಾಳ್ಮಾಡಿ ಕೊಂಡಿರ್ದರಿಗೆ
ಕಡ ಮೊದಲುಗಳ ಕೊಟ್ಟು ಪೋಗೆಂಬರು
ಅಡೆಯಂಚು ಮೂಲೆಗೆಳಗೈದು ಕುಳದೆರಿಗೆಯನು
ಕೊಡುವವರಿಗೆ ಈ ಕಾಲ ದಣಿವ ಕಾಲ ೪

ಚಾಡಿ ಕೋರರು ಹೆಚ್ಚಿ ಕೆಡಿಸಿವರ ರಾಜ್ಯವನ್ನು
ರೂಢಿ ಪತಿಗಳಿಗೆಲ್ಲ ಕಿವಿಯೇ ಕಣ್ಣು
ನೋಡಿದರೆ ಮರುತ ಸುತ ಕೋಣೆ ಲಕ್ಷ್ಮೀರಮಣ
ನಾಡಿಸಿದ ವೋಲು ಜಗವಾಡುತಿಹುದು ೫

## ೧೦೬

ದೇವರ ಪೂಜೆಯ ಮಾಡಿರೋ ಮಾಡಿ ಬಿಟ್ಟರು ಬಿಡಿ
ಭೂದೇವರ ಪೂಜೆ ಮಿಗಿಲು ಬಿಡಬೇಡ ಪ

ಉಂಬೋ ದೇವರ ನೋಡಿ ಕರೆತಂದೊಯ್ಯನೆ
ಶಂಭು ಶ್ರೀಹರಿ ಎಂದು ಮನತಂದು ಕರು
ಣಾಂ ಬುಧಿ ಮಣೆಯೊಳೇರಿ ಎಂದು ಹರು
ಷಾಂಬುಧಿಯೊಳು ಪಾದ ತೊಳೆದು ೧

ಮಾತನಾಡುವ ದೇವನಿವನೆಂದು ಸಂಪ್ರೀತಿಯಿಂದಲೆ
ಈತ ಶಿವನೆಂದು ಜಾತಿ ಶ್ರೀ ಗಂಧ ಪುಷ್ಪವ ತಂದುಮನ
ವೊತು ಪೂಜೆಯನು ಮಾಡಿರೋ ಎಂದು ೨

ಎಡೆಮಾಡಿ ಷಡುರಸಾನ್ನವ ನಂದು ಉಣ
ಬಡಿಸೆ ನಾರಿಯರಟ್ಟುದನುತಂದು
ಕಡುಬು ಕಜ್ಜಾಯ ಘೃತವನಂದು ಜಗ
ದೊಡೆಯ ನುಂಡನು ಸಾಕು ಬೇಕೆಂದು ೩

ಉತ್ತರಾಪೋಶನವನು ಕೊಟ್ಟು
ಹಸ್ತವ ತೊಳೆದ ಮೇಲ್ವೀಳ್ಯವ ಕೊಟ್ಟು
ಮತ್ತೇನಾ ಪೋಪೆನೆಂದರೆ ಪೊಡಮಟ್ಟು
ಚಿತ್ತೈಸಿ ಮರಳಿಬರಬೇಕು ದಯವಿಟ್ಟು ಎಂದು ೪

ಪ್ರತಿಮೆಗಿಕ್ಕಿದರಲ್ಲೆ ಇಹುದು ಮತ್ತೆ
ಕ್ಷತಿಗೆ ಹಾಕಲುಬೇಕು ಬೇಡೆನ್ನಾದಿಹುದು
ಅತಿಥಿಗಿಕ್ಕಲು ಸಾಕು ಬೇಕೆನ್ನುತಿಹನು ಲಕ್ಷ್ಮೀ
ಪತಿಗಿದು ಪೂಜೆ ಸಂಪೂರ್ಣವಾಗಿ ೫

## ೧೦೭

ಧರ್ಮದಮಾತು ಹಳಸಿ ಬಂದಿತು ಯುಗ
ಧರ್ಮದಿಂದದು ವನವನು ಸೇರಿತು ಪ

ಆಟ ನೋಟಕೆ ಉಂಟು ಪೋಟ ಪುಂಡರಿಗುಂಟು
ಮೀಟಾದ ಮನೆ ಮಾರ ಕಟ್ಟಲುಂಟು
ಕಾಟಕ ದೊರೆಗೆ ದಂಡವನು ಕೊಡಲಿಕುಂಟು ಚಂದ್ರ
ಜೂಟಗರ್ಪಿತವೆಂದು ಕೊಡಲು ದ್ವಿಜರಿಗಿಲ್ಲ ೧

ಕಲ್ಲು ಮಣ್ಣಿಗೆ ಇಕ್ಕಲುಂಟು ಆಕಳ ಎಮ್ಮೆ
ಕೊಳ್ಳಲಿ ಕುಂಟು ಕೈಯೊಳು
ಹೊನ್ನು ಚಿನ್ನಗಳ ಬಂಗಾರ ಮಾಡಿಸಲುಂಟು
ಇಲ್ಲದೇಹಿ ಎಂದು ಯಾಚಿಪದ್ವಿಜರಿಗೆ ೨

ಬಣ್ಣ ಸಣ್ಣಗಳ ಕೊಡಲಿ ಕುಂಟು ಕಾಮನ
ಕಣ್ಣಿಗೆ ಸಿಲುಕಿ ಕಳೆಯಲಿ ಕುಂಟು
ತನ್ನ ಕೈಯಾರೆ ಲಕ್ಷ್ಮೀಶಗರ್ಪಿತವೆಂದು
ಮನ್ನಿಸಿ ದ್ವಿಜರಿಗೀಯಲಿಕೆ ದುಡ್ಡುಗಳಿಲ್ಲ ೩

## ೧೦೮

ಧರಣೆಯನಾಳ್ವ ಪಾರ್ಥಿವರಿಂಗೆ ಪ್ರಜೆಗಳು ಬೇಡವಾಯ್ತು
ವರಹದ ಮೇಲಣಾಸೆಯಿಂದ ರಹಿತರ ಬಡಿವುದಾಯ್ತು ಪ

ರಾಜ್ಯಕೆ ದಂಡ ಹಾಕಿದರು ತೀರಿತೆಲ್ಲಿ
ಪ್ರಜೆಗಳ ಬಾಳು ನಜರು ಕೊಡುವುದಾಯ್ತು
ತೆರತೆರುವುದರಿಂದ ವರಹಕೊಂಡು ಬಂದು
ಏರೆಯ ರೂಪಾಯಿಗಳನು ಎತ್ತಿ ದಂಡಿಗೆ ಕೊಡುವುದಾಯ್ತು ೧

ಮತ್ತೆ ಸೇನಭೋಗರು ಶಿರಸ್ತೆದಾರರು ಸಾವಿರ ಸಾವಿರ
ವೆತ್ತಿ ಜನಕೆ ಬೆದುಕಮಾಳ್ವ ಕರಣಿಕರಿಗೆ
ಪತ್ತು ನೂರು ಮೂರು ಸಾವಿರವೆಂದು ದಂಡವನುಕಟ್ಟಿ
ವಿತ್ತವನ್ನು ಸೆಳೆದರದುವೆ ಬಿತ್ತು ಬೇರೆ ಪ್ರಜೆಗಳ ಮೇಲೆ ೨

ಸೂಳೆ ಮಾಲೆಯರನು ಕರೆಸಿ ಜನಕೆ ಸಾವಿರದಂಡಕಟ್ಟಿ
ಕೂಳತಿನಲು ಬಿಡದೆ ತರುಬಿವಾಲೆ ಮೂಗುತಿ ನಾಣ್ಯಗೊಂಡು
ಬೀಳು ಕೊಟ್ಟು ಮನೆಗೆ ಅಂಗಡಿ ಸಾಲುವಳಿಗೆಯರನು
ಕಾಲನಂತೆ ದಣಿಸಿ ರೊಕ್ಕದ ಜಾಳಿಗೆಯನು ಕೊಂಡು ಮೆರೆವ ೩

ಸುಲಿಗೆಯಾಗ ದುಳಿಯಲಿಲ್ಲ ಬೆಳೆದ ಬೆಳೆಯ ನುಣ್ಣಲಿಲ್ಲ
ಹೊಳಲ ಸುಟ್ಟು ಬಿಟ್ಟುದೆಲ್ಲ ಕುಲಕೆ ಪಶುಗಳುಳಿಯಲಿಲ್ಲ
ತಲೆಯ ಚಂಬುಹಾರಿತಲ್ಲ ಜನರು ಸತ್ತು ಹೋದುದೆಲ್ಲ
ಮಲೆತ ರಿಪುಗಳನ್ನು ಕುಟ್ಟಿ ಪ್ರಜೆಗಳ ಕಾಯ್ದು ಕೊಳ್ಳಲಿಲ್ಲ ೪

ತಿರುಕರಿಂಗೆ ಸುಖಿಗಳಿಂಗೆ ಹರುವೆ ಸೊಪ್ಪುಮಾರ್ವರಿಂಗೆ
ತರುಣಿಯರನು ಬಿಟ್ಟು ತಲೆಯ ಹೆರೆಸಿ ಕೊಂಡಲೆಗಳರಿಂಗೆಗೆ
ಹಿರಿದು ಕಿರಿದು ಎಂದು ಬಿಡದೆ ಮರುತ ಸುತನ ಕೋಣೆಲಕ್ಷ್ಮಿ
ಯರಸ ರುದ್ರರೂಪಧರಿಸಿ ಜನರಿಗಿನಿತು ಮಾಡಿದ ೫

## ೧೦೯

ನಿಂತರಿಪಲು ಬಗೆಯಿಲ್ಲ ಕಷ್ಟಬಂತು ಪ್ರಜೆಯನು
ಪಾಲಿಪರೊಬ್ಬರಿಲ್ಲ ಪ

ದಂಡಾದಿ ರಾಜ್ಯವು ಕೆಟ್ಟು ಪೋಕ
ಪುಂಡರು ಹೆಚ್ಚಿ ಮಾರ್ಗವತೋರಿ ಕೊಟ್ಟು
ಪೆಂಡಾರರಿಗೆ ಸುಲಿಗೆ ಕೊಟ್ಟು ಭೂ
ಮಂಡಲದೊಳಗಣ ಜನರೆಲ್ಲ ಕೆಟ್ಟು ೧

ಎತ್ತು ಮುಟ್ಟುಗಳೆಲ್ಲ ಹೋಗಿ ಬೀಳು
ಬಿದ್ದು ಗದ್ದೆಯ ಪೈರು ನಿಷ್ಫಳವಾಗಿ
ತುತ್ತುರಿಗಳು ಸುಟ್ಟು ಹೋಗಿ ದಂಡು
ನಿತ್ತು ಪ್ರಜೆಗೆ ಮನೆ ಮುಖವಿಲ್ಲದಾಗಿ ೨

ಕರಿದೋ ಬಿಳಿದೋ ಕಾಣೆ ಕ್ಷೀರ ಕೊಡುವ
ತರುಗಳಿಲ್ಲವು ಮರ ಒಣಗಿ
ಅರಮನೆ ಯತ್ತಣಿಂ ಘೋರ
ಕರೆ ಕರೆಯೊಳು ಬಂದಿತಯ್ಯ ಗ್ರಹಚಾರ ೩

ಗಂಜಿ ಗಾಸ್ಪದವಿಲ್ಲವಾಯ್ತು ಮೂರು
ಸಂಜೆಯ ದೀಪಕೆ ಕೊಳ್ಳಿ ಬೆಳಕಾಯ್ತು
ಅಂಜನ ಪಾತ್ರೆ ಹೆಚ್ಚಾಯ್ತು ಬದುಕಲು
ನಾಲ್ಕು ವರ್ಣ ಒಂದಾಯ್ತು ೪

ಕಾಲಗತಿಯು ಬಲು ಬಿರುಸು ಮುಂದೆ
ಬಾಳುವ ಜನರಿಗೆ ನೃಪರಿಂದ ಹೊಲಸು
ಶೂಲಿ ಸಾಯುಜ್ಯವ ಬಯಸು ಲಕ್ಷ್ಮೀ
ಲೋಲನ ನಾಮವ ಮನದೊಳುಚ್ಚರಿಸು ೫

## ೧೧೦

ನಿನ್ನೊಳು ನೀನೆ ತಿಳಿದು ನೋಡು ಗುರುವಿನ್ನೊಬ್ಬ
ಬೇಡಧ್ಯಾನಿಸಿ ನೋಡು ಪ

ಹಂದಣ ಭವ ಮುಳುಗಿ ನೀನಾರು ಅಲ್ಲಿ
ತಂದೆ ತಾಯಿಗಳು ಮತ್ತವರಾರು
ಅಂದಿನವನಿತೆಯಾಗಿಗಳಾರು ನಿನ್ನ
ನಂದನರೆನಿಸಿ ಬಂದವ ರಾರೋ ೧

ಮುನ್ನ ಮಾಡಿದ ಹೊಲಮನೆಯೆಲ್ಲ ನಿನ್ನ
ಬೆನ್ನು ಬಂದಗ್ರಜಾನುಜರೆಲ್ಲ ಚೊಕ್ಕ
ಚಿನ್ನ ಚಿಗುರು ಬೆಳ್ಳಿ ನಗವೆಲ್ಲಿ ಪಶು
ಹೊನ್ನು ಕನಕ ಮಿತ್ರ ಜನರೆಲ್ಲ ೨

ಇಂದಿನ ಭವದೊಳು ನಿನಗೆಲ್ಲಿ ಈಗ
ಬಂದು ಕೂಡಿದ ಸಂಸಾರವೆಲ್ಲಿ ಮುಂದೆ
ಹೊಂದಿ ಹುಟ್ಟುವ ತಾವುಗಳೆಲ್ಲ ಅಲ್ಲಿ
ಬಂಧು ಬಳಗ ನೆರೆದಿಹುದೆಲ್ಲ ೩

ಹಲಬರ ನೆರವಿಯ ದೇಹವಿದು ಹೊಳೆ
ಯೊಳಗೆ ಕೂಡಿದ ಕೊರಡಂತಿಹುದು
ಚಳಿಕ ತನ್ನಯ ಈ ಋಣ ತೀರುವುದು
ಎಲ್ಲ ಬಯಲಿಗೆ ಬಯಲಾಗಿ ಹೋಗುವುದು ೪

ಸಾರವಿಲ್ಲದ ಸಂಸಾರವಿದು ನಿ
ಸ್ಸಾರ ದೊಳಿಹ ಪರ ಕೆಡುತಿಹುದು ಈ
ಘೋರವನುಳಿದು ನಿರ್ಮಲನಹುದು ಲಕ್ಷ್ಮೀ
ನಾರಾಯಣನ ಪಾದ ಕೊಡುವುದು ೫

## ೧೧೧

ನಿಮ್ಮಿಚ್ಛೆ ಏನೇನು ಇಲ್ಲ ಎಲ್ಲಾ ಪರಮಾತ್ಮ ನಾಟ ಪ

ಪಗಲಿರುಳಾರಿಂದಬಹುದು ರವಿಶಶಿ ದಿಗುವಿವರವ
ಬೆಳಗುತಲುದಿಸುವರು ಗಗನ ಮಾರ್ಗದಿ ಮಳೆ ಬಹುದು
ಜಗದುದರನಾಟದಿ ಸೃಷ್ಟಿ ಸ್ಥಿತಿಲಯವಹುದು ೧

ಜ್ವಲಿಸಿ ತಾರೆಗಳುದಿಸುವುದು ಜಾಲದೊಳಗೆ
ಮುಳಗದಂತೆ ಇಳೆಯು ಇರುತಿಹುದು
ಸುಳಿದು ಗಾಳಿಯು ಬೀಸುತಿಹುದು ಮೃತ್ಯು
ಎಳೆದು ಹೊಸೆದು ಕಾಲ ಬಳಿ ಕೊಲ್ಲುತಿಹುದು ೨

ನಿನ್ನಿಂದಲೇವಾಗುತಿಹುದು ನಾನು ನನ್ನದು
ನಾನು ಮಾಡಿದೆನೆನ್ನುತಿಹುದು
ತನ್ನ ತಾನಾಗಿ ಹೋಗುವುದು ಕೆಟ್ಟರೆನ್ನರುಶಿವನು
ಕೆಡಿಸಿದನೆನ್ನುತಿಹರು ೩

ಬಾಲ್ಯಯೌವನವು ತೋರುವುದು ನಿನ್ನ
ಸ್ಥೂಲ ಶರೀರದೊಳಗೆ ಮುಪ್ಪುಬಹುದು ಕಾಲ
ಕಾಲಕಾಗುವುದಾಗು ತಿಹುದುವಧಿ
ಕಾಲತೀರಲು ತನಗೆ ತಾ ಲಯವಹುದು ೪

ಉಳ್ಳಷ್ಟ ಮೀರ ದಂತಿಹುದು ಎಲೆ
ಅಲ್ಲಾಡಲಾತನಾಜ್ಞೆಯ ಲಾಡು ತಿಹುದು
ನಿಲ್ಲದೊಡುವ ವಾಯುಸುತನ ಕೋಣೆಯ ಲಕ್ಷ್ಮೀ
ನಲ್ಲನಪ್ಪಣೆಯ ಊಳಿಗ ಸಾಗುತಿಹುದು ೫

## ೧೧೨

ಪ್ರಾಣಕ್ಕೆ ಕಡೆಗಾಲ ಬಂದಿತೋ ಶಿವ ಶಿವ ಇನ್ನೇನಿನ್ನೇನು
ಬೋಣನ ಸಗದ್ದೆಯೊಳಿರುತಿದೆ ನಾಡಿನಲಿನ್ನೇನಿನ್ನೇನು ಪ

ಮುನಿಯ ಭಾವನದಂಡು ನಾಲ್ದೆಸೆಯೊಳು
ಬಂತು ಇನ್ನೇನಿನ್ನೇನು
ಮನೆಯೊಳು ಸಿಕ್ಕಿದೆ ಜಾರಲಿ ಕಣಿಯಿಲ್ಲವಿನ್ನೇನಿನ್ನೇನು
ದನ ಕರುಗಳ ನೊಂದ ನುಳಿಸದೆ ವೈದ್ಯರು ಇನ್ನೇನಿನ್ನೇನು
ಜನರೆಲ್ಲ ಕೈಸೆರೆಯನು ಸಿಕ್ಕಿ ಹೋಯಿತು ಇನ್ನೇನಿನ್ನೇನು ೧

ಅಂಗಳದೊಳು ಪಾದವಿಕ್ಕೀತು ಜನರಿಗೆ ಇನ್ನೇನಿನ್ನೇನು
ಭಂಗಾರವ ತನ್ನಿರೆಂದು ಝುಂಕಿಸಿದರು ಇನ್ನೇನಿನ್ನೇನು
ಭಂಗಪಡುವ ಕಾಲಬಂತು ಮಾನವರಿಗೆ ಇನ್ನೇನಿನ್ನೇನು
ಅಂಗನೆಯ ಹಿಡಿದೆಳೆದು ಸುಲಿದರು ಇನ್ನೇನಿನ್ನೇನು ೨

ಉಡಿಗೆ ತೊಡಿಗೆಯನ್ನು ಸೆಳೆದರು ಸತಿಯರ ಇನ್ನೇನಿನ್ನೇನು
ಕಡಿದರು ಕೆಲರ ತೋಳ್ ತೊಡೆಗಳ ಶಿರಗಳ ಇನ್ನೇನಿನ್ನೇನು
ಕಡಲಿಟ್ಟು ಹರಿದುದು ರಕ್ತ ಪ್ರವಾಹವು ಇನ್ನೇನಿನ್ನೇನು
ಕಡುಪಿಂದೆ ಕಾಲ್ಕೈಗೆ ಮುರವಾಳವಿಕ್ಕಿದರಿನ್ನೇನಿನ್ನೇನು ೩

ಸುಲಿದರು ಚಿನ್ನ ಚಿಗುರು ಬೆಳ್ಳಿ ವಸ್ತುವ ನಿನ್ನೇನಿನ್ನೇನು
ಹೊಳಲಿಗೆ ಬೆಂಕಿಯ ನಿಕ್ಕಿದರಲ್ಲಲ್ಲಿ ಇನ್ನೇನಿನ್ನೇನು
ಪ್ರಳಯಕಾಲದೊಳೊಬ್ಬನೀಶ್ವರನು ಉಳಿದೊಲು
ಉಳಿದೆನು ಇನ್ನೇನಿನ್ನೇನು
ಜಲಜಾಕ್ಷ ನಿನ್ನಯ ಕರುಣ ಕಟಾಕ್ಷದಲಿನ್ನೇನಿನ್ನೇನು ೪

ಹಿಂದಂಬರೀಶ ಗಜೇಂದ್ರನ ಕಾಯ್ದಂತೆ ಇನ್ನೇನಿನ್ನೇನು
ಇಂದಿನ ದುರಿತವ ಪರಿಹರಿಸಿದೆ ನೀನು ಇನ್ನೇನಿನ್ನೇನು
ಬಂಧಿಸಿ ಹೊಡೆದ ಗೋಕುಲವನು ತಂದಿತ್ತೆ ಇನ್ನೇನಿನ್ನೇನು
ಮಂದ ಮಾರುತ ನಣುಗನ ಕೋಣೆ ಲಕ್ಷ್ಮೀಶ ಇನ್ನೇನಿನ್ನೇನು ೫

## ೧೧೩

ಬಡವಗೆ ಬಂತು ಹೆಡಿಗೆಮಾರಿ
ಯಾರೊಡನುಸುರವೆನೋ ಕಡಲಶಾಯಿ
ಬಿಡದೆ ನಿನ್ನನು ಅಡಿಗಡಿಗೆ ಕೊಂಡಾಡುವ
ಹುಡಗನ ಮೇಲಿಷ್ಟು ಕರುಣವಿಲ್ಲದರಿಂದ ಪ

ಪೊಡವಿಯೊಳಗೆ ಜನಿಸಿರುವರೊಳಗೆ ನಾನೆ
ಕಡೆ ಈಗ ಬಸುರಿನೋಳ್ ಪಡೆದ ಮಗನು ತನ್ನ

ಮಡದಿ ಮಕ್ಕಳನು ಎನ್ನೊಡನಿತ್ತು ನಾಕಕೆ
ನಡೆದನೆನಗೆ ನಡುಮರಣವ ಹೊರಸಿ ೧

ಕೆಟ್ಟ ಬದುಕ ಕಾಣಲಾರೆ ಮಾಳ್ಪರೆ ಎನ್ನ
ರಟ್ಟೆ ಬಲವು ತಗ್ಗಿ ಹೋಯ್ತು ಮೊಮ್ಮಕ್ಕಳ
ಅಟ್ಟುಳಿ ಬರಿಸನ್ನವಸ್ತ್ರಾಭರಣಕೆಂದು
ಕುಟ್ಟಿ ಕೊಂಬರು ಎನಗಿದಿರಾಗಿ ಶಿವನೇ ೨

ನಾನು ಎಂಬುವರಿಲ್ಲ ಗೃಹಕೃತ್ಯದೊಳಗೆನ್ನ
ಮಾನಿನಿಯೊರ್ವಳುಂಟಿದರೊಳು ಸೊಸೆಯಷ್ಟು ಏಕೆಂದ
ರೇನು ಸಂಸಾರವಿದನು ಪವಮಾನ ಸುತನ
ಕೋಣೆ ಲಕ್ಷ್ಮೀಶ ನಡೆಸು ೩

## ೧೧೪

ಬರಗಾಲದುರಗ ಜನರ ನುಂಗಿತು ಹೊಟ್ಟೆ ಹೊರೆಯಲು
ಸರ್ವಸ್ವವನು ನುಂಗಿತು ಪ

ಚಿನ್ನ ಚಿಗುರು ಕಂಚು ತಾಮ್ರವನು ನುಂಗಿತು
ಹೊನ್ನೋಲೆ ಮಣಿ ಮುರುಗಳ ನುಂಗಿತು
ಬಣ್ಣ ಬಂಗಾರವ ನುಂಗಿತು ಹೊಟ್ಟೆಗೆ
ಸಣ್ಣ ಹೆಣ್ಮಕ್ಕಳ ನೆರೆ ನುಂಗಿತು ೧

ಮಡದಿ ಮಕ್ಕಳ ಮೇಲಣಾಸೆಯ ನುಂಗಿತು
ಜಡದಿ ಜನರ ಸತ್ವಗಳ ನುಂಗಿತು
ಬಡವ ಬಲ್ಲಿದರನು ಬಿಡದಪ್ಪಿ ನುಂಗಿತು
ಪೊಡವಿ ಯೊಳಗಿರುವಾಸೆಯನು ನುಂಗಿತು ೨

ಎಡಬಲದವ ರೊಡವೆಯ ಕದ್ದು ನುಂಗಿತು
ಕಡಕಟ್ಟಿ ತಂದು ಕೊಡದೆ ನುಂಗಿತು
ಕೊಡುವ ಬಿಡುವ ಧನಿಯರ ಕೈಯ ನುಂಗಿತು
ಕಡಲೋಭಿ ವಿತ್ತವನೆಲ್ಲ ನುಂಗಿತು ೩

ದುಡ್ಡಿಗೆ ಪಾವಕ್ಕಿಯ ತಂದು ರಾಗಿಯ
ದೊಡ್ಡಂಬಲಿ ಕಾಸಿದರೆ ನುಂಗಿತು
ಗುಡ್ಡದಂತವರೆಲ್ಲ ಮಣಿಗೆ ಮಂಡಿಸಿಕೊಂಡು
ದೊಡ್ಡಪ್ಪಗಳಿಗೆಲ್ಲ ಸುರಿದುಂಡಿತು ೪

ಮುನ್ನ ಮಾಡಿದ ಹೊಲ ಮನೆಯನ್ನು ನುಂಗಿತು
ಜನ್ನೆ ಆಕಳ ಮಹಿಷಿಯ ನುಂಗಿತು
ಅನ್ನವೆ ನುಂಗಿತು ಜನರನ್ನು ಲಕ್ಷ್ಮಿಯನಾಳ್ದ
ವನದಾಸರಿಂಗೊಲಿಯಿತು ೫

## ೧೧೫

ಬಹುಕಾಲಕೆ ಕಂಡೆ ಚೋದ್ಯವ ಇದು
ಅಹುದಾದರಹುದೆನ್ನಿ ಇಲ್ಲವೆ ಛಿ ಎನ್ನಿ ಪ

ಕುಂಬಾರ ಗೌಡನ ಮನೆಯಲ್ಲಿ ಪುಟ್ಟಿದ ತಂಬಿಗೆ
ಚಂಬು ಚರಿಗೆಯಂತೆ
ಹಂಬಿತು ಮನೆಮನೆ ತಪ್ಪದೆ ವಿಪ್ರರ ಜಂಬವ
ತೆಗೆಯಿತು ತಾನೆತಾನಾಗಿ ೧

ಸ್ನಾನಪಾನಕೆ ನಿತ್ಯ ನೇಮಕೆ ಶೌಚಾಚಮನಕೆ
ಸಕಲತ್ತು ತಾನಾಗುತ
ಮಾನವರಿಗೆ ಬಹುಳುಪಕರಿಸುತ ಕೆಟ್ಟ ಹೀನ
ಜಾತಿಯ ನಡತೆಯನಡೆಸುವುದನು ೨

ಹಿರಿಯತನವು ಬಂದಿತೆಂದಹಂಕರಿಸದೆ ನರರು
ಸರ್ವತ್ರಸಮಗಾಣುತ
ಭರಿತದೊಳಿರೆ ಕಾಲವಶದಿಂದ ಎಜ್ಜಬಿದ್ದು ಸುರಿಯಲು
ಮನೆಯೆಲ್ಲ ನೀರಾದುದು ೩

ನೀಲಕುಂತಳೆಯರ ಕೈಯಿಂದ ಕೆಟ್ಟದ ಮಲ
ಕೊಳಗು ತಾನು ಒಲಿಸಿಕೊಂಡು
ನಾಳಿ ಕೇರದ ಚಿಪ್ಪುಹಾಳೆ ಬಾಳೆಯದೊನ್ನ
ಮೇಳದಿ ಏಕೋ ಪಾತ್ರಗಳಿಂದ ಮೆರದುದ ೪

ತಿಥಿಮತಿ ಹವ್ಯಕವ್ಯಕು ತಾನೆತಾಗಿ ಅತಿ
ಜತನವು ಎಂದೆನ್ನಿಸಿಕೊಳ್ಳುತ
ಕ್ಷತಿಯೊಳಧಿಕ ಭೀಮನ ಕೋಣೆ ಶ್ರೀ
ಲಕ್ಷ್ಮೀಪತಿಯಭೀಷೇಕಕ್ಕು ತಾನೆ ತಾನಾದುದ ೫

## ೧೧೬

ಬಿತ್ತಿರೋ ಬೀಜವ ಗಜನಿಗೆ
ಮತ್ತೆ ಬೆಟ್ಟಿಗೆ ಬಿತ್ತ ಬಿತ್ತಿದ ಬೀಜ ಬಾರದು ಪ

ಒಳ್ಳೆ ಪಾತ್ರನ ನೋಡಿ ವೇದಾಂತ ವೇದ್ಯಗೆ
ಬೆಳ್ಳಿ ಸುವರ್ಣ ಗೋದಾನಂಗಳ ಉಲ್ಲಾಸ
ದೊಳ ಗೊಂದು ಬುದ್ಧಿಯೊಳಿತ್ತರೆ
ಎಳ್ಳಷ್ಟು ಮಹಮೇರು ಪರ್ವತವಹುದು ೧

ದುಡ್ಡು ದುಗ್ಗಾಣಿಯಾದರು ತನಗುಳ್ಳದು
ದೊಡ್ಡ ಕುಟುಂಬ ಶ್ರೋತ್ರಿಯನ ನೋಡಿ
ಅಡ್ಡ ಮನಸಿಲ್ಲದಂದದಲಿ ಕೊಟ್ಟೊಡೆ
ದೊಡ್ಡ ಪರ್ವತವಾಗಿ ಬೆಳೆವುದು ಕಂಡ್ಯಾ ೨

ಬೆಟ್ಟ ಭೂಮಿಗೆ ಬೀಜ ಬಿತ್ತಲು ಬೀಜವು
ಕಷ್ಟದಿಂದಲಿ ಬೆಳೆದು ಬರಬೇಕು
ಶಿಷ್ಯರಾಗಿರ್ದ ವಿಪ್ರೋತ್ತಮರಿಗೆ ಒಂದು
ಕೊಟ್ಟೊಡೆ ಒಂದು ಲಕ್ಷವಾಗುವುದು ೩

ಶ್ರದ್ಧೆಯಿಂದಲಿ ನಾರಿ ಮಕ್ಕಳು ಸಹಿತ
ಸದ್ಬುದ್ಧಿಯಿಂದಲಿ ದಾನ ಕೊಡಬೇಕು
ಶುದ್ಧ ಪಾತ್ರನ ನೋಡಿ ಕೊಟ್ಟೊಡೆ ಅದು
ಒಂದು ಉದ್ದಿನ ಕಾಳಷ್ಟು ಪರ್ವತವಹುದು ೪

ಯಾರಿಗಾದರೂ ವಿಪ್ರರಿಗೆ ಕೊಡಬಹುದು ವಿ
ಚಾರಿಸೆ ಬೆಟ್ಟುಗಜನಿಯಂತರ
ಮಾರುತಾತ್ಮಜನ ಕೋಣೆಯ ಲಕ್ಷ್ಮೀರಮಣನ
ಚಾರು ದಾಸರಿಗೆ ಇತ್ತರದು ಕೋಟಿ ಫಲವದು ೫

## ೧೧೭

ಮನುಷ್ಯ ಜನ್ಮದಿ ಬಂದು ಮೈಮರೆತಿರಬೇಡ
ಶಿವಶಿವಶಿವ ಎನ್ನಿರೋ
ನಿಮ್ಮ ತನುಮನ ವಚನವ ವ್ಯರ್ಥಕ್ಕೆ ಕಡಸಿದ
ಶಿವಶಿವಶಿವ ಎನ್ನಿರೋ ಪ

ಆಗಮ ಸಿದ್ಧಾಂತಕ್ಕೆ ಮುಖ್ಯ ಜಪವಿದು
ಶಿವಶಿವಶಿವ ಎನ್ನಿರೋ ನಿತ್ಯ
ನಾಗ ಬೇಕಾದರೆ ನೇಮದ ಜಪವಿದು
ಶಿವಶಿವಶಿವ ಎನ್ನಿರೋ
ನಾಗೇಂದ್ರ ಬಣ್ಣಿಸಲರಿಯದ ಜಪವಿದು
ಶಿವಶಿವಶಿವ ಎನ್ನಿರೋ ಭವ
ರೋಗವ ಕೆಡಿಸುವ ಒಲುಮೆಯ ಜಪವಿದು
ಶಿವಶಿವಶಿವ ಎನ್ನಿರೋ ೧

ಜವನ ಬಾಧೆಯನೀವು ಜಯಿಸ ಬೇಕಾದರೆ
ಶಿವಶಿವಶಿವ ಎನ್ನಿರೋ
ನಿಮ್ಮ ಭವಣೆಯ ಪಡಿಸುವ ಪಾಪವು ಪರಿಯಲು
ಶಿವಶಿವಶಿವ ಎನ್ನಿರೋ
ಭುವನಕ್ಕೆ ಬಲ್ಲಿದ ರಾಗಬೇಕಾದರೆ ಶಿವಶಿವಶಿವ ಎನ್ನಿರೋ ಬೇಗ
ಶಿವ ಪದವಿಯ ನೀವು ಸೇರ ಬೇಕಾದರೆ
ಶಿವಶಿವಶಿವ ಎನ್ನಿರೋ ೨

ಅಪರಾಧ ಶತಕೋಟಿ ಪರಿಹಾರವಾಗಲು
ಶಿವಶಿವಶಿವ ಎನ್ನಿರೋ
ಜಪಿಸಿದವರಿಗಾತ್ಮ ಸಿದ್ಧಿಯ ಜಪವಿದು
ಶಿವಶಿವಶಿವ ಎನ್ನಿರೋ
ಉಪಮಿಸಬಾರದ ಸುಖ ವೀವಜಪವಿದು
ಶಿವಶಿವಶಿವ ಎನ್ನಿರೋ
ತ್ರಿಪುರಾರಿ ಲೋಕವ ಪಡೆಯ ಬೇಕಾದರೆ
ಶಿವಶಿವಶಿವ ಎನ್ನಿರೋ ೩

## ೧೧೮

ಮರುಳಾಟವೆನಗಿನ್ನು ಕಾಶಿ ಸುಮ್ಮನಿರುವುದೊಳ್ಳಿತು
ಮನೆಯಲಿ ಸುಖವಾಸಿ ಪ

ಕೈಯೊಳರ್ಥವು ಮೊದಲಿಲ್ಲ ಹಾಗಾದರು
ಮೈಯೊಳಗೇ ನೇನು ಗುಣ ಕಾಂಬುದಿಲ್ಲ
ಧೈರ್ಯಲಕ್ಷ್ಮಿಯ ತುದಿಗಿಲ್ಲ ಪರರ
ಕೈಯ ಬೇಡಲು ಕಾಣೆ ಕೊಡುವವರಿಲ್ಲ ೧

ಹೊಳೆ ಕೆರೆ ಬಾವಿಯಿದ್ದಲ್ಲಿ ಭಾಗೀರಥಿ
ನೆಲೆಸಿ ಕೊಂಡಿಹಳಿಲ್ಲಿ
ಮುಳುಗಿ ಮಿಂದರೆ ಭಕ್ತಿಯಲ್ಲಿ ಕಾಶಿ
ಯೊಳಗೆ ಗಂಗೆಯ ಮಿಂದ ಫಲ ಬಹುದಿಲ್ಲಿ ೨

ಜ್ಞಾನವಿಲ್ಲದೆ ಮೋಕ್ಷವಿಲ್ಲ ಮುಕ್ತಿ
ಮಾನಿನಿಯನು ಕೂಡಿ ಸುಖಿಸಲು ಬಲ್ಲ
ಜ್ಞಾನಿಗಳಿಗೆ ತೋರ್ಪುದೆಲ್ಲ ಹರಿ
ಸೂನು ಕೋಣೆಯ ಲಕ್ಷ್ಮೀರಮಣ ತಾನೆಲ್ಲ ೩

## ೧೧೯

ಮುನಿದ ಭಾವುನದಂಡು ಕಂಡು
ನಿನ್ನ ಮನೆಮಾರಿ ನಾಸೆಯನು ನೀಡಾಡು ಪ

ಲಂಬಾಣಿ ಜನ ಬಂತು ನೋಡು ನೀನು
ದಿಬ್ಬವ ಹತ್ತಿ ಕಾನಿಗೆ ಓಡು
ತಂಬಿಗೆಗಳ ಜೊತೆಮಾಡು ತಲೆ
ಚಂಬಿಗೆ ಬಂತು ಮಾನವರಿಗೆ ಕೇಡು ೧

ಕಂಡ ಕಂಡವರನು ಹಿಡಿದು ಕರ
ಚೆಂಡಾಡಿ ಹೊಯ್ದು ಕೆಡಹಿ ಮೆಟ್ಟಿ ತಿವಿದು
ಖಂಡೆಯದೊಳು ಘಾಯ ಗರೆದು ಮೈ
ರೊಂಡಿ ಮುರಿದು ಗಂಟಿಗೆ ನೀರನೆರೆದು ೨

ಕತ್ತಿಯ ಕಿತ್ತು ಕೈಯೆತ್ತು ಗೋಣ
ಕುತ್ತಿ ಹಸ್ತಕೆ ಹಸ್ತವನು ತರಿದೊತ್ತಿ
ರಕ್ತ ಮಾಂಸದ ಕರುಳೊತ್ತಿ ಹಾ
ರಿತು ಗೂಡಿಂದ ಜೀವನು ಕಣ್ಣ ಕುತ್ತಿ ೩

ಹಂತಕಾರಿಗಳೊಂದೆ ರೂಪು ಪಾಪ
ವಂತರಿಗಿನಜ ತೋರಿಸುವ ವಿರೂಪ ನರ
ಜಂತುಗಳಿಗೆ ಇವರೆ ಮೃತ್ಯುರೂಪ ಚಪ್ಪು
ಕಂತೆಯ ಬಿಡದೆ ಸುಲಿಯಲಿಕೆ ಸಾಪು ೪

ಶೀಲವಂತರು ಶೀಲಗೆಟ್ಟರು ದುಃ
ಶೀಲರು ಶೀಲದಾಚಾರವ ಸೊಟ್ಟರು
ಕೀಳು ಮೇಲೊಂದಾಯಿತಷ್ಟು ಲಕ್ಷ್ಮೀ
ಲೋಲ ಮಾಡಿಸುವ ಕುಚೇಷ್ಟೆ ಇವಿಷ್ಟು ೫

## ೧೨೦

ಯಾಕಂತೆ ಸುಮ್ಮನೆ ಕಕುಲಾತಿ ನರಲೋಕದಿ
ಸಂಸಾರದೊಳು ಸುಖವಿಲ್ಲ ಪ

ದುಂಡನೆ ಬಂದಿಹೆ ದುಂಡನೆ ಹೋಗುವೆ
ಹೆಂಡಿರು ಮಕ್ಕಳ ನಡುವೆಯಲಿ
ತಂಡ ತಂಡದಿ ಹುಟ್ಟಿ ಕೊಂಡವರು ನಚ್ಚಿ
ಕೊಂಡಿವರನು ಪರಗತಿಯ ಕೆಡಿಸದಿರು ೧

ಹುಟ್ಟುತ ತರಲಿಲ್ಲ ಹೋಗುತ ವೈಯೊಲ್ಲ
ನಟ್ಟ ನಡುವೆ ಬಂದ ಸಿರಿಯಿದು
ಕಟ್ಟ ಕಡೆಗೆ ನೀನು ಮಡಿಯಲಿ ಕರುವೆಯ
ಬಟ್ಟೆಯ ಶವ ಕಿತ್ತಲಿದು ಬಳ್ಳಿತೆಂಬರು ೨

ಎನ್ನಮನೆಯು ಎನ್ನತೋಟ ತುಡಿಗೆಯಿದು
ನಿನ್ನದು ಪಶುಧನ ಕನಕಂಗಳು ಎಂ
ದೆನುತ ಹಿಗ್ಗದಿರು ಇದರೊಳಗೊಂದು
ಚಿನ್ನ ಬಾರದು ಕಾಲನವರೆಳೆದೊಯ್ವಾಗ ೩

ಘಟ್ಟದ ಕೆಳಗುಷ್ಟು ಬೆಟ್ಟದ ಮರಗಾಯಿ
ಹುಟ್ಟಿದ ಬಯಲ ಸೀಮೆಯ ಮೆಣಸು
ಕುಟ್ಟಿದ ಸಾಸುವೆ ಸಂಬಾರಗಳು ಕೂಡಿ
ಬಟ್ಟಾದ ಲವಣ ಶಾಕದ ವೋಲು ಸಂಸಾರ ೪

ಜಾಣನಾದರೆ ಪರಗತಿಯ ನೀ ನೊಲುವೊಡೆ
ತ್ರಾಣ ವಿರಲಿಕೆ ತೊಡಕಬಿಟ್ಟು ಕಾಣುಸಂಸಾರವ
ವಿಷವೆಂದು ತ್ಯಜಿಸಿ ಗೀರ್ವಾಣವಂದಿತ ಲಕ್ಷ್ಮೀರ
ಮಣನ ಮೊರೆಹೋಗು ೫

## ೧೨೧

ಯಾಕೆಂದು ದಣುಕೊಂಡಿರಿ ಸುಮ್ಮನೆ ವೃಥಾ
ಯಾಕೆಂದು ದಣುಕೊಂಡಿರಿ ಶ್ರೀಕಾಂತನ ದಿವ್ಯ
ನಾಮವೊಂದಿದ್ದಮೇಲೆ ಪ

ನಾನಾ ಶಾಸ್ತ್ರಗಳೆಂಬ ಕಾನನದೊಳಗೆ
ಕಣ್ಣಾಣದವರವೋಲು ತಿರುಗುವಿರಿ
ಆನಂದಾತ್ಮಕ ಶ್ರೀನಾಥನೆ ಸರ್ವರೊಳು ತಾನೆತಾನಾಗಿ
ಚರಿಸುತಿದ್ದಾಮೇಲೆ ೧

ಕಾಶಿರಾಮೇಶ್ವರ ಎಂದು ದೇಶವ ತಿರುಗಾಡಿ ಘಾಸಿ
ಮಾಡುವುದೇಕೆ ದೇಹವನು
ಆಸೆ ಎಂಬಾ ಮಾಯಾಪಾಶವ ಹರಿದು ವಿಲಾಸದೊಳಾತ್ಮನ
ನೆಲೆಯನು ತಿಳಿಯದೆ ೨

ಧನಧಾನ್ಯ ಧಾರುಣಿ ಮನಕೆ ಬಂದಿಹ ಸತಿತನುಜರು
ತನ್ನಯ ಮಂದಿರವು
ಅಣು ಮಾತ್ರವು ನಿನ್ನ ಸಂಗಡ ಬಾರದೋ
ತನುವಿದುಸ್ಥಿರವಲ್ಲ ತೃಣವಿತ್ತು ಸಾರಿದೆ ೩

ಕಡಿದ ಹೆಮ್ಮರನಂತೆ ಮಡಿದು ಕಿಚ್ಚಿನೋಳ್
ಸುಟ್ಟು ಹುಡಿಹುಡಿಗೊಂಬ ಶರೀರವನ್ನು
ಮಡಿ ಮೈಲಿಗೆ ಶುಚಿ ಕುಡಿಹುಬ್ಬು ತೊನೆ ಮೀಸೆ
ಕಡುಬಿಂಕ ಸೊಕ್ಕಿನ ಬಡಿವಾರ ತರವಲ್ಲ ೪

ವ್ರತ ನೇಮಗಳಲಿ ಸದ್ಗತಿಯೀಗ ದೊರಕದೋ
ಮತಿಗೆಟ್ಟು ಸುಮ್ಮನೆ ತೊಳಲದಿರು
ಕ್ಷತಿಯೊಳಧಿಕ ಭೀಮನ ಕೋಣೆಯ ಶ್ರೀ ಲಕ್ಷ್ಮೀಪತಿಯನೆನೆದು
ಜ್ಯೋತಿಯ ಕೂಡುಕಂಡ್ಯಾ ೫

## ೧೨೨

ಯಾಕೆ ಬಯಸುವೆ ಸಿರಿಯನೆಲೆ ಮಾನವ ಸಿರಿಯು
ನಾಕಪತಿ ಮೊದಲಾದವರಿಗಸ್ಥಿರವು ಪ

ಧನಕನಕ ವಸ್ತುವಾಹನವೊಂದು ಸ್ಥಿರವಲ್ಲ
ಕನಸಿನಂದದಿ ಭಾಳ್ವೆ ಅಭ್ರಮಿಂಚು
ತನುವಿನಲಿ ಹರಿಯ ಸೆರೆವಿಡಿದು ಕೊಂಬುದೆ ರೊಕ್ಕ
ಚಿನುಮಯನ ಪಾಡುವುದೆ ಸಕಲ ಬದುಕು ೧

ಇಂದು ನೀನರಿದು ಜ್ಞಾನದಿ ನಡೆವುದೆ ಮೋಕ್ಷ
ಸಿಂಧು ಶಯನನ ನಾಮ ವೈಕುಂಠವೋ
ಕಂದರ್ಪನುಪಟಳವ ಕಟ್ಟುವುದೆ ಕೈಲಾಸ
ಮಂದರ ಧರನ ನೆನೆವುದೆ ಸಕಲವಸ್ತು ೨

ಭಕ್ತವತ್ಸಲನ ನೆನವುದೆ ಸಕಲ ಸಂಪತ್ತು
ಚಿತ್ತ ಶುದ್ಧಿಯಾಗುವುದೆ ಸಕಲ ಭಾಗ್ಯ
ಮತ್ತೆ ಭೀಮನ ಕೋಣೆ ಲಕ್ಷ್ಮೀಪತಿಯ ನೆನೆದು
ಉತ್ತರಿಸಿದರೆ ಭವದಸಕಲಪದವಿ ೩

## ೧೨೩

ಯಾಕೆ ಮೈ ಮರೆತಿದ್ದೆ ಹೇಳೋ ಎಲೆ ಮರುಳೆ
ಜೋಕೆ ತೀರೀತು ನಿನ್ನ ಬಾಳು ಪ

ನಿಟ್ಟೆಲುಗಳಿಂದ ಕೈ ಕಾಲ್ಗಳೆಂಬುವನು ಮಾಡಿ
ಚಿಟ್ಟೆಲುಗಳನು ಸಂದಕೂಡಿ ಪಟ್ಟಿನಲ್ಲಿ ತನುಪುರವ
ಕಟ್ಟಿದರು ನರದಿಂದ ಪಟ್ಟಣವ ನಿರ್ಮಿತವ ಮಾಡಿ
ಅಷ್ಟಪುರ ಕಲ್ಲಲ್ಲಿ ನವಕವಾಟವ ರಚಿಸಿ
ದುಷ್ಟದುರ್ಜನರೆಲ್ಲ ಕೂಡಿ ಕಟ್ಟಿದರು ಜೀವನಿಗೆ
ಪಟ್ಟವನು ದೊರೆಯೆಂದು ಭ್ರಷ್ಟನಾಗಲು ಬೇಡ
ಇವರ ಕೂಡಾಡಿ ೧

ಅಸ್ಥಿ ಪಂಚರದಿಂದ ಮನೆಯಾದುದಿದರೊಳಗೆ
ರಕ್ತಮಾಂಸವು ಚರ್ಮಪೂಡಿ
ಮತ್ತೆ ಮಲ ಮೂತ್ರ ಕ್ರಿಮಿ ಕೀಟ ರುಜೆಬಾಧೆಯಲಿ
ವಿಸ್ತರದಲಿದಕೆ ನಲಿದಾಡಿ
ಪುತ್ರ ಮಿತ್ರ ಕಳತ್ರವೆಂಬ ಪಾಶಕೆ ಸಿಲುಕಿ
ವ್ಯರ್ಥದಲಿ ದಿನವ ನೀಗಾಡಿ
ಅಸ್ಥಿರದ ದೇಹವನು ನಚ್ಚಿಭವ ಶರಧಿಯೊಳು
ಕುಸ್ತರಿಸಿ ಬಿದ್ದು ಈಜಾಡಿ ೨

ಹೊಲಸು ಹೆಬ್ಬಡಿಕೆ ನಾರುವನರಕ ಕೀವು ಕ್ರಿಮಿ
ಯಲು ನರಂಗಳು ಮಜ್ಜೆ ಮಾಂಸ
ಕೊಳಕು ನಾರುವ ಹಡಿಕೆಗೆಳಸುತಿಹ ನಾಯಂತೆ
ಬಲಿದಿಹುದು ನಿನ್ನ ಮೇಲಂಶ
ಹಲವು ನಾನಾಯೋನಿ ಜನ್ಮದಲಿ ತೊಳ ತೊಳಲಿ
ಬಳಲಿ ಬಸವಳಿದೆಲೋನ ಪುಂಸ
ಕೊಳೆಯ ಮೇಧ್ಯದ ಪುಂಜ ತನುವಿದನು ನೆರೆನಂಬಿ
ಫಲವಿಲ್ಲ ಹರಿಯಧ್ಯಾನಿಸೋ ಪರಮಹಂಸ ೩

ತಂದೆ ತಾಯಣ್ಣ ತಮ್ಮಾದಿ ಸತಿ ಸುತರುಗಳು
ಹೊಂದುವರು ನಿನ್ನ ಕಣ್ಣಾರೆ
ಇಂದಿಲ್ಲಿ ಸತ್ತರು ಎಂಬ ವಾರ್ತೆಯನು ಛಂದದಲಿ
ಕೇಳ್ವೆ ಕಿವಿಯಿಂದ
ಮಂದಮತಿಯಾಗಿ ಮಂದದಿಂದಲುಬ್ಬಿ
ಎನಗೆ ಸತಿಯಿಲ್ಲೆಂದು
ಪೊಗಳೆ ನಿನ್ನಾರೆ ಮುಂದೆ ಕಡಬೇಡ ಯಮ ಬಂಧನಕೆ
ಗುರಿಯಾಗಿ ಇಂದಿರೇಶನ ಪೂಜಿಸಲು ನಾಕೈಯಾರೆ ೪

ಇದರೊಳಗೆ ಬಾಲ್ಯಕೆನೊರ್ಯ ಯೌವ್ವನವೆಂಬ
ಮದವಳಿದು ವಾರ್ಧಕಗಳಡಿಸಿ
ಉದಯಾಸ್ತಮಾನ ಪರಿಯಂತರವು
ಸದನದಲಿ ಸುದತಿ ಸುತರಲಿ ಮೋಹವಿರಿಸಿ
ಉದರವನು ಹೊರುವುದಕೆ ತುಡಿ ತುಡಿದು ಬೇಸತ್ತು
ದಣಿಯದಿರು ಮನವ ನೆರೆನಿಲಿಸಿ
ಸದಮಲಾತ್ಮಕ ವಾಯುತನಯ ಕೋಣೆಯ
ಲಕ್ಷ್ಮೀರಮಣನನು ಹೃದಯದೊಳುಸ್ಮರಿಸಿ ೫

## ೧೨೪

ಯಾತರ ಸುಖವೆಂದು ಸುರುವಿ ಈ
ಭೂತದೊಳಗಿನ್ನು ಬಿನುಗುಮಾನವರಿಂಗೆ ಪ

ನೆತ್ತಿಯ ಮೇಲೊಂದು ಕೆರೆಯುಂಟು ಅದು ತುಂಬಿ
ಸುತ್ತಲು ಹರಿ ನೀರು ಹರಿದಾಡಿತು
ಬತ್ತಿತು ಮೂಗಿನೊಳುಸುರ್ಃ ಕಿವಿಯನು
ಕುತ್ತಿತು ಪರರೆಂದ ಮಾತು ಕೇಳಿಸದಂತೆ ೧

ಊಟದ ಸುಖವದೇನೆಂಬೆನೆ ಕ್ಷೀರದಧಿ ಘೃತ ಮಧು
ಕೈಟಭಾರಿಯ ಮನೆಯೊಳಗುಂಟು
ತೋಟದೊಳಿಹ ಬಾಳೆದಿಂಡು ಕುಂಡಿಗೆತಿಂದು
ಪಾಟಿಸಿ ಸರ್ವಾಂಗವನು ಧಾತುಗೆಡಿಸಿಹುದು ೨

ಶಯನ ವೆಂದರೆ ಪರರ ಸುಲಿಗೆಯಿಂದ ಭೂ
ಶಯನವೇಶಯನ ನಿಶ್ಚಯವಾಯಿತು
ನಯನ ಮೂರುಳ್ಳ ದೇವನ ಮಿತ್ರ ಶ್ರೀ ಲಕ್ಷ್ಮೀ
ರಮಣನೊಬ್ಬನೆ ಬಲ್ಲ ನಾನೊಬ್ಬನು ಬಲ್ಲೆನು ೩

## ೧೨೫

ಯಾರು ಇದ್ದರೇನು ನಿನ್ನ ಪಥಕೆ ಬಾರರೋ ಶ್ರೀಹರಿ
ಮುರಾರಿ ಎಂದು ಗತಿಯ ನೋಡಿ ಕೊಂಡಿರೋ ಪ

ಹೊನ್ನು ಹಣವು ಚಿನ್ನ ಚಿಗುರು ಬಣ್ಣ ಬಂಗಾರವಿರಲು
ಎನ್ನವರು ತನ್ನವರು ಎಂದು ಬರುವರೋ
ಅನ್ನಕಿಲ್ಲದಿರಲು ಕೆಟ್ಟು ಅಲ್ಲಿ ಪರಿಕಾಲದಲ್ಲಿ
ನಿನ್ನ ಕುಶಲವಾರ್ತೆಗಳನು ಮುನ್ನ ಕೇಳರೋ ೧

ಇಂದು ಹಬ್ಬ ಹುಣ್ಣಿಮೆಂದು ಬಂಧು ಬಳಗವೆಲ್ಲನೆರೆದು
ತಿಂದು ನಿನ್ನ ಹಿಂದೆ ಮುಂದೆ ತಿರುಗು ತಿಪ್ಪರೋ
ಬಂಟ ಬಹಳ ಭಾಗ್ಯವೆಲ್ಲ ಕುಂದಿ ಹೋದ ಕಾಲದಲ್ಲಿ
ಬಂಧು ಬಳಗವೆಲ್ಲ ನಿನ್ನ ಮನೆಯ
ಮುಂದೆ ಸುಳಿಯರೋ ೨

ಒಡವೆ ವಸ್ತು ಧನವು ಧಾನ್ಯ ಮನೆಯ
ಒಳಗೆ ತುಂಬಿ ಇರಲು
ಎಡದೆ ಬಿಡದೆ ನೆಂಟರಿಷ್ಟರೆಂದು ತಿಂಬರೋ

ವಡವೆ ವಸ್ತು ನಷ್ಟವಾಗಿ ಬಡತನವು ಬಂದ ಬಳಿಕ
ಬಿಡುವ ಕೈಯ ನಿನ್ನ ನೊಂದ ನುಡಿಯ ನುಡಿಸರೋ ೩

ಮಡದಿ ಮಕ್ಕಳೆಲ್ಲ ನಿನ್ನ ಒಡನೆ ಹುಟ್ಟಿದವರು ಸಹಿತ
ಕಡು ಮಮತೆಯಿಂದಲವರು ನೋಡಿ ನಡೆವರೋ
ಉಡಲು ತೊಡಲು ಒಡಲಿಗಿಷ್ಟು ಕಡಿಮೆಯಾಗಿ
ಕೆಡುತ ಬರಲು ಒಡೆದು ಪಾಲು ಮಾಡು
ಎಂದು ಹೊಡೆದು ಕೊಂಬರೋ ೪

ಮೃತ್ಯುನಿನ್ನ ಹತ್ತಿರಿದ್ದು ಹೊತ್ತು ವೇಳೆ ನೋಡುತಿಹುದು
ವ್ಯರ್ಥವಾಗಿ ಇವರ ನಂಬಿ ಕತ್ತೆ ಕೆಡದಿರೋ
ಸತ್ತು ಹುಟ್ಟಿ ಸಾಯ ಬೇಡಿ ಚಿತ್ತದಲ್ಲಿ ಭೀಮನಕೋಣೆ
ಗೊತ್ತಿಲಿದ್ದ ಲಕ್ಷ್ಮೀಪತಿಯ ಒತ್ತಿ ಭಜಿಸಿರೋ ೫

## ೧೨೬

ಯಾರು ಮೀರಲರಿದು ಬ್ರಹ್ಮ ಬರೆದಲಿಖಿತವ
ಪುರಾರಿ ಮಿತ್ರನೊಬ್ಬ ಬಲ್ಲನಿದರ ಕೆಲಸವ ಪ

ಎಲ್ಲಿ ದಂಡು ಎಲ್ಲಿ ಗೂಳ್ಯವೆಲ್ಲಿಗಮನವಲ್ಲಿ ವಾಸ
ವೆಲ್ಲಿ ಊಟವೆಲ್ಲಿ ಶಯನವು
ಎಲ್ಲಿ ನಿದ್ದೆ ಎಲ್ಲಿ ಸುಲಿಗೆ ಎಲ್ಲಿ ಕಡಿತ
ವೆಲ್ಲಿ ಮರಣ ವೆಲ್ಲಿ ರುದ್ರಭೂಮಿ ಮತ್ತೆಲ್ಲಿ ಜನನವು ೧

ಊರದೆಲ್ಲಿ ಮನೆಗಳೆಲ್ಲಿ ನಾರಿ ನೆಂಟರಿಷ್ಟರೆಲ್ಲಿ
ಸೇರಿಸಿಟ್ಟ ವಸ್ತು ವಡವೆ ಒಂದು ಕಾಣವು
ಭೂರಿ ಪಶುಗಳೆಲ್ಲಿ ಭಯವು ಏರಿ ನೋಳ್ಪಗುಡ್ಡ ಸಂ
ಚಾರವೆಲ್ಲಿ ಹಸಿವು ತೃಷೆಯು ಹರುಷ ದುಃಖವು ೨

ಹಿಂದುಯಿಲ್ಲ ಮುಂದುಯಿಲ್ಲ ಸಿಂಧುತನಕ ತಪರರಿಂದ ಕೆಟ್ಟ
ಕೇಡ ಹೇಳತೀರದು ಮುಂದೆ ಜನರನೆಲ್ಲ ಕರಣ
ದಿಂದ ಸಲಹುತಿರುವ ಮರುತ
ನಂದನ ಕೋಣೆವಾಸ ಲಕ್ಷ್ಮೀರಮಣ ಬಲ್ಲನೋ ೩

## ೧೨೭

ಯಾವ ಊರು ಎನ್ನಲಯ್ಯ ಎನಗಿನ್ನು
ಯಾವ ಊರು ಎನ್ನಲಯ್ಯ ಪ

ಈ ಜಗತ್ತಿನೊಳಧಿಕ ಸಂಸಾರವೆಂಬ ಸಾಗರ ನಗರದೊಳು
ಮೂಜಗವನು ಸೃಜಿಸಿದನೊಂದು ಮನೆ ಮಾಡಿ
ನೀರಲ್ಲಿ ಇರುಎಂದನು ೧

ಸೊಕ್ಕಿದಾನೆಗಳು ಎಂಟು ಈ ಮನೆಯ
ಹೊಕ್ಕು ಬಾಧಿಸುತಿಹವು
ಮಿಕ್ಕ ವೈರಿಗಳಾರುಮಂದಿ ಊರೊಳು
ಪೊಕ್ಕು ಸುಲಿಯುತಿಹರು ೨

ಕಳ ಭಂಟರೈದು ಮಂದಿ ಈ ಊರೊಳು
ಬಹುಳುಪದ್ರಿಸುತಿಹರು
ಖುಲ್ಲ ಮನ್ಮಥನುಪಟಳಕೆ ನಾನೆರೆಸಿಕ್ಕಿ
ಜಳ್ಳಿನೆಂದೆನಯ್ಯ ೩

ಇಷ್ಟು ಸಂಕಟ ತಾಳದೆ ಈ ಊರುಬಿಟ್ಟು ಪೋಗುವೆನೆಂದರೆ
ಘಟ್ಯಾಗಿ ಬಿಗಿದು ಕಟ್ಟಿದ ಮಾಯೆ
ಹರಿನೇಣ ಕಟ್ಟೆ ಬಿಚ್ಚುವರಿಲ್ಲವಯ್ಯ ೪

ಊರುಗಳೆಷ್ಟಾಯಿತೋ ಊರುಮನೆ
ಸುಟ್ಟು ಹಾರಿದುದೆಷ್ಟಾಯಿತೋ
ಮಾರುತಾತ್ಮಜನ ಕೋಣೆ ಲಕ್ಷ್ಮೀರಮಣಗೆ
ದೂರಿಟ್ಟು ಸಾಕಾಯಿತೋ ೫

## ೧೨೮

ಯಾವ ಕಾಲ ತಪ್ಪಿದರು ಸಾವಕಾಲ ತಪ್ಪದೋ
ಯಾವ ಜೀವ ಜಂತುಗಳಿಗೂ ಕಾಯವಿಡಿದು ಬಂದ ಬಳಿಕ ಪ

ಇರಲಿಜನನಿ ಜನನಿ ಜಠರದೊಳಗೆ ಧರೆಗೆ
ಜನಿಸಿ ತಂದೆತಾಯ
ಕರ ದೊಳಿರಲಿ ಸ್ತನವನುಂಡು ಭರದಿನಿದ್ರೆ ಗೈಯುರ್ತಿಲಿ
ನೆರೆದಬಾಲರೊಡನೆ ಆಡಿ ಚರಿಸುತಿರಲಿ ಬಾಲಕತ್ವ
ತೆರಳಿ ಜವ್ವನವು ಬಂದು ರಮಣಿಯನ್ನೆ ವರಿಸಿ ಇರಲಿ ೧

ಇರಲಿ ಸಿರಿಯ ಸಡಗರದಲಿ ಕರಿ ಹಯಂಗಳನ್ನೇ
ಹತ್ತಿ ಮೆರೆಯುತಿರಲಿ
ದೊರೆಗಳೊಡನೆ ಚರಿಸುತಿರಲಿ ಮೇರು ಗಿರಿಯ ಶಿರದೊಳಿರಲಿ
ಶರಧಿ ಮಧ್ಯ ಪುರದೊಳಂಲರಣ್ಯದೊಳಗೆ ತಿರುಗುತಿರಲಿ
ಅತಳ ಸುತಳ ವಿತಳವನ್ನೆ ಪೊಕ್ಕುಇರಲಿ ೨

ಕಾಯವಿದುವೆ ತನ್ನ ಪೆತ್ತ ತಾಯಿತಂದೆಗಳಿಗೋ
ಜಾಯೆ ಸುತರ ಗೃಧ್ರ ಭಲ್ಲುಕಾದಿಗಳಿಗೋ ಪುಲಿಗೋ
ವಾಯಸಾದಿ ಕ್ರಿಮಿಗೋ ಕೀಟಕಾದಿಗಳಿಗೋ
ನಾಯ ನರಿಗೋ ವಾಯುಸುತನ ಕೋಣೆ
ಲಕ್ಷ್ಮೀರಮಣನೊಬ್ಬ ಬಲ್ಲನಿದನು ೩

## ೧೨೯

ಯಾರಿಗಾದರು ಬಿಡದು ಪೂರ್ವಾರ್ಜಿತ ಬೆನ್ನ
ಸಾರಿಹುದು ಭವಭವದೊಳದು ಕಾಡುತ ಪ

ಇಂದ್ರ ದೊಡ್ಡವನೆಂದರವಗೆ ಮೈಕಣ್ಣೆಲ್ಲ
ಚಂದ್ರ ದೊಡ್ಡವನೆನಲು ಹೆಚ್ಚು ಕುಂದು
ಇಂದ್ರ ಜಾಲೆಯು ಲಕ್ಷ್ಮೀದೇವಿ ದೊಡ್ಡವಳೆನಲು ಮ
ಹೇಂದ್ರ ಜಾಲೆಯು ಒಂದು ಕಡೆ ನಿಲ್ಲಳು ೧

ಸರಸಿರುಹಭವ ದೊಡ್ಡವನೆನಲು ನಡುತಲೆಯಿಲ್ಲ
ತರುಣಿ ದೊಡ್ಡವನೆನಲು ಸಂಚಾರವು
ಉರಿಯು ದೊಡ್ಡವ ನೆನಲು ಮೈಯೆಲ್ಲ ಧೂಮಮಯ
ಉರಗ ಮಿಗಿಲೆನೆ ಶಿರದಿ ಪೊತ್ತಭಾರ ೨

ಮೇರು ದೊಡ್ಡವ ನೆನಲು ಏಳಲಿ ಬಗೆಯಿಲ್ಲ
ವಾರಧಿಯು ದೊಡ್ಡಿತೆನೆ ಪಾನಕಿಲ್ಲ
ಮಾರುತಾತ್ಮಜ ಕೋಣೆ ವಾಸ ಲಕ್ಷ್ಮೀರಮಣ
ಯಾರಿಗೂ ಸ್ವತಂತ್ರವನು ಕೊಟ್ಟುದಿಲ್ಲ ೩

## ೧೩೦

ಯಾರಿಗೆ ಹೇಳೋಣ ಪ್ರಜೆ ಕೆಟ್ಟು
ಹೋದುದಿನ್ಯಾರಿಗೆ ಹೇಳೋಣ
ಊರಿದ ಬೇಲಿಯ ಕೋಲುಗಳೆದ್ದು
ಹೊಲಮೆದ್ದರಾರಿಗೆ ಹೇಳೋಣ ಪ

ಎದ್ದನು ದುರ್ಜನ ಬಿದ್ದಬಿನುಗು ಪ್ರಜೆ ಉದ್ದ
ಗುದ್ದಗಳೆಲ್ಲ ಸಮನಾಯಿತು

ಇದ್ದ ಹೆಣ್ಮಕ್ಕಳ ಮೈಮೇಲಕೆ ಒಂದು
ಉದ್ದಿನ ಕಾಳಷ್ಟು ಚಿನ್ನಗಳಿಲ್ಲ ೧

ಕಂಚು ತಾಮ್ರವು ಮಾರಿಹೋಯಿತು
ಕೊಂಚ ತಣ್ಣೀರ ಕೊಳ್ಳಲಿಕ್ಕಿಲ್ಲ
ಸಂಚ ಕಾರವು ಪ್ರಾಣಕಾಯಿತು ನಾವಿನ್ನು
ಪಂಚತ್ವವ ನೈದಿದರೊಳ್ಳಿತು ಎಂಬರು ೨

ಭೂರಿ ಹೇಮರಜತಗಳ ಮಾರಿಯಾಯಿತು
ಭಾರಿ ತೆರಿಗೆ ಶ್ರಮಸೀಮೆ ಪ್ರಜೆಗಳಿಗಾಯ್ತು
ಭೀಮನ ಕೋಣೆ ಲಕ್ಷ್ಮೀರಮಣನ ನಂಬಿ
ಭಿಕ್ಷೆಗೆ ಮನವ ತಾಳಿರಣ್ಣ ೩

## ೧೩೧

ಯಾವ ಮನುಜರೊಳಗು ನಡೆವ ನಡತೆ ಕೆಟ್ಟಿತು
ಭಕ್ತಿ ಭಾವಗಳು ಸ್ವಲ್ಪಮಾತ್ರವಿಲ್ಲವಾಯಿತು ಪ

ಗುರುಗಳಿವರು ಹಿರಿಯರಿವರು ಶರಣರೆಂದು
ತಾರತಮ್ಯದಿ ರವನರಿತು ಅರಿಯದಂತೆ ಸಿರಿಯ ಮದದಲಿ
ಬೆರತು ಕೊಂಡು ಸಾದುಜನರು ಬರಲು ಶುನಕ ನಂಕೆನೋಡಿ
ಮರಳುತಿಹರು ಏನನೆಂಬೆ ನೆಲವ ನೋಡದೆ ೧

ನಿಟ್ಟಿಸದೆ ಸಾದುಗಳನು ಪ್ರಾಯ ಮದದ ಹಮ್ಮಿನಿಂದ
ಭ್ರಷ್ಟ ಜನರು ಪುಣ್ಯ ಪಾಪಗಳನು ತಿಳಿಯದೆ
ಅಷ್ಟದಿಕ್ಕು ತಮ್ಮದೆಂದು ಸರ್ವಗಿರಿಯನೇರಿ ತಾವೆ
ಶ್ರೇಷ್ಠರೆಂದು ತಮ್ಮ ತಾವೆ ಕೊಂದು ಕೊಂಬರೋ ೨

ನೂತನದಾಭರಣ ವಸ್ತ್ರ ಜಾತಿಯನ್ನು ಉಟ್ಟು ಕೊಟ್ಟು
ಪ್ರೀತಿಯಿಂದ ತಮ್ಮ ತಾವೆ ನೋಡಿ ಹಿಗ್ಗುತಾ
ಧಾತು ತಪ್ಪಿ ನಡೆವ ಜನರ ವಾತಸುತನ ಕೋಣೆಲಕ್ಷ್ಮೀ
ನಾಥ ಬಲ್ಲ ನಮಗೆ ಅವರ ಮಾತಿನ್ನೇತಕೋ ೩

## ೧೩೨

ಯೋಗಿಯಾಗ ಬೇಕು ಅಲ್ಲವೆ ಭೋಗಿಯಾಗ ಬೇಕು
ಯೋಗಿ ಭೋಗಿಯಾಗದ ಮನುಜನಾಗಿ
ನೀ ಪೋಗಬೇಕು ಪ

ತನ್ನ ತಾನು ತಿಳಿದು ಆತ್ಮಜ್ಞಾನಿಯಾಗಬೇಕು
ಅನ್ನ ವಸ್ತ್ರಗಳನು ಚಾತುರ್ವರ್ಣಕೀಯಬೇಕು
ತನ್ನದೆಂಬ ಮಮತೆಯನ್ನು ಬಿಟ್ಟು ಚರಿಸಬೇಕು
ಭಿನ್ನ ಭಾವವಳಿದು ಏಕೋ ದೇವನಾಗಬೇಕು ೧

ದಾನ ದರ್ಮಗಳನು ಸತ್ಪಾತ್ರ ಗೀಯಬೇಕು
ನಾನಾ ಜೀವ ಜಂತುಗಳಲಿ ಪ್ರೇಮವಿರಲು ಬೇಕು
ತಾನು ತಾನೆಯಾಗಿ ಹರಿಯ ಧ್ಯಾನಿಸುತಿರಲು ಬೇಕು
ಭಾನು ಸುತನ ಕೈಗೆ ಸಿಕ್ಕಿದಂತೆ ಇರಲು ಬೇಕು ೨

ಅರುಣನುದಯದಲ್ಲಿ ನಿತ್ಯ ಕರ್ಮವ ಮಾಡಬೇಕು
ಕರುಣದಿಂದ ದೀನ ಜನರ ನಿರುತ ಪೊರೆಯ ಬೇಕು
ಗುರುಗಳಲ್ಲಿ ಹಿರಿದು ವಿಶ್ವಾಸವಿರಲು ಬೇಕು
ಮರುತ ಸುತನ ಕೋಣೆ ಲಕ್ಷ್ಮೀರಮಣನ ಕೂಡಬೇಕು ೩

## ೧೩೩

ವ್ಯರ್ಥವಾದೆನಲ್ಲ ನರಜನ್ಮದಿ ಜನಿಸಿ ನಾವ್ಯರ್ಥವಾದೆನಲ್ಲ
ಮೃತ್ಯು ಮುನಿದು ಎಳೆದೊಯ್ಯದ ಮುನ್ನ
ಪುರುಷೋತ್ತಮಾಚ್ಯುತ ನಂಘ್ರಿಯ ನೆನೆಯದೆ ಪ

ಕೂಳಿನ ಬಲದಿಂದ ಬೆಳೆದಿಹ ಕಾಯದ ಮದದಿಂದ
ಖೂಳರೊಡನೆ ಒಡನಾಡುತ ಯೌವನಕಾಲದ
ಸಡಗರದಲಿ ದಿನಗಳೆದು ೧

ಸತಿ ಸುತ ರೊಡನಾಡಿ ಮುಂದಣ ಗತಿಯನು ನೀಗಾಡಿ
ಅತಿ ಮದಗೊಬ್ಬಲಿ ಸತತ ನಡೆದು
ಪರಗತಿಯನು ಕೊಡುವ ಮುರಾರಿಯ ಭಜಿಸದೆ ೨

ಪುಣ್ಯ ಕ್ಷೇತ್ರಗಳ ನಾಮೆಟ್ಟಿದೆ ಮೀಯದೆ ತೀರ್ಥಗಳ
ಕಣ್ಣಿನಿಂದ ಹರಿ ಮೂರ್ತಿಯ ನೋಡಿ ನಾಪುಣ್ಯ
ಪುರುಷರಸಂಗವ ಮಾಡದೆ ೩

ಹರಿಶರಣರ ನಾ ನೋಡಿ ಎರಗದೆ ತುಚ್ಛತನವನೇ ಮಾಡಿ
ದುರಳತನದಿ ಹರಿಕಥೆಗಳ ಕೇಳದೆ ಹರಿಯ
ಪೊಂದದೆ ಶ್ರೀಹರಿಯನರ್ಚಿಸದೆ ೪

ಒಂದಿನ ಸುಖವಿಲ್ಲ ಕಾಲವು ಸಂದು ಹೋಯಿತಲ್ಲ
ಮುಂದೆ ನೀ ಕರುಣಿಸೋ ಮರುತ ಸುತನ
ಕೋಣೆ ಇಂದಿರರಮಣ ಮುಕುಂದಮುರಾರೇ ೫

## ೧೩೪

ವ್ಯರ್ಥವಾಯಿತೆನ್ನಿ ಜನ್ಮ ಸ್ವಾರ್ಥವಿಲ್ಲದೆ ಪರ
ಮಾರ್ಥವಾಗಿ ಕೃತ್ತಿ ವಾಸನ ಪೂಜೆಯನ್ನು ಮಾಡದೆ ಪ

ಹಿಂದೆ ಜನನಿ ಗರ್ಭವಾಸದಿಂದ ಹೊರಟು ಬಂದ ಮೇಲೆ
ಕೊಂದು ದಿವಸನಾನು ನಿಷ್ಠೆಯಿಂದ ಲಿರ್ದು ಆಗಮೋಕ್ತ
ದಿಂದ ಶಿವಗೆ ಜಲದಿ ರುದ್ರದಿಂದ ಜಳಕ ಗೈದು ಶ್ರೀ
ಗಂಧ ಪುಷ್ಪ ಪತ್ರೆಯಿಂದ ಪೂಜೆಯನ್ನು ಮಾಡದೆ ೧

ಪುಣ್ಯನದಿಯು ಪುಣ್ಯಕ್ಷೇತ್ರ ಪುಣ್ಯ ಭೂಮಿಯಲ್ಲಿ ವಾಸ
ಪುಣ್ಯಕಥೆಯು ಪುಣ್ಯತೀರ್ಥ ಸ್ನಾನವಿಲ್ಲದೆ
ಪುಣ್ಯ ಮೂರ್ತಿಯಲ್ಲಿ ಧ್ಯಾನ ಪುಣ್ಯಪುರುಷರೊಡನೆ ಸಂಗ
ಪುಣ್ಯ ಕಾಲದಲ್ಲಿ ಶಿವನ ಪೂಜೆಯನ್ನು ಮಾಡದೆ ೨

ಮಂಡೆ ಜುಟ್ಟ ಸೂತ್ರವನ್ನು ಖಂಡಿಸಿರ್ದುಯತಿಎನುತ್ತ
ದಂಡವನ್ನು ಧರಿಸಿ ಪೀತ ಕೌಶೇಯ ವಸನವನ್ನು ಪೊದ್ದು
ಮೊಂಡತನದಿ ಸಕಲ ವಿಷಯ ಭೋಗವನು ಭೋಗಿಸುತ್ತ
ಮಂಡೆ ಬೋಳನಾದರೇನು ಮನವ ಬೋಳಮಾಡದೆ ೩

ಸಾರ ಮೇಯನಂತೆ ಬರಿದೆ ಚರಿಸದಿನ್ನು ನಿನ್ನನೀನು
ವಿಚಾರಿಸಿನ್ನು ಮರಳಿ ಜನ್ಮಬಾರದಂತೆ ಭಜಿಸು
ಕಾಮಾರಿಯನ್ನು ಆಗಮೋಕ್ತದಿಂದ ಪೂಜೆಯನ್ನು ಮಾಡಿ
ಘೋರಪಾತಕಂಗಳನು ಸುಟ್ಟುಸೂರೆಮಾಡದೆ ೪

ಬೆಟ್ಟದೊಳಗನಂತ ವೃಕ್ಷ ಹುಟ್ಟಿಮಡಿದ ವೊಲು ಜನ್ಮ
ನಷ್ಟ ವಾಯ್ತು ವಿಧಿಯು ಬರೆದಿಟ್ಟ ದುರ್ಲಿಖಿತವೆಲ್ಲ
ತುಟ್ಟಿಸಿತ್ತು ತಿಳಿದು ಶಿವನ ಮುಟ್ಟಿ ಪೂಜಿಸಾದರಿನ್ನು
ಕೆಟ್ಟು ಹೋಗ ಬೇಡ ಲಕ್ಷ್ಮೀಪತಿಯ ಸ್ಮರಣೆಮಾಡದೆ ೫

## ೧೩೫

ಸಾಕು ಸಾಕು ಸವಿದಟ್ಟಿತು ನನಗೀಗ
ಸಾಕಾಯ್ತೀ ಸಂಸಾರದ ಸುಖವು ಪ

ಸಂಜೀವನದ ಅಮೃತವ ನಾಕಂಡಮೇಲೆ
ಗಂಜಿಗಾಸೆ ಮಾಡುವೆನೆ
ರಂಜಿತ ಚಿದಾನಂದವನು ಕಂಡಮೇಲೆ
ಗುಂಜಿನ ಮೈಸುಖವೆ ಪೇಳೋ ೧

ಹಾಲ ಸಮುದ್ರವ ಕಂಡಮೇಲೆ ಪಶು
ಜಾಲವ ಬಯಸುವೆನೆ ಪೇಳೋ
ಲಾಲಿಸಿ ಚಿದಾನಂದವ ಕಂಡಮೇಲೆ
ಜಾಳು ವಿಷಯದ ಚಿಂತೆಯೇ ಪೇಳೋ ೨

ಪರುಷದ ಪರ್ವತವ ನಾಕಂಡಮೇಲೆ
ಸಿರಿ ಬೇಕೆಂಬಂಥ ಚಿಂತೆಯೇ ಪೇಳೋ
ಪರಮಾತ್ಮ ಸಿದ್ಧಸಿದ್ಧವ ಕಂಡೆ
ಗುರು ಚಿದಂಬರನ ನಿನ್ನೇತರ ಚಿಂತೆ ಪೇಳೋ ೩

## ೧೩೬

ಸಾರಿ ಸಾರಿ ಹೇಳು ತೀನಿ ಕಡ್ಡಿ ಮುರಿದು ನಾನು
ಬಾರಿ ಬಾರಿಗೆ ಸತ್ತು ಹುಟ್ಟತಲಿಹೆ ನೀನು ಪ

ದಿನವು ಸಂಜೆ ಮಾಡಿ ಕೊಂಡು ಹಗಲು
ಇರುಳು ವಿಷಯದೊಳಗೆ
ಮನವ ನಿರಿಸಿ ಮಡದಿ ಮಕ್ಕಳೆಂಬಲೆಯಲಿ

ತನುವು ಸಿಲುಕಿಯಿರಲು ಮೃತ್ಯು ಬರುವ
ಪರಿಯನರಿಯದಿದು
ಇನ ಸುತನ ದೂತರೊಡನೆ ಕೊಲಿಸಿ ಕೊಳದಿರು ೧

ನೀನು ಹುಟ್ಟಿ ಬರುವ ಮುನ್ನ ಇವರಿಗೆಲ್ಲ ವಾಸವೆಲ್ಲಿ
ನೀನದೆಲ್ಲಿ ನಟ್ಟನಡುವೆ ಬಂದ ಸಿರಿಯಿದು
ಕಾನ ಕಪಿಗಳಂತೆ ನೆರೆದು ಮಡದಿ ಮಕ್ಕಳೆಂದು ಈಗ
ಪ್ರಾಣವನ್ನು ತಿನಲು ಬಂದ ನರಿಗಳಿವದಿರು ೨

ದಾರಿ ಹೋಕರಿವರು ನಿನ್ನ ಋಣವು ತೀರಿ ಹೋದ ಬಳಿಕ
ಯಾರಿಗಾರು ಇಲ್ಲ ನಿನಗೆ ನೀನದಲ್ಲದೆ
ಬರೆಗತಿಯ ಕಾಣೆ ಬಕನ ವೈರಿ ಕೋಣೆಲಕ್ಷ್ಮೀಪತಿಯ
ಸೇರಿ ನಾಮ ಸ್ಮರಣೆಯಿಂದ ಮುಕ್ತಿ ಪಡೆದಿರು ೩

## ೧೩೭

ಸಿಕ್ಕದಿರು ನಾರಿಯರ ಕಡೆಗಣ್ಣಿಗೆ ಮನ
ವಿಕ್ಕಿದರೆ ಇಹಪರದ ಗತಿ ಕೆಡಗು ನಿನಗೆ ಪ

ಹೇಸದೇತಕೆ ಮನಸು ಪರದಾರ ಪರದ್ರವ್ಯ
ದಾಸೆಯೊಳು ಹಗಲಿರುಳು ಕುದಿದು ಕುದಿದು
ಘಾಸಿಯಾಗುತ ತೊಳಲಿ ಬಳಲಿ ಯಮನರಕದೊಳು
ವಾಸವನು ಮಾಡದಿರು ಎಲೆ ಮೂಢ ಮನುಜ ೧

ಮೊಲೆಯೆ ಮಾಂಸದ ಚೆಂಡು ಮೊಗವು ಶ್ಲೇಷ್ಮೆಯಗೂಡು
ಬಳಸಿ ನೋಡಿದರಿದಕೆ ಹುರುಳಿಲ್ಲವೋ
ಒಳ ಹೊರಗು ಹೊಲಸು ಹೆಬ್ಬಡಿಕೆಗಳು ವಸನದಲಿ ಬೆಳಗುವಳು
ತಲೆ ತುರಿಸಿ ಸಿಲುಕದಿರು ಕಂಡ್ಯಮನುಜ ೨

ಸಿರಿ ಕೆಡಗು ವಿಧಿ ಲಿಖಿತ ಸರಿಗು ಇಹಪರ ಕೆಡಗು
ಪರವಧುವಿನೊಳು ಮನವ ಹರಿಸಬೇಡ
ತೊರೆದಿವರ ಮರುತಸುತ ಕೋಣೆ ಲಕ್ಷ್ಮೀಪತಿಯ
ಸ್ಮರಿಸಿದರೆ ಈವ ಸಾಯುಜ್ಯ ಪದವಿಯನು ೩

## ೧೩೮

ಸುಮ್ಮನೆ ದಿನವನು ಕಳೆಯದೆ ನೀ
ಪರಬೊಮ್ಮನ ಧ್ಯಾನಿಸು ಕಂಡ್ಯಾ
ಹಮ್ಮ ನುಳಿದು ನಿರಹಂ ಮಮತೆಯಲಿ
ಸೋಹಂ ಎನುತಿರಕಂಡ್ಯಾ ಪ

ಬಂದ ಜನ್ಮಕೆ ಸಾಕಾಯಿತು ಸುಡು ಸುಡು
ಒಂದು ನಿಮಿಷ ಸುಖವಿಲ್ಲ
ಸಂದಿತು ವಿಧಿ ಬರೆದಾಯುಷ ತನು ಬಲ
ಗುಂದಿತು ದಿನ ದಿನ ಕೆಲ್ಲ
ಬಂದುದೆ ಹೊತ್ತು ಯಮನಾಳುಗಳು
ಏಳೇಳೆಂದು ಎಳೆವರಲ್ಲ
ಮುಂದೇನು ಗತಿಯೋ ನಾನರಿಯೆನು ಇದನು
ಗೋವಿಂದನೆ ತಾ ಬಲ್ಲ ೧

ಹೀನ ವಿದುತ್ತಮವಿದೆನ್ನದೆ ನಾನಾ
ಯೋನಿಯೊಳಗೆ ಜನಿಸಿ
ನಾನದನೆಲ್ಲವ ನುಳಿದು ಈಗಳು ನರಮಾನವನೆಂದೆನಿಸಿ
ಏನೋ ಪುಣ್ಯದಿ ಪುಟ್ಟಿದೆ ನಿಲ್ಲಿ ನಿಧಾನದಿ ಸಂಚರಿಸಿ
ಧ್ಯಾನಿಸು ನೀ ಪರಮಾತ್ಮ ಸ್ವರೂಪನ
ಆನಂದ ಮಯನೆನಿಸಿ ೨

ಎಲ್ಲಾ ಜನ್ಮದೊಳ್ಳಿತು ನೀನಿದರಲ್ಲಿ ಸಾಧಿಸುಗತಿಯಾ
ಹೊಲ್ಲದ ತನುವಿದ ನಂಬಿ ನೀ ಕೆಡದಿರು ಪೊಳ್ಳೆ ನಿನಗೆ ತಿಳಿಯ
ಬಲ್ಲಡೆ ಜಿಹ್ವೆಯೊಳಗೆ ನೀ ನಿರಂತರ ಸೊಲ್ಲಿಸು ಶ್ರೀಹರಿಯ
ಮಲ್ಲನೆ ಭಜಿಸಿ ವಾಯು ಜನನ ಕೋಣೆಯ
ಲಕ್ಷ್ಮೀನಲ್ಲನ ಪೋಗು ಮರೆಯ ೩

## ೧೩೯

ಹರಿದಾಡುವಂಥ ಮನವ ನಿಲಿಸುವುದು ಬಲುಕಷ್ಟ ಪ

ಉರಿಯನಪ್ಪಲು ಬಹುದು
ಗರಳವನು ಕುಡಿ ಬಹುದು
ಕರಿಯ ದಾಡೆಗೆ ಸಿಕ್ಕು ಮರಳಿ ಜೀವಿಸ ಬಹುದು ೧

ಗಗನ ಕೇಣಿಯ ಸಾರ್ಚಿ ಮುಗಿಲ ಮುಟ್ಟಲು ಬಹುದು
ಅಗಜೆಯರಸನ ಉರಿಯ ನಯನ ಕಾನಲು ಬಹುದು
ಹೊಗರು ಧೂಮವ ಹಿಡಿದು ಹಸುಬೆ ತುಂಬಲು ಬಹುದು ೨

ಮಳಲ ಗಾಣಕೆಯಿಕ್ಕಿ ತೈಲಗಾಣಲು ಬಹುದು
ಹುಲಿಯ ಹಿಡಿದು ಕಟ್ಟಿ ಹಾಲ ಕರೆಯಲು ಬಹುದು
ಬಿಳಿಗಲ್ಲ ಬೆಣ್ಣೆವೋಲ್ ಜಗಿದು ನುಂಗಲು ಬಹುದು ೩

ಅಸಿಯ ಧಾರೆಯ ಮೇಲೆ ನಾಟ್ಯ ವಾಡಲು ಬಹುದು
ಬಸಿದ ಶೂಲಕೆ ಮೈಯ ಚಾಚಿ ಜೀವಿಸ ಬಹುದು
ವಿಷದ ಉರುಗನ ಕೂಡೆ ಸರಸವಾಡಲು ಬಹುದು ೪

ಮರುತ ಸುತನ ಕೋಣೆ ವಾಸ ಲಕ್ಷ್ಮೀಶನ
ಸ್ಮರಣೆ ಮಾತ್ರದಿ ಸಕಲ ದುರಿತ ನಾಶನವಹುದು
ಮರಳಿ ಜನ್ಮಕೆ ಬಾರದಂಥ ಪದವಿಯಹುದು ೫

# ೧೪೦

ಹಿಂದಿನ ದಿನದಂತಿದಲ್ಲಣ್ಣ ಈಗ ಬಂದಿಹ ದಿನವತಿ ಹೊಸದಣ್ಣ ಪ

ಹೆಂಡಿರು ಮಕ್ಕಳ ಕರೆದರೆ ಒಳಗೆ
ತಂಡುಲವಿಲ್ಲ ಗಂಜಿಗೆಶರೆ
ಉಂಡೆವೆನುತ ಬಾಯ ಬಿಡುತಾರೆ ಇದ
ಕಂಡು ನಾಕ್ಷಣವು ಜೀವಿಸಲಾರೆ ೧

ಕಡಕಟ್ಟು ಹುಟ್ಟಿತೆಂಬುದು ಹುಸಿಯಿನ್ನು
ಕೊಡುವರು ಕೊಡುವುದಿಲ್ಲವೋ ರೋಸಿ
ಉಡಲು ತೊಡಲಿಕ್ಕಿಲ್ಲ ಕೈ ಬೀಸಿ ಎದೆ
ನಡುಗಿ ಸಾವೆನು ನಾನು ಪರದೇಶಿ ೨

ಅತಿಥಿಗಿಕ್ಕಲಿಕೆ ತನಗೇ ಇಲ್ಲ
ಪ್ರತಿಮೆ ಲಿಂಗ ಪೂಜೆಗಳು ಜನ್ಮದೊಳಿಲ್ಲ
ವ್ರತನೇಮ ದಾನ ಧರ್ಮಗಳಿಲ್ಲ ಪರ
ಗತಿಗೇನು ಮುಂದೆ ಸಾಧನವಿಲ್ಲ ೩

ಸಂಸಾರದೊಳಗೇನು ಸುಖವಿಲ್ಲ ಪರಮ
ಹಂಸನಾಗಲು ಮುಂದೆ ಪಥವಿಲ್ಲ
ಕಂಸಾರಿ ಸ್ಮರಣೆ ಎಂದಿಗೂ ಇಲ್ಲ ತಮ
ಧ್ವಂಸಿ ಯಣುಗನ ಕೈವಶರೆಲ್ಲ ೪

ಕಾಲಗತಿಯು ಬಲು ಬಿರುಸಣ್ಣ ಜನ
ಬಾಳುವ ಪರಿಯಿನ್ನು ಹೆಂಗಣ್ಣ
ಕೂಳಿಗೆ ಬಗೆಯಿಲ್ಲದಾಯ್ತಣ್ಣ ಲಕ್ಷ್ಮೀ
ಲೋಲನ ಮೇಲೆ ಭಕ್ತಿಯಿಲ್ಲಣ್ಣ ೫

## ೧೪೧

ಹೊನ್ನು ಹೆಣ್ಣು ಮಣ್ಣು ಮೂರನು ಬಿಟ್ಟು ಚರಿಸುವವ ಯೋಗಿ
ಬಣ್ಣ ಸಣ್ಣ ಸರ್ವಾಭರಣವಿಟ್ಟು ಮೆರೆವನು ಬೋಗಿ ಪ

ನಾರಿಯರದನು ಕಂಡು ಥೂ ಎಂದುಗುಳಿ ತೊಲಗುವಯೋಗಿ
ವಾರಿ ಜಾಕ್ಷಿಯರನು ನೋಡಿ ಮರುಳುಗೊಂಬನು ಭೋಗಿ
ಘೋರ ತಪವ ಚರಿಸಿ ಅಡವಿಸೇರಿ ಕೊಂಬನು ಯೋಗಿ
ಭೂರಿ ವಿಷಯದೊಳಗೆ ಸಿಕ್ಕಿ ತೊಳಲುತಿಹನು ಭೋಗಿ ೧

ಮಾಯೆಯಳಿದು ವಸ್ತುವರಿತು ಚರಿಸುತಿಹನು ಯೋಗಿ
ಜಾಯೆ ಸುತರ ಸಿರಿಯ ನೆಚ್ಚಿ ಹಿಗ್ಗುತಿಹನು ಭೋಗಿ
ಬಾಯ ಬಿಡದೆ ಮೌನಿಯಾಗಿ ಜಪಿಸುತಿಹನು ಯೋಗಿ
ಕಾಯದೊಳಗೆ ಬೆಳೆದು ಪರರನರಿಯದಿಹನು ಭೋಗಿ ೨

ಕುಲದಲಾವನೆಂದು ಜನಕೆ ತಿಳಿಯ ಬಾರದವನು ಯೋಗಿ
ಹೊಳಲಿನೊಳಗೆ ಸುಳಿದು ಸುಳಿದು ನಲಿಯುತಿಹನು ಭೋಗಿ
ಚಲನ ಭವನ ಕೋಣೆ ಲಕ್ಷ್ಮೀರಮಣನು ತಾನೆಯಾಗಿ
ಒಳಗು ಹೊರಗು ಬೆಳಗುತಿಹನು ಯೋಗಾನಂದನಾಗಿ ೩

## ೧೪೨

ಹೋದ್ರೆ ಹೀಗೆ ಹೋಗಬೇಕು ಗೂಡಿನಿಂದ ಜೀವನ
ಸಾಧನೆಯನ್ನು ಮಾಡಿದಾತ ಲಾಗವನ್ನು ಹಾಕಿದಂತೆ ಪ

ಬೇನೆ ಮೈಯೊಳೇನು ಇಲ್ಲದೆ ಜ್ಞಾನವಿದ್ದು ಎಚ್ಚರಿದ್ದು
ಕಾನ ಕಪಿಯ ಮೇಲ್ ಮನಸು ಹೀನವೃತ್ತಿಗೆ ಹೊಗದಂತೆ ೧

ಹುಚ್ಚುಗೊಳದೆ ಭಂಗಿಯನ್ನು ಹಚ್ಚದಾತ ಕುಣಿಯುವಂತೆ
ಸ್ವಚ್ಛವಾಗಿ ಕಾಯದೊಳಗೆ ತುಚ್ಛಮನವು ಇಲ್ಲದಂತೆ ೨

ಅತ್ತಲಿತ್ತ ಹೊಡೆಕಣಿಲ್ಲದೆ ಸುತ್ತ ಮುತ್ತ ಕಾದುಕೊಂಡ
ಪುತ್ರಮಿತ್ರ ಕಳತ್ರದಲ್ಲಿ ಮತ್ತೆ ಮಮತೆಯಿಲ್ಲದಂತೆ ೩

ನಾರಾಯಣ ಹರಿ ನರಕಾಂತಕ ರಾಮಕೃಷ್ಣ
ವಾರಿಜ ನಾಭ ಹರಿಯೆ
ಎನ್ನ ಸಲಹೋ ಬಿಡದೆ ಎನ್ನುತ ೪

ವಾಂತಿ ಬ್ರಾಂತಿಯೆರಡು ಇಲ್ಲದೆ ಉತ್ಕ್ರಾಂತಿ ಕಾಲದಲ್ಲಿ ಲಕ್ಷ್ಮೀ
ಕಾಂತ ನಾಮ ಸ್ಮರಣೆ ಜಿಹ್ವೆ ನಿರಂತರದಲ್ಲಿ ನುಡಿಯುತಿರ್ದ ೫

## ಗುರುದತ್ತ ದಿಗಂಬರ ಸ್ತುತಿ

### ೧೪೩

ಈಸಲಾರೆ ಗುರುವೆ ಸಂಸಾರಶರಧಿಯ
ಮೋಸದಿಂದ ಬಿದ್ದು ನಾನು ಘಾಸಿಯಾಗಿ ನೊಂದೆ ಗುರುವೆ ಪ

ಗುರುವೆ ಬೇರೆ ಗತಿಯ ಕಾಣೆ ನೀನೆಗತಿ ದಿಗಂಬರೇಶ
ಮರಯ ಹೊಕ್ಕೆನಿಂದು ನಿಮ್ಮ ಚರಣ ಕಮಲವ
ತರುಣ ದಿಂದಲೆನ್ನ ಭವದ ಶರಧಿಯನ್ನು ದಾಟುವಂಥ
ಪರಿಯನೊರೆದು ನಾವೆಯಿಂದ ದಡವ ಸೇರಿಸೋ ೧

ಮಡದಿ ಮಕ್ಕಳೆಂಬುದೊಂದು ನೆಗಳುಖಂಡವನ್ನು ಕಚ್ಚಿ
ಮಡುವಿಗೆಳೆದು ತಿನ್ನು ತಾವೆ ತಡೆಯಲಾರೆನು
ನಡುವೆ ಸೊಸೆಯು ಎಂಬನಾಯಿ ಜಡಿದು ಘೋರ ಸರ್ಪದಂತೆ
ಕಡಿಯೆ ವಿಷಮ ನೆತ್ತಿಗಡರಿ ಮಡಿವಕಾಲ ಬಂದಿತು ೨

ಹಲವು ಜನ್ಮದಲ್ಲಿ ಬಂದು ಹಲವು ಕರ್ಮವನು ಮಾಡಿ
ಹಲವು ಯೋನಿಯಲ್ಲಿ ಹುಟ್ಟಿ ಹಲವು ನರಕವ
ಹಲವು ಪರಿಯ ಲುಂಡು ದಣಿಯ ನೆಲೆಯ ಗಾಣದೆನ್ನಜೀವ
ತೊಳಲಿತಿನ್ನುಗತಿಯ ಕಾಣೆ ಗುರು ಚಿದಂಬರ ೩

ಕಾಲವೆಲ್ಲಸಂದು ತುದಿಯಕಾಲ ಬಂತು ಕಂಡ ಪರಿಯೆ
ಹೇಳಿಕೊಂಡೆ ಗುರುವೆ ಎನ್ನಮೇಲೆ ದಯವನು
ತಾಳಿ ಕಿವಿಗೆ ಊರ್ಧ್ವಗತಿಗೆ ಪೋಪಮಂತ್ರವನ್ನು
ತಿಳಿಸಿ ನಿರಾಳ ವಸ್ತುವನ್ನು ತೋರೋವರ ದಿಗಂಬರಾ ೪

ಆಸೆಯೆಂಬ ನಾರಿಯನ್ನು ನಾಶಗೈದು ಗುರುವಿನಡಿಗೆ
ಹಾಸಿತನುವ ದಡದಂತೆ ಬೇಡಿಕೊಂಡೆನು ಈಸ
ಮಸ್ತಲೋಕವನ್ನು ಪೋಷಿಸುವ ಲಕ್ಷ್ಮೀಪತಿಯ
ದಾಸಗಭಯವಿತ್ತು ಕಾಯೋವರ ದಿಗಂಬರ ೫

## ೧೪೪

ಕಂಡೆನೋ ಕಂಡೆ ಗುರುಚಿದಂಬರನಾ ತನು
ಗೊಂಡು ಭೂಮಂಡಲದೊಳು ಚರಿಸುವನಾ ಪ

ಪರಮಾತ್ಮ ಪರತತ್ವವನು ತಿಳಿದವನ
ಧರೆಯ ಜನರನು ಪಾವನವ ಮಾಡುವನಾ
ಕರುಣ ಸಮುದ್ರ ದೀನರ ದಯಾಪರನಾ
ನೆರೆನಂಬಿದವರಿಗೆ ವರವ ಕೊಡುವನಾ ೧

ಮಳೆ ಛಳಿ ಬಿಸಿಲು ಹಸಿವಿಗಂಜದವನ
ಕಲ್ಲು ಮುಳ್ಳು ಬೆಟ್ಟವೆನ್ನದೆ ಚರಿಸುವನ
ನೆಲೆಗಾಣದಂತಹ ಅಪಾರ ಮಹಿಮನು
ಕಲಿಮನದೊಡ್ಡದಾನಂದ ನಿರ್ಗುಣನ ೨

ಸ್ಮರಹರನಂತೆ ಭಸಿತ ದಿಗಂಬರನಾ
ಕೆರೆಬಾವಿ ದೇವಾಲಯವನು ಕಟ್ಟಿಸುವನ
ಪುರಹರನಂತೆ ಢಿಕ್ಕನೆ ಧರಿಸಿಹನ
ನರ ಗುರಿಗಳು ಬಲ್ಲರೇನೋ ಇಂಥವನಾ ೩

ಯಮನಿಯಮ ಅಷ್ಟಾಂಗ ನಿರತನ
ಕಮಲಾರಿ ಪಿತನಂತೆ ಗಂಭೀರದವನ
ಹಿಮವಂತನಂತೆ ಧೈರ್ಯದೊಳಿರುತಿಹನ
ಕಮಲ ಬಾಂಧವನಂತೆ ತೇಜದಿಂದಿರುತಿಹನ ೪

ಅರಿಗಳನರುವರ ನುಗ್ಗೊತ್ತಿದವನ
ಕರಣೇಂದ್ರಿಯಂಗಳ ನಿಗ್ರಹಿಸಿದವನ
ಪರಮ ದಾಸಗೆ ಆಲಿಂಗನವನಿತ್ತನಾ
ಸ್ಥಿರ ಚಿದಾನಂದ ಪುರದ ದಿಗಂಬರನ ೫

## ೧೪೫

ನೀನೆ ರಕ್ಷಿಸೋ ಎನ್ನನು ಕೃಪೆಮಾಡಿ
ಜ್ಞಾನ ಮೂರುತಿ ಗುರುವರನೆ ದಿಗಂಬರ ಪ

ಕಾಲ ಮೃತ್ಯುವಗೆಲುವೊಡೆ ಮಹಾಪುರುಷರ
ಕಾಲ ಹಿಡುದು ಬೇಡಿ ಕೊಂಡುಪದೇಶವ
ತಾಳಿದ್ದಲ್ಲವೆ ಮುಕ್ತಿಗಾಣೆನೆಂಬುದ ಮುನ್ನ
ಕೇಳಿಹೆ ನಾನು ದಿಗಂಬರ ಮೂರ್ತಿಯೆ ೧

ಆಸೆ ಪಾಶಗಳೆಂಬ ಹಗ್ಗವ ಹರಿದು
ವಿಲಾಸದಿ ಜಗವೆ ಚಿದಂಬರನೆಂದು
ಉಲ್ಲಾಸದಿ ತಿಳಿವ ಪರಿಯ ಕರುಣಿಸೋ
ಉಪದೇಶವಿತ್ತು ದಿಗಂಬರ ಮೂರ್ತಿ ೨

ನರರಿಂಗೆ ನರನಾಗಿ ಕಾಣಿಸಿ ಕೊಳುತ
ಈ ಧರೆಯ ಜನರನು ಪವಿತ್ರಿ
ಕರಿಪ ಪುಣ್ಯಪುರುಷರೆಂಬುದನು ಬಲ್ಲವರೆ ಬಲ್ಲರು ಮೂಢ
ನರಿಯೆನು ನಾನು ದಿಗಂಬರ ಮೂರ್ತಿ ३

ಕಣ್ಣಾರೆ ಕಂಡೆ ನಿಂದಿನ ದಿನವೆನ್ನ ಪುಣ್ಯೋದಯದಲಿ
ನಿಮ್ಮ ದರುಶನವೆನಗೆ ಸಂಪೂರ್ಣವಾಯಿತು ಕೃತಕೃತ್ಯನಾದೆನು
ಎನ್ನ ಮನ್ನಿಸಿ ಸಲಹೋ ದಿಗಂಬರ ಮೂರ್ತಿ ೪

ನಂಬಿದೆ ನಿಮ್ಮ ಪಾದಾಂಬುಜವನು ಕರುಣಾಂಬುಧಿ ಕಾಯೊ
ಕಮಲ ಮಿತ್ರತೇಜ ಸುಖಾಂಬುಧಿ ರೂಪ ನಿರಂಜನಗುರುವೆ
ಚಿದಂಬರ ಸೂನು ದಿಗಂಬರ ಮೂರ್ತಿ ೫

## ೧೪೬

ನೋಡಿ ರಕ್ಷಿಸೋ ಎನ್ನನು ಮುರುಗೋಡಿನ
ವಾಸ ಚಿದಂಬರ ಮೂರ್ತಿ ಪ

ಲೋಕದ ಜನರಘವನು ತೊಳೆಯಲಿಕೆ ತ್ರೈ
ಲೋಕ ದೊಡೆಯ ಚದಂಬರನಾಗಿ ಭೂಕಾಂತೆಯೊಳಗೆ
ಸಂಚರಿಸುತಲಿರ್ಪ ಕರುಣಾಕರ ಮೂರ್ತಿ ದಯಾಪರ ಮೂರುತಿ ೧

ಕಂಡೆನು ಬಹಳ ಜನ್ಮಾಂತರದಲಿ
ಮಾಡಿಕೊಂಡ ಪಾಪದ ರಾಶಿಯು
ದಿನ ದಿನ ಉರಿಗೊಂಡು ಸುಟ್ಟುದು ಮರೆಹೊಕ್ಕೆನೀಗಳು
ಪಾದ ಪುಂಡರೀಕವನು ಚಿದಂಬರಮೂರ್ತಿ ೨

ಹೊನ್ನು ಹಣವ ಚಿನ್ನ ಚಿಗುರು ಬೇಡುವನಲ್ಲ
ನಿನ್ನ ಶ್ರೀ ಪಾದ ಪದ್ಮದ ಸ್ಮರಣೆಯನು ಸಂಪೂರ್ಣವಾಗಿರುವ
ವೋಲ್ ಕರುಣಿಸು ನಿತ್ಯ
ಸುಖಾರ್ಣವಾನಂದ ಚಿದಂಬರಮೂರ್ತಿ ३

ಬೇಡುವೆನೊಂದು ವರವ ಕೊಡುವರೆ ಈ ಗೂಡಿರುವತನಕ
ಚಿದಂಬರ ನಿನ್ನ ಕೊಂಡಾಡುವ ವ್ರೋಲ್
ಕೃಪೆಮಾಡಿ ಸಲಹೋ ಎನ್ನ
ನೋಡಿ ಬಡವನ ಚಿದಂಬರಮೂರ್ತಿ ೪

ಪ್ರಾಕುನುಡಿದ ಪುಣ್ಯದಿಂದ ನಿಮ್ಮಯಪಾದ ಸೇರೆ ನಾ
ಕೃತ ಕೃತ್ಯನಾದೆ ನಿಂದಿನ ಜನ್ಮ ಸಾರ್ಥಕ ವಾಯ್ತು
ಪರಾಕೆ ಚಿದಂಬರ ನೀ ಕರುಣಿಸೋ ಎನಗಭಯವಿತ್ತು ೫

## ೧೪೭

ವಂದನೆ ಗೈವೆನು ಗುರುವೆ ಚರಣಾರವಿಂದದ್ವಯಕೆ ಮಣಿವೆ
ಕಂದನತಾತ ಮನ್ನಿಸುವಂತೆ ಎನ್ನನು
ನೀನೇ ಕಾಯೋ ಎನ್ನ ಸದ್ಗುರುವೆ ಪ

ಬಂದು ಸೇರಿದೆ ನಾನು ಕರುಣ
ಸಿಂಧುವೆ ಪಾಲಿಸುನೀನು
ಮಂದಮತಿಯು ಜಡಜೀವನು ನಾನು ವಸುಂ
ಧರೆಯೊಳಗೆ ಸುಜ್ಞಾನಿಯು ನೀನು ೧

ಕಾರಗತ್ತಲೆಯೊಳಗೆ ಏನೆಂದು ತೋರದೆ ತೊಳಲಿದ ಹಾಗೆ
ದಾರಿ ಕಾಣದೆ ಕಂಗಾಣದವಗೆ ಕೃಪೆ
ದೋರಿ ಸುಜ್ಞಾನ ದೀಪವ ತೋರೋ ಗುರುವೆ ೨

ಸೊಕ್ಕಿನ ಮದದಿಂದ ಕಾಲವ
ಪುಕ್ಕಟೆಕಳೆದೆ ಯೋಗೀಂದ್ರ
ದುಃಖವೆನಿಪ ಸಂಸಾರ ಶರಧಿಯೊಳು
ಸಿಕ್ಕಿದೆ ಕಾಯೋ ಸದ್ಗುರು ದಿಗಂಬರನೇ ೩

## ಕರ್ಕಿ ಚೆನ್ನಕೇಶವ ಸ್ತುತಿ

### ೧೪೮

ಅನ್ಯರನು ಬೇಡೆನು ಚನ್ನಕೇಶವನೇ
ಪನ್ನಗಾಶನ ಸೇವ್ಯ ಸರ್ವಾತ್ಮನೇ ಪ

ತರಳ ಧೃವನನು ಕಾಯ್ದು ಧರಣಿಯನ್ನವಗಿತ್ತ
ಸುರಸೇವ್ಯನಾಕೇಶವಂದ್ಯ ಹರಿ ಜೊರತು ೧

ದುರುಳ ಕುರುಪತಿಯನುರೆಜೆ ಭಾಮೆ ದ್ರೌಪದಿಮಾನ
ತರಿಯತಿಣಿಸಲ್ಕವಳ ಕಾಯ್ದ ಪೊರತು ೨

ದುಷ್ಟ ಕಂಸನ ಬಾಧೆಯಿಂ ಲೋಕ ತತ್ತರಿಸೆ
ಭ್ರಷ್ಟನನು ಕೊಂದ ಜಗ ಪೊರೆದ ಹರಿ ಹೊರತು ೩

### ೧೪೯

ಎಲ್ಲಿ ನೋಡಿದರಲ್ಲಿ ಚನ್ನಕೇಶವನು
ಪುಲ್ಲಲೋಚನನಾದ ಶ್ರೀ ಕೃಷ್ಣನು ಪ

ಭೂತಳ ಪಾತಾಳ ಸಕಲ ಲೋಕಗಳಲ್ಲಿ
ಭೂತ ಪ್ರೇತಾಳ ಕ್ರಿಮಿ ಜಂತುಗಳಲ್ಲಿ
ಮಾತು ಚೇಷ್ಟಗಳಲ್ಲಿ ಕೆರೆ ಭಾವಿ ವನದಲ್ಲಿ
ಕೋತಿ ಖಗವೃಂದ ಪಶುವರ್ಗಂಗಳಲ್ಲಿ ೧

ವೇದ ಶಾಸ್ತ್ರಗಳಲ್ಲಿ ಸರ್ವ ಧರ್ಮಗಳಲ್ಲಿ
ಬೋಧಕ ಮೊದಲಾದ ಗುರು ವರ್ಗದಲ್ಲಿ
ಪಾದ ಪಾದಗಳಲ್ಲಿ ಸಾಧು ಸಜ್ಜನರಲ್ಲಿ
ವಾದ್ಯ ಮೃದಂಗಾಗಿ ನಾದಂಗಳಲ್ಲಿ ೨

ಕಣ್ಣುಗಳಿಗೆಸೆಯುವ ಸಕಲ ವಸ್ತುಗಳಲ್ಲಿ
ಮಣ್ಣಿನಲಿ ಸರ್ವತ್ರ ಘನ ಸೃಷ್ಟಿಯಲ್ಲಿ
ಬಣ್ಣಿಸಲ್ಕಾಗದ ಹರಿ ಕೀರ್ತನೆಗಳಲ್ಲಿ
ಹೆಣ್ಣು ಹೊನ್ನು ಮಣ್ಣು ತ್ರಿವರ್ಗದಲ್ಲಿ ೩

ಸಕಲ ಚರ ಪ್ರಾಣಿಯಲಿ ಅಚರ ಜೀವಗಳಲ್ಲಿ
ಸಕಲ ಸ್ತ್ರೀ ಪುರುಷರಲಿ ಸುರದನುಜರಲ್ಲಿ
ಸಕಲ ಧಾನ್ಯಗಳಲಿ ತಿಂಡಿ ತಿನಸುಗಳಲ್ಲಿ
ಸುಖ ದುಃಖ ಬಹಿರಂಗ ಅಂತರಂಗದಲಿ ೪

ದಿನದಲ್ಲಿ ನಿಶೆಯಲ್ಲಿ ಅನ್ನಪಾನಗಳಲ್ಲಿ
ಅಣುರೇಣು ತೃಣಕಾಷ್ಟ ಸರ್ವ ದಿಕ್ಕಿನಲೀ
ಕನಸಿನಲಿ ಮನಸಿನಲಿ ಪಂಚ ಭೂತಗಳಲ್ಲಿ
ಜನನ ಮರಣಾತೀತ ಚನ್ನಕೇಶವನು ೫

## ೧೫೦

ಏನೇನು ಬೇಕಯ್ಯ ಶ್ರೀ ಹರಿಯೆ ನಿನಗೇ
ನೀನೆ ಗತಿಯೆಂದು ಸರ್ವಸ್ವವೊಪ್ಪಿಸುವೇ ಪ

ತರಳನಾಗಿಹ ಧೃವನು ಘೋರ ತಪವಂಗೈಯ
ಹರುಷದಿಂ ಬಾಲಕಗೆ ವರ ಪದವಿಯಿತ್ತೇ
ಕರುಣಾಳು ಶ್ರೀ ಹರಿಯೇ ನಿಂನ ಮೆಚ್ಚಿಸಲಿಕ್ಕೆ
ಉರುತರದ ತಪವು ಬೇಕೇನೊ ನಾನರಿಯೇ ೧

ದೊರೆಯು ರುಕುಮುಂಗದನು ಯೇಕಾದಶೀವ್ರತವ
ಸರಸದಿಂದಾಚರಿಸೆ ನಿಜಭಕ್ತಗೊಲಿದೇ
ಕರುಣಾಳು ಶ್ರೀಹರಿಯ ನಿನ್ನ ಮೆಚ್ಚಿಸಲಿಕ್ಕೆ
ಉರುತರದ ವ್ರತವು ಬೇಕೇನೊ ನಾನರಿಯೇ ೨

ತರಳ ಪ್ರಲ್ಹಾದ ತಾ ಹರಿನಾಮ ಕೀರ್ತಿಸಲು
ದುರುಳ ತಾತನ ಕೊಂದು ಕಂದನನು ಪೊರೆದೆ ಕರುಣಾಳು
ಶ್ರೀ ಹರಿಯೆ ನಿಂನ ಮೆಚ್ಚಿಸಲಿಕ್ಕೆ
ಉರುತರದ ಕೀರ್ತನೆಯು ಬೇಕೋ ನಾ ನಾನರಿಯೇ ೩

ಭರದಿ ದುಶ್ಯಾಸನನು ಮಾನವಂ ಕಳಯುತಿರೆ
ಸರಳೆಗೇ ನೀನೊಲಿದು ಅಕ್ಷಯವನಿತ್ತೇ
ಕರುಣಾಳು ಶ್ರೀಹರಿಯೆ ನಿನ್ನ ಮೆಚ್ಚಿಸಲಿಕ್ಕೆ
ಉರುತರದ ಸ್ತೋತ್ರಗಳು ಬೇಕೋ ನಾನರಿಯೇ ೪

ಧರಣಿಸುತೆ ಜಾನ್ಹಕಿಯೆ ಹುಡುಕಲ್ಕಿ ವಿಕ್ರಮದಿ
ಶರಧಿಯನು ದಾಟಿದಗೆ ಭರದಿಂದಲೊಲಿದೇ
ಕರುಣಾಳು ಶ್ರೀಹರಿಯ ನಿನ್ನ ಮೆಚ್ಚಿಸಲಿಕ್ಕೆ
ಉರುತರದ ದಾಸ್ಯತ್ವ ಬೇಕೋ ನಾನರಿಯೇ ೫

ನಿರುತದಾಸರು ನಿನ್ನ ಸೇವೆಯನು ಮಾಡಲ್ಕೆ
ಕರುಣದಿಂ ದಾಸರಿಗೆ ಪ್ರತ್ಯಕ್ಷನಾದೇ
ಕರುಣಾಳು ಶ್ರೀ ಹರಿಯ ನಿನ್ನ ಮೆಚ್ಚಿಸಲಿಕ್ಕೆ
ಉರುತರದ ಸೇವೆ ಬೇಕೇನೊ ನಾನರಿಯೇ ೬

ವರ ದುರ್ವಾಪುರದಲ್ಲಿನಿತ್ತು ಮೆರೆಯುವಿಯೆಂದು
ಸಿರಿ ಚನ್ನಕೇಶವನೆ ಪರಮಾತ್ಮನಂದೂ
ಕರುಣಾಳು ಶ್ರೀ ಹರಿಯೆ ನಿನ್ನ ನಂಬುತಲಿಂದು
ಮರೆಹೊಕ್ಕೆ ಕಾಯೋ ಶ್ರೀ ಈಶ ಸರ್ವೇಶಾ ೭

## ೧೫೧

ಏಳು ಏಳು ಕೇಶವಾ ಶ್ರೀಮಾಧವಾ
ಏಳು ಏಳು ಕೇಶವಾ ಪ

ಏಳಯ್ಯ ಮಧುಸೂದನ ಚಕ್ರಧಾರೀ
ಏಳಯ್ಯ ನಿಜಶೌರಿ ದಶರೂಪಧಾರೀ
ಏಳಯ್ಯ ದೇವಕಿಕಂದ ಉದಾರೀ
ಏಳಯ್ಯ ಮುರಹರ ಕೌಸ್ತುಭಧಾರೀ ೧

ತ್ರಿಜಗವನ್ನು ಬೇಗ ಪಾಲಿಸಲೇಳು
ಭಜಕರ ಕರುಣದಿ ರಕ್ಷಿಸಲೇಳು
ಸುಜನರ ಮರೆಯದೆ ವರದೆತ್ತಲಿಕೆ ಯೇಳು
ಕುಜನರ ಹರುಷದಿ ತರಿಯಲೇಳು ೨

ದಾಸದಾಸರು ಬಂದು ಸೇವಿಸುತಿಹರೇಳು
ತಾಸು ತಾಸಿಗೆ ತತ್ವವರುಹಲೇಳು
ದಾಸಗೆ ನಿತ್ಯದಿ ಭಾಸವಾಗಲೇಳು
ದಾಸಗೆ ಮುಕ್ತಿಯ ಪಾಲಿಸಲೇಳು ೩

ಅರುಣೋದಯವಾಯ್ತು ಕಿರುಣೋದಯವಾಯ್ತು
ಭರದಿಂದ ಸೂರ್ಯನು ಮೇಲೇರುತಿಹನು
ಚರಣ ಕಿಂಕರರೆಲ್ಲ ಸಂಸಾರ ಶರಧಿಯ
ಸರಸದಿ ದಾಂಟಿ ನಿಂನನು ಸೇರುತಿಹರು ೪

ವಿದ್ಯೆಯರುಹಲು ಯೇಳು ಜ್ಞಾನವೀಯಲು ಯೇಳು
ಬುದ್ಧಿಯ ಕಲಿಸಿ ಆತ್ಮವ ಸೇರಲೇಳು

ಮದ್ದು ಭವರೋಗಕ್ಕೆ ಬೇಗನೀಯಲು ಯೇಳು
ಎದ್ದು ಲೋಕಕ್ಕೆ ನೀ ಬೆಳಗಲೇಳು ೫

ಸನ್ನುತ ವರ ದೂರ್ವಾಪುರಕೆ ದಿಗ್ದೇಶದಿಂ
ದೀನದಾಸರು ಬಂದು ಘನಭಕ್ತಿಯಿಂದ
ನಿಂನಯ ಸೇವೆಯೆ ನಿತ್ಯ ಮಾಡುವರಯ್ಯ
ಚನ್ನಕೇಶವಾ ಸೇವೆ ಸ್ವೀಕರಿಸೇಳು ೬

## ೧೫೨

ಕಂಡೆ ಕೇಶವನನ್ನು ದೂರ್ವಾಪುರದ ಪುಂಡರೀಕಾಕ್ಷನನ್ನು ಪ

ಶಂಖವ ಚಕ್ರವ ಗದೆಯ ಪದ್ಮವ ನಿತ್ಯ
ಶಂಕೆಯಿಲ್ಲದೆ ನಾಲ್ಕು ಕರದೊಳು ಪಿಡಿದಾ
ಪಂಕಜ ಲೋಚನ ಪರಮ ಪಾವನನನ್ನು
ಲಂಕೇಶನ ವೈರಿ ಮಾಧವನನ್ನು ೧

ಕಾಲಿಗುಂದುಗೆ ಗೆಜ್ಜೆ ಮೇಲಾದ ಭಾಪುರಿ
ನೀಲ ಮೇಘಶ್ಯಾಮ ತ್ರಿಗುಣ ರಹಿತನ
ತೊಳೆವ ರತ್ನಾಭರಣದಿಂದ ಪದ್ಮ ದಂಡ
ಚಲುವಿನಿಂದಲೆ ಊರಿ ನಿತ್ತ ಸ್ವಾಮಿಯನು ೨

ಭಜಕರ ಸಲಹುವ ಭಕ್ತವತ್ಸಲನ
ಸುಜನರ ಪೊರೆಯುವ ಶ್ರೀಧರನ
ಅಜನನ್ನು ಪಡೆದಿಂಹ ಮುರಲೀಧರನ
ಭಜಕರ ಮಧ್ಯದಿ ಮೆರೆವ ಕೇಶವನ ೩

## ೧೫೩

ಕಂಡೆ ಕಂಡೆನು ಕೇಶವಾ ನಿನ್ನಯ
ಪಾದ ಕಂಡೆ ಕಂಡೆನು ಕೇಶವಾ ಪ

ಪದ್ಮದಳಾಕೃತಿಯಲ್ಲಿರುತಿರುವಂಥ
ಮಂದಹಾಸದಿ ನಿತ್ಯ ನಲಿದಾಡುವಂಥ
ಪದ್ಮಾಕ್ಷಿ ಶ್ರೀದೇವಿ ಸೇವಿಸುತಿರುವಂಥ
ಮೋದದಿ ಹೃದಯದಿ ನೆಲೆಸಿರುವಂಥ ೧

ದುಷ್ಟರ ತಲೆಯನ್ನು ಪಿಡಿದೊತ್ತಿ ತರಿದಂಥ
ಭ್ರಷ್ಟರ ಯೆದೆ ಮೇಲಿಟ್ಟುರುವಂಥ
ಶಿಷ್ಟರೆಲ್ಲರು ನಿತ್ಯ ಪೂಜಿಸುತಿರುವಂಥ
ಶಿಷ್ಟರ ಕಷ್ಟವ ಸಿಗಿದೊಗೆವಂಥ ೨

ಅಂಧಕಾರವ ಬೇಗ ಹರಿದು ಪಾಲಿಸುವಂಥ
ಮಂಧಮಾರುತ ಸೂನು ಇಚ್ಛಿಸಿದಂಥ
ಚಂದದಿ ಬಲಿಯ ಪಾತಾಳಕ್ಕೆ ತುಳಿದಂಥ
ಅಂದದಿ ನರನ ಸಾರಥಿಗೊಪ್ಪುವಂಥ ೩

ಸುರರು ಕಿಂನರರು ಕಿಂಪುರುಷರೇ ಮೊದಲಾದ
ಸುರಗಣ ಸೇವಿಪ ಭಜಿಪ ಪಾದವನು
ಸರಸದಿ ಭಕ್ತರ ಸಲಹೆ ರಕ್ಕಸರನ್ನು
ತರಿದ ಶ್ರೀ ಚನ್ನಕೇಶವನ ಪಾದವನು ೪

## ೧೫೪

ಕಂಡೆ ಕೇಶವರಾಯನ ನಂಮಾ
ಪುಂಡರೀಕಾಕ್ಷನನ್ನಾ ಪ

ನೀರಜಾಸನ ಪಿತನಾ ನಂಮಾ
ಶ್ರೀ ರಂಗ ಶ್ರೀಹರಿಯಾ
ಮಾರನ ಪಡೆದವನಾ ನಂಮಾ
ಶೂರ ವಿಶ್ವಂಭರನಾ ೧

ಕಾಮಿತ ಫಲದಾತನಾ ಭಕ್ತರ
ಪ್ರೇಮದಿ ಪೊರೆವವನಾ
ಭೀಮ ಪರಾಕ್ರಮನಾ ತುಲಸೀ
ಧಾಮ ವಿಭೂಷಣನಾ ೨

ಶರಣರ ಸಲಹುವನಾ
ದಾಸರ ಮರುಸವತರಿವವನಾ
ಗಿರಿಪುರ ಮಾಧವನಾ
ದೂರ್ವಾ ಪುರದ ಶ್ರೀ ಕೇಶವನಾ ೩

## ೧೫೫

ಕರುಣಾಳುವೈ ನಿಂನ ಭಜನೆಯೊಂದೇ ಸಾಕು
ಭರದಲಿ ಪಾಪಿಯ ಶುದ್ಧ ಮಾಡಲಿಲೇ ಪ

ಅಜಮಿಳ ಜನ್ಮದಿ ಘೋರ ಪಾಪವ ಗೈದು
ಭಜನೆ ಮಾಡಲು ತನುನೀಗು ಕಾಲದಲೀ
ಭಜಕರ ಲೋಲನೆ ಹೀನನಿಗೊಲಿದು ನೀ
ಕುಜನನ ಪರೆದು ಮೋಕ್ಷವನಿತ್ತೆ ಹರಿಯೇ ೧

ದುರುಳ ವಾಲ್ಮೀಕನು ಹೀನ ಕೃತ್ಯವಗೈದು
ಸುರಮುನಿಯಾಜ್ಞೆಯಿಂ ನಾಮವಭಜಿಸೇ
ದುರಳನ ಸರಸದ ಭಕ್ತಿಗೆ ವಲಿಯುತ
ಪರಮ ಜ್ಞಾನವನು ನೀ ನಿತ್ತೆ ಶ್ರೀಹರಿಯೆ ೨

ತರಳ ದಾಸರುಕೂಡಿ ಹರಿ ನಿಂನ ಸ್ತುತಿಸಲು
ನಿರುತ ಭಕ್ತರಿಗೆ ನೀನೊಲಿದೆ ಶ್ರೀಕಾಂತಾ
ಪರಮ ಆದರದಿಂದ ಹರಿಯಂನ ಮನವನ್ನು
ಪರಿ ಶುದ್ಧಮಾಡಿ ದೀನನ ಸೇರೋ ಹರಿಯೇ ೩

ರಂಗನ ಮಹಿಮೆಯ ನುಡಿಯಲಾರೆನು ನಾನು
ಅಂಗಜ ಪಿತನಾದ ದಶರೂಪಧರನ
ಮಂಗಳಾತ್ಮನು ನಿತ್ಯ ದೂರ್ವಾಪುರದಿನಿತ್ತು
ಮಂಗಳ ಪದವೀವ ಚೆನ್ನಕೇಶವನೆ ೪

## ೧೫೬

ಕಣ್ಮುಟ್ಟ ನೋಡಿರಯ್ಯಾ ಈ ಜಗದಲ್ಲಿ
ಮನ್ಮಥ ಪಿತ ರಂಗನ ಪ

ಶಂಖ ಚಕ್ರಗಳನ್ನು ಕೈಯೊಳಿರಿಸಿಕೊಂಡು
ಬಿಂಕದಿ ಮೆರೆವ ಗೋವಳರಾಯ ಹರಿಯ
ಪಂಕಜ ಲೋಚನ ಪರಮ ಪುರುಷ ನಿಃ
ಶಂಕದಿ ಭಕ್ತರ ಪೊರೆವ ಮಾಧವನ ೧

ಮಂದರಧರ ಮಧುಸೂದನಾಚ್ಯುತನ
ಕಂದನ ಸಲಹಿದ ನರಸಿಂಹ ಹರಿಯ
ನಂದಗೋಕುಲದಲ್ಲಿ ಮೆರೆದ ಶ್ರೀಲೋಲನ
ಅಂದದಿ ದಾಸರ ಪೊರೆವ ಶ್ರೀಧರನ ೨

ಪೂರ್ವದಿ ಶರಣರ ಪೊರೆದ ಶ್ರೀ ಕೃಷ್ಣನ
ಗರ್ವರಹಿತನಾಗಿ ಬೆಳಗುವ ಹರಿಯ
ಸರ್ವೇಶ ತಾನಿದ್ದು ಭಜಕರ ಸಲಹಲು
ದೂರ್ವಾಪುರದಿ ನಿತ್ತ ಚನ್ನಕೇಶವನ ೩

## ೧೫೭

ಕಾಕುತ್ಸ ರಘುನಾಥ ಶ್ರೀರಾಮಚಂದ್ರ
ಭೂಕಾಂತೆ ಸಿರಿವಂತೆ ಜನಕಾತ್ಮಜೇಂದ್ರ ಪ

ಪಾಕ ಶಾಸನ ಕಾಯ್ದ ದಶರಥ ಕಂದ
ಲೋಕನಾಯಕ ಸ್ವಾಮಿ ಭಕ್ತರಾನಂದಾ
ನಂಬಿದೆ ಹರಿ ನಿನ್ನ ಚರಣಯುಗ್ಮಗಳ
ನಂಬಿದ ಶ್ರೀ ಹರಿ ದಿವ್ಯ ರೂಪಗಳಾ
ನಂಬಿದೆ ನಿನ್ನ ಹರಿಲೀಲೆ ಮಹಿಮ ಕೀರ್ತಿಗಳ
ನಂಬಿದೆ ಪಾಲಿಸೋ ತರಿದು ಕಷ್ಟಗಳ ೧

ಸ್ಮರಿಸುವೆ ಭಜಿಸುವೆ ಶುಭ್ರ ನಾಮಗಳ
ಪರಿಪರಿ ಪೊಗಳುವೆ ನಮಿಸುವೆ ಹರಿಯ
ನಿರುತದಿ ಪಾಡುವೆ ನಿನ್ನ ಸ್ತೋತ್ರಗಳ
ವಿರಚಿಸಿ ಮಾಡುವೆ ಹರಿ ಕೀರ್ತನೆಗಳ ೨

ಭಕ್ತನ ಲಾಲಿಸೋ ದಾನವಾಂತಕನೇ
ಭಕ್ತಿಯ ಪಾಹಿಸೂಕರ ರೂಪಧರನೇ
ಭಕ್ತನ ಪಾಲಿಸೋ ದೇವ ನಿರ್ಮಲನೇ
ಮುಕ್ತಿಯ ಪಾಲಿಸೋ ಚನ್ನಕೇಶವನೇ ೩

## ೧೫೮

ಕಾಣಿಸುವೆ ಶ್ರೀಹರಿಯ ಮುಂದೆ ಬನ್ನಿ
ಕಾಣಿಸುವೆ ನಿಜವಾಗಿ ಚನ್ನಕೇಶವನ ಪ

ಸಡಗರದಿ ನಿಂತಿಹನು ವರ ದೂರ್ವಾಪುರದಲ್ಲಿ
ಪೊಡವಿಯೊಳು ದಾಸರಿಗೆ ವಲಿಯಬೇಕೆಂದು
ಬಿಡದೆ ನೋಡಿರಿ ಹರಿಯ ಕಾಯಕಾಂತಿಯ ನೀಗ
ಕಡು ಶ್ಯಾಮ ವರ್ಣದಲಿ ಯೆಸೆಯುತ್ತಲಿಹುದು ೧

ಮೇಲಿನ ಬಲ ಹಸ್ತದಲ್ಲಿ ಶಂಖವ ನೋಡು
ಕೆಳಗಿನ ಬಲ ಹಸ್ತದಲ್ಲಿ ಪದ್ಮವನೂ
ಮೇಲಿನ ಯಡ ಹಸ್ತದಲ್ಲಿ ಚಕ್ರವ ನೋಡು
ಕೆಳಗಿನ ಯಡ ಹಸ್ತದಲ್ಲಿ ಗದೆಯನ್ನೂ ೨

ಸೊಂಟದಲಿ ವಡ್ಯಾಣ ಕಿರುಗೆಜ್ಜೆಗಳ ನೋಡು
ಕಂಠದಲಿ ಹಲವು ವಿಧದಾಭರಣಗಳನೂ
ಎಂಟು ರತ್ನಗಳಿಂದ ಯೆಸೆವ ಕೌಸ್ತುಭ ನೋಡು
ಬಂಟರನು ಸಲಹುವ ಪಾದಯುಗ್ಮವನೂ ೩

ಬಲ ಯಡದ ಕಂಣುಗಳು ಸೂರ್ಯ ಚಂದ್ರಮಂತೆ
ಇಳೆಯೊಳಗೆ ರಮಣೀಯವಾಗಿ ಶೋಭಿವವು
ತಲೆಯ ಮೇಲಿರುವ ವಜ್ರದ ಕಿರೀಟವ ಮತ್ತೆ
ಬಲಯಡದ ಶ್ರೋತೃಗಳ ಕುಂಡಲವ ನೋಡು ೪

ಉದರ ಮಧ್ಯದೊಳಿಪ್ಪ ನಾಭಿಕಮಲವ ನೋಡು
ಮದನಪಿತ ಶ್ರೀಹರಿಯ ತುಲಸಿ ಮಾಲೆಯನೂ
ಸದನ ಪೀಠವನುಟ್ಟ ಪಿಂತಾಂಬರವ ನೋಡು
ಮೃದು ಪಣೆಯೊಳಿಟ್ಟಿರುವ ಶ್ರೇಷ್ಠ ತಿಲಕವನೂ ೫

ಚಿನ್ಮಯ ರೂಪವ ಮೌಕ್ತಿಕದ ಸರಗಳನು
ಕಂಣಿಗೆಯುವ ಪುಷ್ಪಮಾಲೆಗಳ ನೋಡು
ಸನ್ನುತನು ಭಕ್ತರನು ಪೊರೆವ ಮೂರ್ತಿಯ ಬಿಡದೆ
ಮನ್ನಿಸುತ ಭಜಕರನು ಕಾವ ರಂಗನನೂ ೬

## ೧೫೯

ಕಾಯೋ ಕೇಶವ ದೇವ ದೂರ್ವೇಶಾ
ಪಾಯವ ನರಿಯೆನು ಪೊರೆಯೊ ಸರ್ವೇಶಾ ಪ

ಸುಜನರ ರಕ್ಷಿಸಿ ಭಜಕರ ಸಲಹುವ
ಅಜಪಿತ ಶ್ರೀಹರಿ ಸೇವೆಯ ಗೈವೆ ೧

ಸಾಸಿರ ನಾಮಗಳಿಂದ ರಂಜಿಪ ದೇವ
ವಾಸುಕಿಶಯನನ ಸೇವೆಯ ಗೈವೆ ೨

ವೇದವ ಪಾಲಿಸಿ ಧರಣಿಯ ಸಲಹಿದ
ಮಾಧವ ಶ್ರೀಹರಿ ಸೇವೆಯ ಗೈವೆ ೩

## ೧೬೦

ಕಾರುಣ್ಯಸಾಗರನೇ ನಾ ಸೇರುವೆ
ಮಾರನ ಪಡೆದವನೇ ಪ

ಭಾವಾತೀತನೆ ಯೆನ್ನ ಅವಗುಣವೆನಿಸದೆ
ಸೇವಕನಿಗೆ ನಿನ್ನ ಭಕ್ತಿಯ ನೀಡೋ ೧

ದೇವಕಿ ಕಂದನೇ ಸನಕವಂದಿತನೇ
ಸೇವೆಯ ಮಾಡುವೆ ಚರಣವ ನೀಡೋ ೨

ಅಜನಿಗೆ ಪಿತನಾಗಿ ದ್ವಿಜರಿಗೊಡೆಯನಾಗಿ
ಗಜನನ್ನು ಪೊರೆದ ಶ್ರೀ ಲಕ್ಷ್ಮೀ ಸೇವಿತನೇ ೩

ಭಜಿಸುವೆ ಶ್ರೀ ಹರಿ ಪಾದ ಯುಗ್ಮಗಳನ್ನು
ಭಜಕನ ಸಲಹಯ್ಯ ಚನ್ನಕೇಶವನೇ ೪

## ೧೬೧

ಕಾರುಣ್ಯ ಸಾಗರನೇ ಮಾಧವನೇ
ಹಿರಣ್ಯಾ ಸುರಹರನೇ ಪ

ದುರುಳ ದೈತ್ಯನು ಧಾರುಣಿಯನು ಬಾಧಿಸಲಾಗ
ಹಿರಣ್ಯನ ಕೊಂದು ದೇವಿಯನು ಪಾಲಿಸಿದೇ ೧

ತರಳ ಪ್ರಲ್ಹಾದನು ಮೊರೆಯಿಡುತಿರಲಾಗ
ನರಸಿಂಹರೂಪದಿ ಬಂದು ಪಾಲಿಸಿದೇ ೨

ಕನಕಾಸುರನು ತನ್ನ ಕಂದನ ಕೆಣಕಲು
ದನುಜನ ಬಗೆದ ಶ್ರೀ ಚೆನ್ನಕೇಶವನೇ ೩

## ೧೬೨

ಕೇಶವದಾಸಗೆ ಚರಣವ ನೀಡೋ
ವಾಸುದೇವನೇ ನಿನ್ನ ಪಾದವ ನೀಡೋ ಪ

ಚರಣವ ಗಂಗಾಮೃತದಿಂದ ತೊಳೆಯುವೇ
ಚರಣಕ್ಕೆ ಶ್ರೀಗಂಧವನ್ನು ಲೇಪಿಸುವೆ
ಚರಣಕ್ಕೆ ಪರಿಮಳ ಪೂಗಳ ಮುಡಿಸುವೇ
ಚರಣಕ್ಕೆ ಆರತಿ ಬೆಳಗುವೆ ಹರಿಯೇ ೧

ಪಾದದೊಳೆನ್ನಯ ಶಿರವಿತ್ತು ಬೇಡುವೆ
ಪಾದತೀರ್ಥವ ನಿತ್ಯ ಕುಡಿಯುತ್ತಲಿರುವೇ
ಪಾದಧೂಳಿಗಳನ್ನು ಬಿಡದೆ ನಾ ಹೊರುವೇ
ಪಾದದೊಳೀ ತನುವನ್ನು ನಾ ಬಿಡುವೇ ೨

ಅಡಿಯನ್ನು ನೋಡಿ ಸಂತೋಷಗೊಳ್ಳುವೆನು
ಅಡಿಯನ್ನು ಸೇವಿಸಿ ಭಕ್ತನಾಗುವೆನು
ಅಡಿಯನ್ನು ಪೂಜಿಸಿ ಭಜಿಸಿ ಪಾಡುವೆನು
ಅಡಿಯನ್ನು ಸೇರಿ ನಾ ಮುಕ್ತನಾಗುವೆನು ೩

## ೧೬೩

ಕೇಶವ ಲೀಲೆಯೊಳ್ ನಿರುತನಾಗುವೆ ನಾನು
ಕೇಶವ ಚರಣವಭಜಿಪೆ ಭಕ್ತಿಯಲೀ ಪ

ಶ್ರೀಹರಿ ಕಥೆಗಳ ಲಾಲಿಸುವೆನು ನಿತ್ಯ
ಶ್ರೀಹರಿ ಕೀರ್ತನೆ ಮಾಡುವೆ ನಿತ್ಯ
ಶ್ರೀಹರಿ ಸ್ಮರಣೆಯ ಗೈಯುತಿಪ್ಪೆನು ನಿತ್ಯ
ಶ್ರೀಹರಿ ಚರಣವ ಸೇವಿಪೆ ನಿತ್ಯ ೧

ಶ್ರೀಹರಿ ರೂಪವ ಪೂಜಿಸುವೆನು ನಿತ್ಯ
ಶ್ರೀಹರಿ ಚರಣವ ವಂದಿಪೆ ನಿತ್ಯ
ಶ್ರೀಹರಿ ದಾಸ್ಯತ್ವ ವಹಿಸುವೆನೂ ನಿತ್ಯ
ಶ್ರೀಹರಿ ಸಖ್ಯವ ಬೆಳೆಸುವೆ ನಿತ್ಯ ೨

ಶ್ರೀಹರಿಗಾತ್ಮವನರ್ಪಿಸುವೆನು ನಿತ್ಯ
ಶ್ರೀಹರಿ ಚರಣದೊಳುರುಳುವೆ ನಿತ್ಯ
ಶ್ರೀಹರಿಯೆಂದು ನಾ ತೊಲಗುವ ಭವ ಭಯ
ಶ್ರೀಹರಿ ಚನ್ನಕೇಶವನೆ ಗತಿಯೆಂಬೇ ೩

## ೧೬೪

ಕೇಶವಾಯೆನ್ನಿರಯ್ಯ ಹಾಗಂದೂ
ಪಾಶವ ಕಡಿಯಿರಯ್ಯ ಪ

ಕೇಶವ ನಾಮವ ಭಜಿಸುತ್ತಲೀಗ
ಆಸೆ ಕ್ಲೇಶಗಳನ್ನು ನೀಗಿರಿ ಬೇಗ ಅ.ಪ.

ವರದೂರ್ವಾಪುರದಲ್ಲಿ ನಿರುತನಾಗಿದ್ದು ತಾ
ಪರಮ ದಾಸರಿಗೆಲ್ಲ ಹರಿ ಭಾಸವಪ್ಪಾ
ಶರಣರ ಪಾಲಕ ಚನ್ನಕೇಶವರಾಯ
ಪರಬ್ರಹ್ಮ ರೂಪದಿ ಮೆರೆವ ಗೋಪಾಲ ೧

ತರಳ ಪ್ರಲ್ಹಾದ ಕೇಶವನನ್ನು ಸ್ಮರಿಸಲು
ದುರುಳ ತಾತನ ಕೊಂದು ಕಂದನ ಪೊರೆದಾ
ಸರಳೆ ಪಾಂಚಾಲೆಯು ಸಭೆಯಲ್ಲಿ ಮೊರೆಯಿಡೆ
ತರುಣಿಗಕ್ಷಯವಿತ್ತು ಶ್ರೀಹರಿ ಪೊರೆದಾ ೨

## ೧೬೫

ಕೊಡು ಕೊಡು ಕೊಡು ಭಕುತಿ ಲಕ್ಷ್ಮೀಪತಿ
ಕೊಡು ಕೊಡು ಕೊಡು ಭಕುತಿ ಪ

ಕೊಡು ಕೊಡು ತವ ಭಕ್ತಿ ಬಿಡಲಾರೆ ಶ್ರೀಪತಿ
ಬಿಡದೆ ಭಜಿಪ ನಿನ್ನ ದೃಢ ಚಿತ್ತ ಕೊಡು ರಂಗ ೧

ದೇವಕಿ ಸುತ ನಿನ್ನ ಸೇವಿಸಲರಿಯೆನು
ಭಾವಾತೀತನೆ ದುಷ್ಟ ಭವದಿಂದ ದಾಟಿಸೊ ೨

ಸುಜನರ ಪಾಲನೇ ಕುಜನರಾಂತಕನೇ
ಭಜಕರ ಪೊರೆವನೇ ಅಜಪಿತ ಹರಿಯೇ ೩

ಚಿನ್ಮಯ ರೂಪನೇ ಸನ್ನುತ ಸ್ಮರಿಸುವೆ
ಮನ್ನಿಸಿ ರಕ್ಷಿಸೋ ಚನ್ನಕೇಶವನೇ ೪

## ೧೬೬

ಚನ್ನ ಕೇಶವ ನಮೋ ನಮೋ
ಭಿನ್ನ ರೂಪನೆ ನಮೋ ನಮೋ ಪ

ಅಜಮಿಳರಕ್ಷಕ ನಮೋ ನಮೋ
ಭಜಕರ ಪಾಲಕ ನಮೋ ನಮೋ
ಸುಜನರ ಸೇವಕ ನಮೋ ನಮೋ
ಕುಜನರ ನಾಶಕ ನಮೋ ನಮೋ ೧

ಸುರಮುನಿ ವಂದಿತ ನಮೋ ನಮೋ
ಸುರಗಣ ಸೇವಿತ ನಮೋ ನಮೋ
ತರಳರ ಪಾಲಕ ನಮೋ ನಮೋ
ಶರಣರ ರಕ್ಷಕ ನಮೋ ನಮೋ ೨

ದಾಶರಥೆ ಹರಿ ನಮೋ ನಮೋ
ವಾಸುಕಿಶಯನನ ನಮೋ ನಮೋ
ಈಶ ಪರಾತ್ಪರ ನಮೋ ನಮೋ
ಕೇಶವ ಮಾಧವ ನಮೋ ನಮೋ ೩

## ೧೬೭

ತೆಗೆ ತೆಗೆ ಬಾಗಿಲನ್ನು ಲಕ್ಷ್ಮೀಪತಿ
ತೆಗೆ ತೆಗೆ ಬಾಗಿಲನ್ನು ಪ

ತೆಗೆ ತೆಗೆ ಬಾಗಿಲ ಜೋಗಿ ಕೇಶವದಾಸ
ನಗುತ ಬಂದಿರುವನು ಸ್ವೀಕರಿಸಿನ್ನು ಅ.ಪ.

ಹೇಸಿ ಸಂಸಾರವನ್ನು ತ್ಯಜಿಸಿ ಬಿಟ್ಟು
ಆಶೆಪಾಶೆಗಳನ್ನು
ಸಾಸಿಮೆ ಕಾಳಿಗೆ ಸರಿಮಾಡಿ ಭವವನ್ನು
ವಾಸುಕಿ ಶಯನ ಶ್ರೀ ಲೋಲನ ನಂಬೀ ೧

ನಿನ್ನಯ ಭಜನೆಯನು ಮಾಡುತ ಬಂದೆ
ನಿನ್ನಯ ಸ್ಮರಣೆಯನು
ಪನ್ನಗ ಶಯನ ಶ್ರೀ ದಾಸದಾಸರ ಪೋಷ
ಮನ್ನಿಸಿ ನೋಡಲು ಚರಣವ ನಂಬೀ ೨

ನಿನ್ನಯ ಲೀಲೆಯಲ್ಲೀ ವೇಷವ ಹಾಕಿ
ನಿನ್ನ ನಾಟಕದಲ್ಲಿ
ಚನ್ನಾಗಿ ಕುಣಿದು ಲೋಕದೊಳಹುತಿಯನಾಗಿ
ಚನ್ನಕೇಶವ ಸೂತ್ರಧಾರನ ನಂಬೀ ೩

## ೧೬೮

ದಯ ಮಾಡೊ ರಂಗಾ ದಯ ಮಾಡೊ ರಂಗಾ
ದಯ ಮಾಡೊ ನಾ ನಿನ್ನದಾಸನೆಂತೆಂದು ಪ

ನಾನಾ ಜೀವಗಳ ಬಲೆದಾಟಿ ಬಂದೇ
ಹೀನ ನರಜನ್ಮಕೆ ಬಂದು ಶರಣೆಂದೇ ೧

ಪೋಗಲಾರೆನು ಪತ್ತೆ ಯೋನಿಜನ್ಮಕ್ಕೇ
ಬೇಗದಿ ಪರಿಯೆನ್ನ ಸಲಹೊ ಶರಣೆಂದೇ ೨

ಸರಸದಿ ಶ್ರೀಹರಿಯನ್ನು ಕೀರ್ತಿಸುವೆ
ಸಿರಿ ಚನ್ನಕೇಶವಾ ಪೊರೆಯೊ ಶರಣೆಂದೇ ೩

## ೧೬೯

ದಶರಥನಂದನ ಹರಿಯನು ನಿತ್ಯದಿ
ಭಜಿಪುದು ನಮಗೆ ಆನಂದಾ
ಗೋವಿಂದಾ ಹರಿ ಮುಕುಂದಾ
ದಶಶಿರ ದೈತ್ಯನ ಕೆಡಹಿದ ಹರಿಯ ಸ್ಮರಿಸುವದಾನಂದಾ
ನಮಗೆ ನಮಿಸು ವದಾನಂದಾ ಪ

ಮೋದದ ಅಮೃತಾನ್ನಗಳಿಗಿಂತಲು ಕೊಡುವದು ಆನಂದಾ
ಮತ್ತೆ ಅಧಿಕ ಆನಂದಾ
ಖೇದವ ನೀಗಿ ಸುಖವನು ಕೊಡುವದು
ಆನಂದಾ ಪರಮಾನಂದಾ
ಮತ್ತೂ ಅಧಿಕ ಆನಂದಾ ೧

ಸತಿಸುತ ಮಾತಾಪಿತರಿಗಿಂತಲು ಕೊಡುವದು ಆನಂದಾ
ಮತ್ತೆ ಅಧಿಕ ಆನಂದಾ
ಮತಿಯನು ನೋಡಿ ಹಿತವನು ಕೊಡುವುದು
ಆನಂದಾ ಪರಮಾನಂದ
ಮತ್ತೂ ಅಧಿಕ ಆನಂದಾ ೨

ಜಗದೊಳು ಯಲ್ಲಾ ವಸ್ತುವಿಗಿಂತಲು ಕೊಡುವದು ಆನಂದಾ
ಮತ್ತೆ ಅಧಿಕ ಆನಂದಾ
ಪೊಗಳುವೆ ಚನ್ನಿಗಕೇಶವ ರಾಯನ ಆನಂದಾ ಪರಮಾನಂದಾ
ಮತ್ತೂ ಅಧಿಕ ಆನಂದಾ ೩

## ೧೭೦

ದೀನರಿಗೆಲ್ಲಾ ಬಂಧು ಕೇಶವ ತಂದೆ
ದೀನರಿಗೆಲ್ಲಾ ಬಂಧು ಪ

ದಾನವಾಂತಕ ನಿನ್ನ ನೇಮಾನುಯಾಯಿಗೆ
ಮಾನವ ಕೊಟ್ಟು ರಕ್ಷಿಪ ಬಂಧು ನೀನೇ ಅ

ದೀನ ದ್ರೌಪದಿ ದೇವಿಗೇ ಅಕ್ಷಯವಿತ್ತು
ಮಾನವ ಕಾಯ್ದೆ ನೀನೇ
ಪ್ರಾಣವು ಹಾರುವಾಗ ಜಮಿಳ ಸ್ಮರಿಸಲು
ಯೇನನ ಸಲಹೆ ಮೋಕ್ಷವನಿತ್ತ ಹರಿಯೇ ೧

ದೀನ ದೇವಿಕಿ ದೇವಿಯ ಗರ್ಭದಿ ಬಂದು
ದೈನ್ಯಳ ಸಲಹಿತಿದೆಯೋ
ಹೀನ ವಾಲ್ಮೀಕನು ನಾಮವ ಭಜಿಸಲು
ಹೀನನಿಗೊಲಿದು ಬುದ್ಧಿಯನಿತ್ತ ಹರಿಯೇ ೨

ಸನ್ನುತ ನಮಿಸುವಂಥ ದಾಸರಿಗೆಲ್ಲ
ಸನ್ನುತ ಸ್ಮರಿಸುವಂಥ
ಸನ್ನುತಾಂಗನ ನಿತ್ಯ ಭಜಿಪ ದೀನರಿಗೆಲ್ಲ
ಚನ್ನಕೇಶವ ಸ್ವಾಮಿ ಪೊರೆವಂಥ ಬಂಧೂ ೩

## ೧೭೧

ದೇವ ದೇವನೆ ಪಾಲಿಸೈ
ಹಿತ ಬಂಧು ನೀನೇ ರಕ್ಷಿಸೈ ಪ

ಕಾವುದೈ ತವದಾಸನನು ಭವ
ಬಂಧದಿಂದಂ ದಾಟಿಸೈ

ಮಂದರಾಧರ ವಿಶ್ವರೂಪನೇ ಅಂದದಲಿ ಶ್ರೀಪತೇ
ಬಂದು ನೀನೇ ಪಾಲಿಸೈ ನಿಜ ಬಂಧು ನ್ಯಾಯದಿ ದಾಸನ ೧

ಎಲ್ಲಿ ಪೋದರೂ ನಿನ್ನ ಮರೆಯೆನು
ಎಲ್ಲಿ ಕೂತರೂ ನಿನ್ನ ಭಜಿಸೆನು
ವಲ್ಲಭನ ಶ್ರೀ ಲಕ್ಷ್ಮಿದೇವಿಯ ಅಲ್ಲಗಳೆಯದೆ ರಕ್ಷಿಸೈ ೨

ನೀನೇ ಎನ್ನಯ ಬಂಧು ಬಳಗವು
ನೀನೆ ಭಕ್ತರ ತಂದೆ ತಾಯಿಯು
ಚನ್ನಕೇಶವ ಸ್ವಾಮಿ ರಕ್ಷಿಸು ದೈನ್ಯದಿಂದಲಿ ಬೇಡುವೇ ೩

## ೧೭೨

ನಂಬಿದೆ ನಿಂನನು ಅಂಬುಜಲೋಚನ
ಅಂಬುಜೋದ್ಭವ ಪಿತ ಅಂಬುಜ ರಮಣಾ ಪ

ಹಲವು ಯೋನಿಗೆ ಬಿದ್ದು ಬಲೆ ದಾಟಿ ಬಂದೇ
ಬಳಲುತ್ತ ಪರಿಪರಿ ದುಃಖಗಳಿಂದ
ಬಲ್ಲವಿಲ್ಲ ಸಹಿಸಲು ಭವರೋಗ ವೈದ್ಯನೇ
ವಲಿದೆನ್ನ ಪಾಲಿಸೋ ಸಾನುರಾಗದಲೀ ೧

ಏನು ಮಾಡಲಿ ನಿಂನ ಚರಣ ಸೇರಲಿಕೇ
ಹೀನ ಪಥವ ಪಿಡಿದು ಕಡು ನೊಂದೆನಯ್ಯ
ಗಾನ ಲೋಲನೆ ಭಜಿಪ ಭಾಗ್ಯವ ಕೊಡಬೇಕು
ನೀನೇ ಗತಿಯೆಂದು ಯಾದವ ಪತಿಯೇ ೨

ಕತ್ತಲೆಯಾವರಿಸಿತು ದೇಶವೆಲ್ಲವ
ಬತ್ತಲೆಯಾಗಿ ನಿಂತರು ಮೂಢಜನರು
ಮೃತ್ಯು ತುತ್ತಿಗೆಯಂನ ಕೊಡದೆ ಕತ್ತಲೆ ನೀಗಿ
ಆತ್ಮ ಜ್ಞಾನವ ನೀಡೋ ಚನ್ನಕೇಶವನೇ ೩

## ೧೭೩

ನಂಬಿದೆನು ಚರಣಗಳ ಪಾಲಿಸೈ ಹರಿಯೇ
ನಂಬಿದೆನು ಶ್ರೀ ಚನ್ನಕೇಶವನೆ ದೊರಿಯೇ ಪ

ಸರಳೆ ದ್ರೌಪದಿಯಂತೆ ಕರಿರಾಜ ಧೃವರಂತೆ
ದುರುಳ ಕನಕಾಸುರನ ನಿಜತನುಜನಂತೇ
ಉರಗ ವಾಸುಕಿಯಂತೆ ಖಗರಾಜ ಕಪಿಯಂತೆ
ವರತತ್ವ ಭೋಧಿಸಿದ ಯತಿಗಣಗಳಂತೇ ೧

ಗೌತುಮನ ಸತಿಯಂತೆ ಯಾದವರ ಪಡೆಯಂತೆ
ಭೂತಳದಿ ಪೆಸರಾದ ಹರಿದಾಸರಂತೇ
ಕೋತಿ ಜಾಂಬವನಂತೆ ಅಮರೇಶ ಸುತನಂತೆ
ಆತುರದಿ ನಂಬಿರುವ ಶ್ರೀ ಲಕ್ಷ್ಮೀಯಂತೆ ೨

ನಾನಿತ್ತ ಪೂಜೆಯಿಂ ನಾಗೈದ ಭಜನೆಯಿಂ
ನಾನಿಂದು ಮಾಡಿದಾ ಹರಿಸ್ಮರಣೆಯಿಂದ
ನೀನೊಲಿದೆಯಿಂತೆಂದು ದೃಢವಾಗಿ ನಂಬಿದೆನು
ಹೀನನನು ಸಲಹಯ್ಯ ಸ್ವಾಮಿ ಕೇಶವನೇ ೩

## ೧೭೪

ನಮ್ಮ ಗೋವಿಂದನ ಭಜಿಸುವೆ ಸತ್ಯ
ನಮ್ಮ ಮುಕುಂದನ ಸ್ಮರಿಸುವೆ ನಿತ್ಯ ಪ

ಹಿಂದಿನ ಜನ್ಮದಿ ಕಾಯ್ದ ಶ್ರೀಧರನ
ಚಂದದಿ ನರಜನ್ಮಕ್ಕೆಳತಂದ ಪರಿಯ ೧

ಜನನಿಯ ಜಠರದಿ ಕಾಯ್ದ ಶ್ರೀಧರನ
ಜನನ ಕಾಲಕೆ ಬಂದೊದಗಿದ ಪರಿಯ ೨

ಬಾಲತನದೊಳೆನ್ನ ಕಾಯ್ದ ಶ್ರೀಧರನ
ಕಾಲಕಾಲಕೆ ಬಂದು ಸಲಹಿದ ಪರಿಯ ೩

ಕಷ್ಟ ಕಾಲಕೆ ಬಂದು ಕಾಯ್ವ ಶ್ರೀಧರನ
ದುಷ್ಟ ಜನರ ಕಾಟ ಬಿಡಿಸುವ ಪರಿಯ ೪

ದೀನರಿಗೊದಗುತ್ತ ಕಾಯ್ವ ಶ್ರೀಧರನ
ಚನ್ನಕೇಶವ ದೇವನೆಂಬ ಶ್ರೀ ಹರಿಯ ೫

## ೧೭೫

ನಮಿಸುವೆ ಕೇಶವ ರಂಗನ
ನಮಿಸುವೆ ಪ್ರಣವ ಸ್ವರೂಪನ ಪ

ಅನುದಿನ ದೂರ್ವಾಪುರದಲಿ ಮೆರೆಯುವ
ಸನಕ ಸುಸೇವಿತ ಕೃಷ್ಣನ ೧

ಸರಸದಿ ದಾಸರಿಗೊಲಿಯುವ ಹರಿಯ
ಪರಮ ಪಾವನ ಮೂರ್ತಿಯ ೨

ಪನ್ನಗಶಯನನ ಹರಿ ಮಾಧವನ
ಚನ್ನಿಗ ಕೇಶವ ದೇವನ ೩

ದೂರ್ವಾಪುರ ಮಧ್ಯದಿ ನೆಲೆಸಿರುವ
ಸರ್ವಜಗದೇಕಾತ್ಮನ ೪

## ೧೭೬

ನಾಮವೆ ಗತಿಯೆನಗೇ ಕೇಶವ ನಿನ್ನ
ಪ್ರೇಮವೆ ಗತಿಯೆನಗೇ ಪ

ರಾಮ ನಿನ್ನಯ ನಾಮವ
ಸುಮತಿ ಸ್ಮರಿಸಲು
ಭೂಮಿಗಭಯವಿತ್ತ ಸ್ವಾಮಿಯೇ ನಿನ್ನ ಅ.ಪ.

ತರುಣ ಪ್ರಹ್ಲಾದ ನನೀಲ ದ್ರೌಪದಿ ಮತ್ತೆ
ದುರುಳ ವಾಲ್ಮೀಕ ವಿಭೀಷಣರನ್ನು
ಗರುಢ ಕಿನ್ನರ ಮರುತಾತ್ಮಜ ಋಷಿಗಳ
ಪೊರೆದಂಥ ನರಹರಿ ಕೇಶವನೆಂಬ ೧

ಇಂತೀ ಭಕ್ತರ ಸಲಹಿದ ಪರಿಯ
ಸತತ ಭಜಕರ ಪೊರೆವ ಶ್ರೀಧರನ
ಕಂತುಪಿತನ ನಾಮ ಸ್ಮರಿಸುವ ದಾಸರ
ಅಂತಾರಾತ್ಮವ ಶುದ್ಧಿಗೊಳಿಸುವ ಹರಿಯ ೨

ಅಂತ್ಯಕಾಲದಲಿ ಬಂದೊದಗುವ ಪರಿಯ
ಕುಂತಿಯ ಸುತರನ್ನು ಸಲಹಿದ ಪರಿಯ
ಸಂತತ ದೂರ್ವಾಪಟ್ಟಣದಲ್ಲಿ ಮೆರೆಯುವ
ಅಂತ್ಯಾದಿರಹಿತ ಶ್ರೀ ಚನ್ನಕೇಶವನ ೩

## ೧೭೭

ನಿಜ ದೇವನೇ ಕೇಶವಾ ತ್ರಿಜಗಧೀಶಾ
ಭಜಿಸುವೆ ತರಳ ದಾಸಾ ಪ

ಅಜಸುರಾರ್ಚಿತ ಸುಗುಣರೂಪನೇ
ನಿಜ ಶ್ರೀ ಲಕ್ಷ್ಮೀ ಸೇವಿತ ಹರಿಯೆ ೧

ಸುಜನ ಪಾಕನಿಂದ ಚರಣವ
ಭಜಿಸುವೆನು ಶ್ರೀ ಜಾನ್ಹಕಿ ರಮಣಾ ೨

ನಿರುತ ದಾಸರ ಕಾಯೋಪಿತನೇ
ಸಿರಿ ಚನ್ನಕೇಶವ ಮಾದವನೇ ೩

## ೧೭೮

ನೀನೆಂನ ಕಾಯಬೇಕೊ ಕೇಶವನೇ
ನೀನೆಂನ ಸಲಹಬೇಕು ಪ

ನೀನೆಂನ ಕಾಯದಿದ್ದರೆ ಕಾವರಾರಯ್ಯಾ
ನಾನಂಬಿ ಮರೆಹೊಕ್ಕೆ ಶರಣರಕ್ಷಕನೇ ಅ.ಪ.

ಮುಂದೆ ನೋಡಿದರೆ ಹೆಬ್ಬಾವು ನುಂಗುತಲಿದೆ
ಹಿಂದೆ ನೋಡಿದರೆ ಹೆಬ್ಬುಲಿಯು ಬಗೆಯುತಿದೇ
ಬಂದು ಬಾಂಧವರೆಲ್ಲ ತಲೆಯ ಮೇಲೆರಿವರು
ಬಂದೆನ್ನ ಕಾಯ್ವರನೊಬ್ಬ ಕಾಣೆ ೧

ನಂಬುತ್ತ ಗಿಡವೇರೆ ಗಿಡವು ಬಾಗುತಲಿದೆ
ನಂಬಿದ ಹರಿಗೋಲು ಮುಳುಗುತ್ತಲಿದೆಯೋ
ತುಂಬಿದ ಪಟ್ಟಣ ಸೂರೆಯಾಗುತಲಿದೆ
ಕಂಬನಿ ನೀಗುವ ಪ್ರಾಣೆಯಕಾಣೆ ೨

ಪಶುಗಳ ಕಾಯ್ದೆ ನೀ ಬಾಲ ಕ್ರೀಡೆಯೊಳಾಗ
ವಿಷದ ಕಾಳಿಂಗನ ಸೊಕ್ಕನು ಮುರಿದೇ
ದಶರೂಪಗಳ ತಾಳ್ದು ಸುಜನರ ಪೊರೆದಂತೆ
ಶಿಶುವನು ರಕ್ಷಿಸ್ಯೆ ಚನ್ನಕೇಶವನೇ ೩

## ೧೭೯

ನೀನೆ ಕೃಪಾಳು ಶ್ರೀ ಚನ್ನಕೇಶವನೇ
ಜ್ಞಾನಿಗಳನ್ನು ಕಾವ ಸನಕವಂದಿತನೆ ಪ

ಶರಣರ ಪೊರೆಯುವ ಪ್ರಣವ ಸ್ವರೂಪನೆ
ಸ್ಮರಿಸುವ ದಾಸರ ಮರೆಯ ಬೇಡಯ್ಯ ಅ.ಪ.

ದೀನರ ಸಲಹುವ ಭಕ್ತವತ್ಸಲನೇ
ಮಾನಿನಿ ದ್ರೌಪದಿ ಮಾನ ಕಾಯ್ದವನೇ
ಮೌನದಿಂದಲಿ ನಿಂನ ಧ್ಯಾನ ತತ್ಪರನಾದೇ
ಪನ್ನಗಶಯನನೇ ಸಲಹೊ ಕರುಣದಲೀ ೧

ಸನ್ನುತ ಹರಿ ನಿಂನ ಕೀರ್ತನೆ ಪಾಡುವೆ
ಜಾನ್ಹಕಿ ರಮಣ ಶ್ರೀ ಕಾಕುತ್ಸ್ಥರಾಮಾ
ಹೀನನ ಮಾತನ್ನು ನಲಿಯುತ್ತ ಕೇಳಿ ನೀ
ಸಾನುರಾಗದಿ ಕಾಯಾ ಧೇನು ಪಾಲಕನೇ ೨

ಪಂಕಜನೇತ್ರ ಶ್ರೀ ಪರಮ ಪಾವನನೇ
ಲಂಕೇಶನಿಗೆ ಯಮನಾದ ಶ್ರೀಧರನೇ
ಶಂಕೆಯಿಲ್ಲದೆ ಕಾಯೊ ದೂರ್ವಾಪುರೇಶನೆ
ಪಂಕಜನಾಭನೆ ಅಮಿತ ಸದ್ಗುಣಿಯೇ ೩

## ೧೮೦

ಪಾಲಿಸೆನ್ನ ಚನ್ನ ಕೇಶವಾ ನಿನ್ನ
ಬಾಲನೆಂದೆಣಿಸೋ ಮಾಧವಾ ಪ

ಲೋಲ ಲೋಚನ ತಂದೆ
ಶೀಲ ನಂಬಿದೆ ಬಂದೆ ಅ.ಪ.

ದೂರ್ವಾಪುರ ನೆಲೆವಾಸಿಯೇ ತಂದೆ
ಸರ್ವಾಭೀಷ್ಟ ಫಲದಾತನೇ
ಪರ್ವಾ ಸಪ್ತದಿ ನಿನ್ನ ಭಜಿಸೇ ಸ್ಮರಿಸುವೆನು ೧

ನಂದನಂದನ ಗೋವಿಂದನೇ ತಂದೆ
ಬಂಧವ ನೀಗುವ ಶಕ್ತಿಯ
ಮಂದರಧರದಯ ತೋರೆಂದು ನೆನೆಯುವೆ ೨

ಭಕ್ತರ ಪೊರೆ ನೀ ದಾತನೇ ತಂದೆ
ಮುಕ್ತಿ ಸ್ವಾತಂತ್ರ್ಯವ ನೀಡೆಲೋ
ಶಕ್ತಿ ಸ್ವರಾಜ್ಯಕ್ಕೆ ಮಾತೃ ಸೇವೆಗೆ ೩

## ೧೮೧

ಬಂದ ದುರಿತವಾ ಚನ್ನಕೇಶವಾ
ನಂದನಂದನಾ ದೂರಮಾಡೆಲೋ ಪ

ಆದಿದೇವನೇ ಮರೆಯ ಹೊಕ್ಕೆನೋ
ಸಾದುವರ್ಯರ ಮನ್ನಿಸೋ ಹರೇ ೧

ಭವದಿ ನೊಂದೆನೋ ಬಂಧ ಬಿಡಿಸಲೋ
ಅವನಿಪಾಲನೆ ಸಾನುರಾಗದೀ ೨

ಸುಜನಪಾಲನೇ ಕುಜನ ಕಾಲನೇ
ಭಜನೆ ಮಾಳ್ಪಿನೊ ರಕ್ಷಿಸೋ ಹರೇ ೩

## ೧೮೨

ಬನ್ನಿರಿ ಬನ್ನಿರಿ ದಾಸರೊಂದಾಗಿ
ಚನ್ನ ಕೇಶವನರಮನೆಗೆ ಮುಂದಾಗಿ ಪ

ಬನ್ನಿರಿ ಹರುಷದಿ ಪೋಗುವಾ ಬೇಗದಿ
ಸನ್ನುತ ತಾತನ ಮನೆಯೊಳಗಿರುವಾ ಅ.ಪ.

ನಿತ್ಯ ನೀಲಾಂಜನೆ ಪರಮ ಪಾವನನ
ಭೃತ್ಯರ ಸಲಹುವ ಬರ ಶ್ರೀಧರನ
ಪ್ರತ್ಯುಪಕಾರವ ಬೇಡದೆ ಸಲಹುವ
ಸತ್ಯನಾರಾಯಣ ದೇವರ ಗುಡಿಗೆ ೧

ನಗಧರ ರಂಗನ ಖಗವಾಹನನ
ಜಗದೊಳು ಮೆರೆಯುವ ಗೋವಳ ಹರಿಯ
ಅಗಣಿತಮದನನ ಸನಕ ವಂದಿತನ
ಭೃಗಕುಲ ಶ್ರೇಷ್ಠನ ದೇವರ ಗುಡಿಗೆ ೨

ತರಳರ ಸಲಹುವ ಭಜಕರ ಪೊರೆಯುವ
ಪರಿಪರಿ ರೂಪದಿ ಮೆರೆಯುವ ಪರಿಯ
ಪರಮಾತ್ಮನನ್ನು ಭಕ್ತಿಯಲಿ ಕೀರ್ತಿಸಲಾಗ
ಸರಸದಿ ದಾಸರಿಗೊಲಿವ ಕೇಶವನ ೩

## ೧೮೩

ಬಾರಯ್ಯ ಶ್ರೀ ಚನ್ನಕೇಶವ ದೊರಿಯೇ
ತೋರಯ್ಯ ನೀಡು ಭಕ್ತಿಯನು ಶ್ರೀ ಹರಿಯೇ ಪ

ಸುಜನರ ಪೊರೆವಂಥ ಭಕ್ತಾಭಿಮಾನಿ
ಕುಜನರ ತರಿವಂಥ ಸುಗುಣನಿಧಾನೀ ೧

ದಶರೂಪ ತಳೆದಂಥ ಸ್ವಾಮಿ ಮುರಾರೀ
ದಶರಥ ನಂದನ ದುರ್ಜನರ ವೈರೀ ೨

ವರ ದೂರ್ವಾಪುರದಲ್ಲಿ ನಿರುತನಾಗಿರುವೀ
ತರಳ ಬಾಲಕರಿಗೆ ನಿತ್ಯದಿ ಸಿಗುವೀ ೩

## ೧೮೪

ಬಾರೋ ಬಾರೋ ಚನ್ನಕೇಶವನೇ
ಬಾರೋ ಬಾರೋ ಮುರಲೀಧರನೇ ಪ

ದೀನರ ಪೊರೆವಂಥ ನಿತ್ಯ ನಿರ್ಮಲನೇ
ಸನಕಾದಿ ವಂದಿತ ಮಧುಸೂದನನೇ ೧

ಕುಜನರ ತರಿಯುವ ಬಲರಾಮಾನುಜನೇ
ಭಜಕನ ಪಾಲಿಸೋ ಮುಕ್ತಿದಾಯಕನೇ ೨

ದೂರ್ವಾಪುರದಿ ನಿತ್ತ ಯದು ಕುಲಪತಿಯೇ
ದೂರ್ವಾಸವಂದಿತ ಆದಿ ಮೂರುತಿಯೇ ೩

## ೧೮೫

ಬಾರೋ ಶ್ರೀರಂಗ ಕೀರ್ತಿ ತರಂಗ
ಬಾರೋ ರಿಪುಮದಭಂಗ ನೀಲಾಂಗ ಬಾಬಾ ಪ

ಬೀರೋ ಮಂಗಳ ತಿಮಿರ ಪತಂಗ
ಬಾರೋ ನರಸಿಂಗ ಗರುಡ ತುರಂಗ ಬಾಬಾ ಅ.ಪ.

ಬಾರೋ ನೀರಂಗ ಪುರಹರ ಸಂಗ
ಬಾರೋ ಅಂಗಜ ಪಿತ ಕರಿಡಂಗ ಬಾಬಾ
ಬಾರೋ ಕಾಳಿಂಗ ಮರ್ಧನರಂಗ
ಬಾರೋ ಸರ್ವಾಂಗ ಸುಂದರರಂಗ ಬಾಬಾ ೧

ಬಾರೋ ಸಾಷ್ಟಾಂಗ ವೆರಗುವೆರಂಗ
ಬೀರೋ ಆನಂದ ಹರಧನು ಭಂಗ ಬಾಬಾ

ಬಾರೋ ಸಾರಂಗ ವರದ ಶ್ರೀರಂಗ
ಬೀರೋ ಭಕ್ತಿಯ ನಿಗಮಾಂತರಂಗ ಬಾಬಾ ೨

ಬಾರೋ ಶ್ರೀರಂಗ ತೋರೋ ಆನಂದ
ಬೀರೋ ಜ್ಞಾನತರಂಗ ಕೃಪಾಂಗ ಬಾಬಾ
ಸೇರೋ ದಾಸನ ಆತ್ಮ ಶ್ರೀರಂಗ
ಬಾರೋ ಕೇಶವ ಕರುಣಾಂತರಂಗ ಬಾಬಾ ೩

ಬಾರೋ ಅಂಗಧ ವರದ ಶ್ರೀರಂಗ
ಬಾರೋ ಗಂಗೆಯ ಪಿತನೆ ಶ್ರೀ ರಂಗ ಬಾಬಾ
ಬಾರೋ ದೂರ್ವೇಶ ಬಲಚದುರಂಗ
ಬಾರೋ ಶ್ರೀ ಚನ್ನಕೇಶವರಂಗ ಬಾಬಾ ೪

## ೧೮೬

ಭಕ್ತಿಯನು ಪಾಲಿಸುತ ಭಕ್ತರನು ಪಾಲಿಸುವ
ಮುಕ್ತಿದಾಯಕ ಹರಿಯ ಸೇವೆಯನು ಮಾಳ್ಪೇ ಪ

ಪಂಚೇಂದ್ರಿಯವ ಗೆದ್ದು ಪಂಚಾಮೃತಗಳಿಂದ
ಕಂಚಿಪುರ ವಾಸಿಯ ಕಾಯವನು ತೊಳೆದೂ ೧

ಆರು ಅಂಗಳ ಜೈಸಿ ಆರು ಶಾಸ್ತ್ರಗಳಿಂದ
ಧಾರೆ ಪುರವಾಸಿಗೇ ಗಂಧ ಲೇಪಿಸುತಾ ೨

ಮೂರು ವೈರಿಗಳೊದೆದು ಚಾರು ವೇದಗಳಿಂದ
ಮಾರ ಪಿತನಿಗೆ ನಿತ್ಯ ಪುಷ್ಪವೇರಿಸುತ ೩

ಎಂಟ ಕೀಳರ ಗೆದ್ದು ತುಂಟರೈವರ ಕೊಂದು
ಬಂಟನಾಗುತ ಹರಿಯ ಮಹಿಮೆಯನು ಭಜಿಸಿ ೪

ಶಾಪ ತಾಪವ ಕಳೆದು ತ್ರಿಪುರಾರಿ ವದ್ಯನಿಗೆ
ಧೂಪದೀಪಗಳಿಂದ ಆರತಿಯ ಬೆಳಗೀ ೫

ಅನುಮಾನವನು ತ್ಯಜಿಸಿ ಶ್ರೀ ಚೆನ್ನಕೇಶವನಿಗೆ
ತನುಮನ ಧನದಿಂದ ಆತ್ಮವರ್ಪಿಸುವೇ ೬

## ೧೮೭

ಭಜನೆಯೊಂದೇ ಸಾಲದೇ ರಂಗಯ್ಯನ
ಭಜನೆಯೊಂದೇ ಸಾಲದೇ ಪ

ಭಜಕರ ಲೋಲನ ಅನುದಿನ ಸ್ಮರಿಸಲು
ಭಜಕರ ದುರಿತವ ತರಿಯುವ ಪರಿಯ ಅ.ಪ.

ಹಿಂದೆ ನೋಡಜಮಿಳ ತರಳ ಪ್ರಲ್ಹಾದರ
ಚಂದದಿ ಮೆರೆದ ಗೋಪಾಲ ಬಾಲಕರ
ನಂದ ಗೋಕುಲದ ಗೋಪಾಂಗನೆ ವ್ರಜಗಳ
ವೃಂದಾವನದೊಳಿದ್ದ ಗೋಪಸೇವಕರ ೧

ಕೋಮಲೆ ದ್ರೌಪದಿ ಸಭೆಯೊಳು ಸ್ಮರಿಸಲು
ಭಾಮೆಗಕ್ಷಯವಿತ್ತ ಕ್ರೂರ ರಕ್ಷಕನ
ಪ್ರೇಮದಿ ಅಹಲ್ಯೇ ಶಿಲೆಯೊಳು ಭಜಿಸಲು
ಸ್ವಾಮಿ ತಾನೊಲಿದು ಮುಕ್ತಿಯ ಕೊಟ್ಟ ಹರಿಯ ೨

ದಶರಥನಲಿ ಬಂದು ದಶಕಂಠನನು ಕೊಂದು
ವಸುಮತಿಯನು ಪೊರೆದ ಶ್ರೀ ಹರಿಯ
ಪಶುಪತಿ ಸಖನಾದ ಪನ್ನಗಶಯನನ
ಅಸುರರ ತರಿದ ಶ್ರೀ ಚನ್ನಕೇಶವನ ೩

## ೧೮೮

ಭಜಿಸಿ ಕೆಟ್ಟವರು ಉಂಟೇ ಭೂಕಾಂತನ
ಭಜಿಸಲಾರದೆ ಕೆಟ್ಟರು ಪ

ಕುಜನರ ಕಾಲನ ಚರಣವ ನೆನೆದರೆ
ಸುಜನರ ಪಾಪವ ಕ್ಷಮಿಸುವ ಪರಿಯ ಅ.ಪ.

ತರಳ ಧೃವನಿಗೊಲಿದೊ ಸ್ವರಾಜ್ಯವ
ಸರಸದಿ ಪಾಲಿಸಿದ
ದುರುಳ ರಕ್ಕಸನು ಕಂದನನು ಪೀಡಿಸುವಾಗ
ನರಸಿಂಗ ರೂಪದಿ ಪೊರೆದ ಶ್ರೀ ಹರಿಯ ೧

ರಾಮಾವತಾರದಲೀ ದನುಜರ ಕೊಂದು
ನಿಜ ಭಕ್ತಗೊಲಿದವನ
ಕೋಮಲೆ ದ್ರೌಪದಿ ಸಭೆಯೊಳಗಳುತಿರೆ ಮೊರೆ ಕೇಳ್ವ
ಅವಳಗಕ್ಷಯವಿತ್ತ ಪರಿಯ ೨

ಸುಗ್ರೀವನಿಗೊಲಿದೂ ವಾನರ ಭೂಪ ವಾಲಿಯನೂ ತರಿದೂ
ಅಗ್ರಜನನು ಬಿಟ್ಟು ತನ್ನನ್ನು ಸೇರಿದ ಆ ವಿಭೀಷಣನ
ಪೊರೆದ ಕೇಶವನ ೩

## ೧೮೯

ಭಜಿಸುವೆ ಕೇಶವ ದೇವನ
ಗಜನನು ಸಲಹಿದ ರಂಗನ ಪ

ತರಳ ಧೃವನಿಗೆ ರಾಜ್ಯವನಿತ್ತ
ಶರಣರ ಸಲಹುವ ರಂಗನ ೧

ರಾವಣರಾಕ್ಷಸನಾಶ ಶ್ರೀ ಕೃಷ್ಣನ
ದೇವಕಿನಂದನ ರಂಗನ ೨

ಭವರೋಗವ ಪರಿಹರಿಸುವ ದೇವನ
ಪವನಜವಂದಿತ ರಂಗನ ೩

ಸುಜನರ ಪಾಲಿಸಿ ಕುಜನರ ತರಿಯುವ
ಭಜಕರ ಪೊರೆಯುವ ರಂಗನ ೪

ಪನ್ನಗಶಯನನ ಶ್ರೀ ಮಾಧವನ
ಚನ್ನಿಗಕೇಶವ ರಂಗನ ೫

## ೧೯೦

ಯಾಕೆ ಈ ದಾಸನನು ಸಲಹಲೊಲ್ಲೆ
ಶ್ರೀಕಾಂತ ಭಕ್ತನನು ಕಾಯಲೊಲ್ಲೆ ಪ

ತರಳತನದಲಿ ನಾನು ಪಾಪಗಳ ಮಾಡಿದರೆ
ಪರಮಾತ್ಮ ಸದ್ಗುರುವೆ ತಿಳಿದು ಮಾಡಿದನೇ
ನಿರುತ ಯೌವನದಲ್ಲಿ ಪಾಪಗಳ ಮಾಡಿದರೆ
ಅರಿತು ಮಾಡಿದೆನೆಂದು ಬಗೆದೆಯಾ ಹರಿಯೇ ೧

ಈಗ ವಾರ್ಧಿಕ್ಯದಲಿ ಪಾಪಮಾಡಿದೆನೆಂದು
ನಾಗೇಶಶಯನನೇ ಮುನಿದೆಯಾ ಹರಿಯೇ
ಜಾಗುಮಾಡದೆ ನೀನು ಅಜಮಿಳಗೆ ವಲಿದಂತೆ
ಬೇಗನೇ ಸಲಹಯ್ಯ ನಾಮಸ್ಮರಿಸುವೆನೊ ೨

ವರಶೇಷಗಿರಿಯಲ್ಲಿ ನಿರುತನಾಗಿರುವಂಥ
ಹರಿಸೇವೆಯನ್ನು ನಾ ಭಕ್ತಿಯಲಿ ಗೈವೇ
ಹರುಷದಿಂ ಹರಿಯೆಂನ ಪಾಪಗಳ ಕ್ಷಮಿಸುತ್ತ
ಸಿರಿ ಚನ್ನಕೇಶವನೆ ಮುನಿಯದಿರು ತಂದೆ ೩

## ೧೯೧

ಯಾವ ಲೋಕಕೆ ಎನ್ನ ಎಳತಂದೆ ಹರಿಯೇ
ದೇವಕೀ ಕಂದ ಗೋಪಾಲ ನಾನರಿಯೇ ಪ

ನಳಧರ್ಮನೃಪ ಹರಿಶ್ಚಂದ್ರಾದಿಗಳು ಜನಿಸಿ
ಖಳರನ್ನು ದಂಡಿಸೇ ಶಿಷ್ಟರನು ಹರಿಯೇ
ಸಲಹ ಸುಜನರಿಗೆಲ್ಲ ಮಾನವಂ ಕೊಟ್ಟು ತಾ
ವಿಳೆಯ ಸತ್ಯದೊಳಾಳಿದಾ ರಾಜ್ಯವಲ್ಲಾ ೧

ಹಿಂದೆ ದುರ್ಜನರನ್ನು ತರಿಯಲೋಸುಗ ನೀನು
ಅಂದದಿಂದೊಂಬತ್ತು ಅವತಾರವೆತ್ತಿ
ಬಂದು ಸುಜನರ ಪೊರೆದು ಧರ್ಮವನು ನೆಲೆಗೊಳಿಸಿ
ಚಂದದಿಂ ರಕ್ಷಿಸಿದ ಲೋಕವಿದು ಅಲ್ಲಾ ೨

ಮನ್ನಿಸದೆ ಧರ್ಮವನು ನಿತ್ಯಕರ್ಮವ ಬಿಟ್ಟು
ಹೀನ ಪಥಗಳ ಪಿಡಿದು ಬಂಜೆಯನು ಆಸೀ
ಚನ್ನಕೇಶವ ನಿಮ್ಮ ನಾಮ ಸಂಕೀರ್ತನೆಯ
ದೈನ್ಯದಿಂ ಗೈಯದ ರಾಜ್ಯವಿದು ಹರಿಯೇ ೩

## ೧೯೨

ರಕ್ಷಿಸು ಗುರುನಾಥಾ ಕೇಶವ ನೀನೇ
ರಕ್ಷಿಸು ಸಿರಿನಾಥಾ ಪ

ಅಕ್ಷಯ ದ್ರೌಪದಿಗಿತ್ತ ಶ್ರೀಕಾಂತನೇ
ಶಿಕ್ಷಕ ನೀನೇ ಕನಕ ವಂದಿತನೇ ಅ.ಪ.

ತರಳ ಪ್ರಲ್ಹಾದನಿಗೊಲಿದು ಧಾರುಣಿಯಲ್ಲಿ
ಮೆರೆದ ಕಶ್ಯಪುವನ್ನು ಕೆಡಹಿದ ಹರಿಯೇ
ದುರುಳ ಕಂಸನು ತನ್ನ ಪ್ರಜೆಗಳ ಹಿಂಸಿಸೆ
ತರಿದು ಸಜ್ಜನರನ್ನು ಪೊರೆದ ಶ್ರೀಧರನೇ ೧

ಭಜಿಸಲು ಕನಕನು ಉಡುಪಿ ಗ್ರಾಮದಲಾಗ
ರಜನಿ ಮಧ್ಯದಿ ದಾಸಗೊಲಿದ ಶ್ರೀ ಹರಿಯೇ
ಗಜವನ್ನು ರಕ್ಷಿಸಿ ಬಿರುದನು ತೋರಿದ
ಭಜಕರ ಲೋಲನೆ ನೆರೆ ನಾರಾಯಣನೇ ೨

ಕಷ್ಟವ ನೀಗಿ ತಾ ಶಿಷ್ಟರ ಸಲಹಲು
ಶ್ರೇಷ್ಠ ಮೂರುತಿ ರಂಗ ಬಹರೂಪವೆತ್ತೀ
ಶಿಷ್ಟರ ರಕ್ಷಿಸಿ ಭ್ರಷ್ಟರ ಕೆಡಹಿದ
ಸೃಷ್ಟಿಗೀಶನೆ ರಂಗ ಚನ್ನಕೇಶವನೇ ೩

## ೧೯೩

ರಾಮಕೃಪಾಕರ ರಾಮ ದಯಾಪರ
ರಾಮದಿವಾಕರ ರಾಮ ರಾಮ ಪ

ದಶರಥನಂದನ ಋಷಿಕುಲ ಪಾವನ
ದಶಶಿರಭಂಜನ ರಾಮ ರಾಮ ರಾಮ ೧

ಜನಕನ ಜೀವನ ಮುನಿಗಣ ಪಾಲನ
ಧನುಜನಿವಾರಣ ರಾಮ ರಾಮ ರಾಮ ೨

ವಾಲಿಯ ಮರ್ಧನ ವಾಲಿಜ ರಕ್ಷಣ
ಬಾಲ ಸುಪೋಷಣ ರಾಮ ರಾಮ ರಾಮ ೩

ಅಜರಾಮರ ಸಿರಿಭಜಕರವರಹರಿ
ಅಜಪಿತ ನರಹರಿ ರಾಮ ರಾಮ ರಾಮ ೪

ಚನ್ನಿಗರಾಯನೆ ಚಿನ್ಮಯ ರೂಪನೆ
ಚೆನ್ನಕೇಶವನೆ ರಾಮ ರಾಮ ರಾಮ ೫

## ೧೯೪

ರಾಮನ ನಾಮವ ಪ್ರೇಮದಿ ಭಜಿಸಲು
ರಾಮನು ವಲಿಯುವಾ ಬಿಡದೆ ಪಾಲಿಸುವಾ ಪ

ಕಾಮಿತ ವರಗಳ ನೀಯುತ ಭಜಕರ
ಸ್ವಾಮಿಯು ವಲಿದೆಮ್ಮ ನಿರುತ ಪಾಲಿಸುವಾ ಅ.ಪ.

ತರಳರ ಮಾತಿಗೆ ಸೈಯೆಂದು ನುಡಿಯುತ್ತ
ಪರಮ ಸಾಮ್ರಾಜ್ಯದ ಪದವಿಯ ಕೊಡುತ್ತಾ
ಸರಳರ ಹೃದಯವ ನೀಕ್ಷಿಸಿ ಜವದೊಳು
ಕರೆದು ಸಾಯುಜ್ಯದ ಪದವಿಯ ಕೊಡುವಾ ೧

ದುರುಳರ ಸುಖಗಳಿಗಂತಕನಾಗುತ
ಶರಣರ ಪಿಡಿದು ಶಿಷ್ಟರನು ಕಾಯುತ್ತ
ಧರೆಯೊಳು ದುಷ್ಟರು ಶಿಷ್ಟರ ದಣಿಸಲು
ಭರದಿಂದ ಸುಜನರ ಕಷ್ಟವ ತರಿವಾ ೨

ಕೌಸಲೆ ಗರ್ಭದಿ ಬಂದ ಶ್ರೀಹರಿ ತಾನು
ವಾಸುಕಿ ಭಾರವ ನಿಳುಹಲಿಕ್ಕೆ
ವಾಸ ಮಾಡುವನೀಗ ವರ ದೂರ್ವಾಪುರದಲ್ಲಿ
ದಾಸನ ಸಲಹುವ ಕೇಶವನೆಂಬ ೩

## ೧೯೫

ರಾಮ ವಂದಿಪೆ ಗುಣ
ಧಾಮಾ ವಂದಿಪೆ ಘನ
ಶ್ಯಾಮ ವಂದಿಪೆ ರಘು
ರಾಮ ರಾಮ ರಾಮ ಪ

ಬೋದ ಪ್ರದಾಯಕ
ಸಾಧು ಜನಾವಳಿ
ವೇದಾಂಗನುತ ರಘು ರಾಮ ರಾಮ ರಾಮ ೧

ಇಂದ್ರಾದಿನುತ ಗುಣ
ಸಾಂದ್ರಾನತಾವಳಿ
ಮಂದಾರಧರ ಹರಿ ರಾಮ ರಾಮ ರಾಮ ೨

ದಶರಥ ನಂದನ
ದಶಶಿರ ಭಂಜನ
ಶಶಿಕಲ ರಂಜನ ರಾಮ ರಾಮ ರಾಮ ೩

ಸುಜನರ ಪಾಲನೆ
ಕುಜನರ ಕಾಲನೆ
ಭಜಕರ ಲೋಲನೆ ರಾಮ ರಾಮ ರಾಮ ೪

ಅಂಬುಜನಯನನೆ
ಅಬುಜೆರಮಣನೆ
ನಂಬಿದೆ ತಾತನೆ ರಾಮ ರಾಮ ರಾಮ ೫

ಪನ್ನಗಶಯನನೆ
ಚಿನ್ಮಯ ರೂಪನೆ
ಚನ್ನಕೇಶವ ರಾಮ ರಾಮ ರಾಮ ೬

## ೧೯೬

ರಾಮ ರಾಮಯೆಂದು ನೇಮದಿಂದಲಿ ಪಾಡಿ
ಪ್ರೇಮದಿ ನಮಿಸಿರಿ ಕಾಮನ ಪಿತನ ಪ

ಭಾಮೆಗಕ್ಷಯ ವಿತ್ತು ಪ್ರೇಮದಿ ಸಲಹಿದ
ನಾಮವ ಭಜಿಸಿ ರಾಮನ ಪಾದ ಸೇರೀ ೧

ತನುಮನ ಧನದಿಂದ ಚನ್ನಕೇಶವನನ್ನು
ಅನುದಿನ ಭಜಿಸಿ ಚಿನ್ಮಯಪಾದ ಸೇರಿ ೨

ವರದೂರ್ವಾಪುರದಲ್ಲಿ ನಿರುತನಾಗಿದ್ದು ತಾ
ಕರುಣದಿ ಭಕ್ತರ ಪೊರೆವ ಕೇಶವನ ೩

## ೧೯೭

ಲಕ್ಷ್ಮೀ ದೇವಿಯ ಗಂಡ ಹರಧನುರ್ಭಂಗಾ
ರುಕ್ಮಾಂಗ ಧನಪಾಲಾ ಕರುಣಾಂತರಂಗಾ ಪ

ಪೂಜಿಸಿದವರಿಗಭೀಷ್ಟವ ಕೊಡುವಾ
ಪೂಜಿಪ ದಾಸರ ಕಷ್ಟವ ತರಿವಾ
ರಾಜಿಪ ಪಾದವ ನೆನೆಯಲು ವಲಿವಾ
ಸಜ್ಜನರಿರುವಲ್ಲಿ ನಿರುತನಾಗಿರುವಾ ೧

ಸ್ಮಾರನನ್ನು ಪಡೆದ ಮನೋಹರ ಮೂರ್ತಿ
ಶರಣು ಬಂದವರಿಗೆ ವರ ಚಕ್ರವರ್ತಿ
ಧರೆಯಲ್ಲಿ ಪೊಗಳುವೆ ಶ್ರೀಹರಿ ಕೀರ್ತಿ
ಅರಿಯದ ದಾಸಗೆ ಸುಖಗಳ ಭರತೀ ೨

ಪನ್ನಗಶಯನ ಶ್ರೀದಾಸರ ಪೋಷಾ
ಸನ್ನುತ ಕಾವ ಶ್ರೀ ದೂರ್ವಾಪೂರೇಶಾ
ಮನ್ನಿಸಿ ರಕ್ಷಿಸೊ ಭಜಕರ ಪೋಷಾ
ಚನ್ನಿಗ ಕೇಶವದಾಸನಧೀಶಾ ೩

## ೧೯೮

ವಂದಿಪೆ ನಿನಗೆ ಕೇಶವಾ
ತಂದೆ ವಂದಿಪೆ ನಿನಗೆ ಕೇಶವಾ ಪ

ಹಿಂದೆ ತವ ದಿವ್ಯ ಪಾದ ಭಜಿಸಿದ ದಾಸರೆಲ್ಲ
ಹೊಂದಿದರು ಮುಕ್ತಿಯನು ಕೇಶವಾ ತಂದೆ ೧

ದುಷ್ಟರನ್ನು ತರಿಯಲು ಹತ್ತು ರೂಪಗಳನು ತಾಳಿ
ಶಿಷ್ಟರನ್ನು ಸಲಹಿದ ಕೇಶವಾ ತಂದೆ ೨

ಬಂದ ಕಷ್ಟಗಳನು ನೀಗಿ ಶ್ರೇಷ್ಠ ಭಕ್ತಿಯನ್ನು ಕೊಟ್ಟು
ಮುಂದೆ ನೀ ರಕ್ಷಿಸೋ ಕೇಶವಾ ತಂದೆ ೩

## ೧೯೯

ವೋ ರಂಗ ಶ್ರೀರಂಗ ಹಾ ರಂಗ ಹೇ ರಂಗ
ಬಾ ರಂಗ ಶರಭಂಗ ಕರುಣಾಂತರಂಗ ಪ

ಗೌತಮ ಭಾರ್ಯೆಯು ಶಿಲೆಯಾಗಿ ಭಜಿಸಲು
ಪ್ರೀತಿಯಿಂದವಳನು ಪೊರೆದ ಶ್ರೀರಂಗ
ಪೂತನಿ ತಾಯಿಯ ರೂಪದಿ ಮೊಲೆ ಕೊಡೆ
ಪಾತರೆ ದುಡುಹಿದ ಶ್ರೀರಂಗ ೧

ಧೀರ ಪೌಂಡ್ರಿಕನು ಹರಿ ನಿನ್ನ ಕೆಣಕಲು
ದೀರನ ಕೆಡಹಿದ ಶ್ರೀರಂಗ
ವಾರಣ ವದರವಿ ನಕ್ರನ ಸಿಗಿದಿಹ
ಧಾರುಣಿ ಸಲಹಿದ ಶ್ರೀರಂಗ ೨

ದೀನರ ಸಲಹುವ ಭಜಕರ ಪೊರೆಯುವ
ದೀನ ದೀನೇಶನೆ ಶ್ರೀರಂಗ
ಸನ್ನುತ ದೂರ್ವಾಪುರದಿ ನಿತ್ತಿರುವಂಥ
ಚನ್ನ ಕೇಶವ ಸ್ವಾಮಿ ಶ್ರೀ ರಂಗ ೩

## ೨೦೦

ಶ್ರೀ ರಾಮಚಂದ್ರ ಧುರ
ಧೀರಾವನೀಂದ್ರವರ
ಕಾರುಣ್ಯ ರೂಪ ರಘು ರಾಮ ರಾಮ ರಾಮ ಪ

ಲೋಕೈಕ ಪಾಲಕ
ಶೋಕ ವಿನಾಶಕ
ನಾಕಾಧಿಪತಿನುತ ರಾಮ ರಾಮ ರಾಮ ೧

ಸುಂದರ ರೂಪಶ್ರೀ
ಮಂದಾರ ಪದನುತ
ಬೃಂದಾರಕಾ ಸೀತಾ ರಾಮ ರಾಮ ರಾಮ ೨

ಪಾವನ ಚರಿತನೆ
ಭಾವಜ್ಞ ನರಹರಿ
ಶ್ರೀವತ್ಸ ಲಾಂಛನ ರಾಮ ರಾಮ ರಾಮ ೩

ದೂರ್ವಾಪ್ರರೇಶನೆ
ದೂರ್ವಾಸವಂದಿತ
ಸರ್ವೇಶ ಕೇಶವ ರಾಮ ರಾಮ ರಾಮ ೪

## ೨೦೧

ಶ್ರೀ ರಾಮ ರಘುರಾಮ ಭಾರ್ಗವ ರಾಮಾ
ವಿರಚಿತ ಕಾಮ ಮೇಘ ಶ್ಯಾಮ ರಾಮಾ ರಾಮಾ ಪ

ದಶರಥ ರಾಮ ಶ್ರೀರವಿಕುಲ ಸೋಮಾ
ದಶರೂಪಧರ ರಾಮ ಕೌಸಲೆ ರಾಮಾ ರಾಮಾ ೧

ಸಾಮಗಾನ ಪ್ರೇಮ ಕಾಂಚನ ಧಾಮಾ
ರಾಮ ನಿಸ್ಸಿಮಾ ಶ್ರೀ ಹಲಧರ ರಾಮಾ ರಾಮಾ ೨

ರಾಮ ಸೀತಾರಾಮ ಸದ್ಗುಣಧಾಮಾ
ರಾಮ ಶ್ರೀ ಚೆನ್ನಕೇಶವನೆಂಬ ರಾಮಾ ರಾಮಾ ೩

## ೨೦೨

ಸ್ವಾಮಿ ನೀನೇ ತಂದೆ ನೀನೇ ಯೆನ್ನಯ ಬಂಧು
ಪ್ರೇಮದಿಂದಲಿ ಯೆನ್ನ ಸಲಹಯ್ಯ ಬಂದೇ ಪ

ಐದು ಹುಲಿಗಳು ಬಂದು ಗಾರುಮಾಡುತಲೆನ್ನ
ಕೈದಿನಲ್ಲಿಟ್ಟಿಹವು ಬಿಡಿಸಯ್ಯ ಹರಿಯೇ
ಕೈದಿನಲ್ಲಿಟ್ಟೆನ್ನ ಕೆಲಸಕ್ಕೆ ಎಳತಂದು
ಬಾಧೆಯ ಕೊಡುತಿಹವು ಬಿಡಿಸಯ್ಯ ಹರಿಯೇ ೧

ಭವವೆಂಬ ಮೃಗರಾಜ ಬಗೆಯುತ್ತ ದೇಹದ
ಜವದಿಂದ ತಿನ್ನುವಾ ಬಿಡಿಸಯ್ಯ ಹರಿಯೇ
ಅವನಿಯೊಳು ಹುಟ್ಟು ಸಾವೆಂಬ ಗಜನಕ್ರಗಳು
ತಿವಿದೆನ್ನ ಹೆಳೆಯುದರು ಬಿಡಿಸಯ್ಯ ಹರಿಯೇ ೨

ಆರು ವೈರಿಗಳೆನ್ನ ಕಾಯವನು ಪಿಡಿದೊಯ್ದು
ಯೆರಿಸೀ ಸುಡುತಿಹರು ಬಿಡಿಸಯ್ಯ ಹರಿಯೇ
ನಾರೀ ಮಣೀಯೆಂಬ ವಿಷವೆನ್ನ ಮೋಹಿಸುತ
ಮಾರಿ ವಶಮಾಡುವದು ಬಿಡಿಸಯ್ಯ ಹರಿಯೇ ೩

ಅನ್ಯರನು ಕಾಣೆ ನಾದೇವ ನಿನ್ನುಳಿದೀಗ
ನೀನೆನ್ನ ಅಪರಾಧ ಕ್ಷಮಿಸೋ ಮರೆಹೊಕ್ಕೇ
ಪನ್ನಗಾಶನ ಗಮನ ಶ್ರೀ ಚನ್ನಕೇಶವನೆ
ಸನ್ನುತದಾಸನನು ಬಾಲನೆಂತೆಣಿಸೋ ೪

## ೨೦೩

ಸುರನರವಂದಿತ ಪಾಹಿ ಮುಕುಂದ
ಶರಣರ ಪಾಲಕ ತ್ರಾಹಿ ಗೋವಿಂದ ಪ

ಅಶನವಸನ ನೀಡಿ ಪಾಹಿ ಮುಕುಂದ
ದಶರಥ ನಂದನ ತ್ರಾಹಿ ಗೋವಿಂದ
ಅಜಹರ ಪೂಜಿತ ಪಾಹಿ ಮುಕುಂದ
ಭಜಿಸುವೆ ಚರಣವ ತ್ರಾಹಿ ಗೋವಿಂದ ೧

ಶಂಖ ಚಕ್ರಾಂಕಿತ ಪಾಹಿ ಮುಕುಂದ
ಪಂಕಜ ಲೋಚನ ತ್ರಾಹಿ ಗೋವಿಂದ ೨

ಇಂದಿರ ರಮಣನೇ ಪಾಹಿ ಮುಕುಂದ
ಚಂದದಿ ದಾಸನ ತ್ರಾಹಿ ಗೋವಿಂದ ೩

ಪನ್ನಗಶಯನನೇ ಪಾಹಿ ಮುಕುಂದ
ಚನ್ನಕೇಶವ ಸ್ವಾಮಿ ತ್ರಾಹಿ ಗೋವಿಂದ ೪

## ೨೦೪

ಹಣ್ಣ ತಿನ್ನಬಾರದೇ ಭಕ್ತಿಯೆಂಬ
ಹಣ್ಣ ಸವಿಯ ಬಾರದೇ ಪ

ಹಣ್ಣನ್ನು ತಿಂದರೆ ಕೇಶವನೊಲಿಯುವಾ
ಚನ್ನಕೇಶವ ಸ್ವಾಮಿ ಬಿಡದೆ ಪಾಲಿಸುವಾ ಅ.ಪ.

ಪ್ರೀತಿಯೆನ್ನುವಂಥ ಬೀಜವನ್ನೇ ಬಿತ್ತಿ
ಭೂತ ದಯೆಯೆಂಬುವ ವೃಕ್ಷವ ಬೆಳೆಸೀ
ಆತುರದಲ್ಲಿ ಪರೋಪಕಾರವೆಂಬ
ನೀತಿಯ ನೀರನ್ನು ನೇಮದೊಳೆರೆದೂ ೧

ಅನುದಿನ ದಾನಧರ್ಮಗಳ ಟೊಂಗೆಗಳೇರಿ
ತನುಮನ ಧನದಿಂದ ದೈನ್ಯರ ಸಲಹಿ
ಘನತರ ಸ್ವಾರ್ಥ ತ್ಯಾಗವುಯೆಂಬ ಪರ್ಣವ
ನೆನೆದು ಕೃತಜ್ಞತೆ ಕುಸುಮವ ಪಡೆದೂ ೨

ವರತರ ದೇವಾಂಶ ಗುಣದಿಂದ ಬೆಳೆದಿರ್ಪ
ಹರಿಭಕ್ತಿಯೆನ್ನುವ ಫಲವನ್ನೇ ಕೊಯ್ದು
ಸರಸದಿ ಕೀರ್ತನೆ ಭಜನೆ ಸೂತ್ರಗಳಿಂದ
ಪರಮ ಭಕ್ತೀಯೆಂಬ ಹಣ್ಣನು ತಿಂದೂ ೩

ಧರೆಯಲ್ಲಿ ಸಿಗುವಂಥ ಹಣ್ಣನು ಸವಿದರೆ
ನಿರುತ ತೃಪ್ತಿಯು ಆಗಲಾರದು ದೇವಾ
ಭರದಲಿ ಹರಿಭಕ್ತಿಯೆಂಬ ಅಮೃತ ಹಣ್ಣ
ಹರುಷದಿ ತಿನ್ನಲು ಘನಮುಕ್ತಿ ದಿಟವು ೪

## ೨೦೫

ಹರಕೆಯ ಮಾಡಿಕೊಳ್ಳೀ ಕೇಶವನಿಗೆ
ಹರಕೆಯ ಕಟ್ಟಿಕೊಳ್ಳೀ ಪ

ಹರಕೆಯ ತೀರಿಸಿಷ್ಟಾರ್ಥವ ಪಡಕೊಳ್ಳೀ
ಹರುಷದಿ ಹರಿಗಾತ್ಮವರ್ಪಿಸಿಕೊಳ್ಳೀ ಅ.ಪ.

ಭಜನೆಯ ಮಾಳ್ಪೆನೆಂದೂ ಕೇಶವನಿಗೆ
ಭಜನೆಯರ್ಪಿಸುವೆನೆಂದೂ
ಅಜಪಿತ ಶ್ರೀಹರಿದಾತನಾಗಿರುವಾಗ
ಭಜಕರು ಕೊಡುವ ಭೋಜನ ಭಕ್ಷವ್ಯಾಕೇ ೧

ಸ್ಮರಣೆಯ ಮಾಳ್ಪೆನೆಂದು ಕೇಶವನಿಗೆ
ಸ್ಮರಣೆಯರ್ಪಿಸುವೆನೆಂದೂ
ನರಹರಿಯನುದಿನ ನಿತ್ಯ ತೃಪ್ತನುಯಿರೆ
ಬರಿದೆ ನೈವೇದ್ಯವ ಸಲಿಸುವುದ್ಯಾಕೇ ೨

ಸೇವೆಯ ಮಾಳ್ಪೆನೆಂದು ಕೇಶವನಿಗೆ
ಸೇವೆಯರ್ಪಿಸುವೆನೆಂದೂ
ಭಾವಜನಯ್ಯನೆ ತ್ರಿಜಗಪಾಲಕನಾಗಿ
ದೇವತಾನಿರುತಿರೆ ಭವಭಯವ್ಯಾಕೇ ೩

ವಂದನೆ ಮಾಳ್ಪೆನೆಂದು ಕೇಶವನಿಗೆ
ವಂದನೆ ಕೊಡುವೆನೆಂದೂ
ಚಂದದಿ ಹರಿತಾನೇ ಸೃಷ್ಟಿಗೀಶನುಯಿರೆ
ಅಂದದಿ ಕೊಡುವ ದಾನಗಳವಾಗ್ಯಾಕೇ ೪

ಆತ್ಮವ ಕೊಡುವೆನೆಂದೂ ಕೇಶವನಿಗೆ
ಅತ್ಮವರ್ಪಿಸುವೆನೆಂದೂ
ಸಾತ್ವಿಕ ಜನವಂದ್ಯ ದೂರ್ವಾಪುರದೊಳಿರೆ
ಮತ್ಯಾಕೆ ಯೋಚನೆ ಭಕ್ತಿಯುಳ್ಳವಗೇ ೫

## ೨೦೬

ಹರಿಯೇ ನೀನೇ ಗತಿ ಕೇಶವನೇ
ಹರಿಯೇ ನೀನೇ ಗತಿ ಪ

ಸುರನರ ವಂದ್ಯನೆ ಪರಮ ಪಾವನನೇ
ಗಿರಿಪುರವಾಸನೇ ವಸುಮತಿ ಪತಿಯೇ ೧

ಅಂಬುಜಲೋಚನ ವಸುದೇವ ಸುತನೇ
ತುಂಬೂರ ನಾರದ ಗಾನ ಸೇವಿತನೇ ೨

ಕೇಶವ ರೂಪನೇ ಜಾನಕಿ ಪ್ರಿಯನೇ
ವಾಸುಕಿಶಯನನೇ ಚನ್ನ ಕೇಶವನೇ ೩

# ಲೋಕನೀತಿಯ ಹಾಡುಗಳು

## ೨೦೭

ಆರು ಹಿತರಾದಾರು ಈ ವಿಶ್ವದೊಳಗೆ
ಭೂರಿ ಭಕ್ತಿಲಿಗೈದ ಪುಣ್ಯ ಕೃತಿ ಹೊರತು ಪ

ಪಿತನಲ್ಲ ಸುತನಲ್ಲ ರತಿಯಲ್ಲ ಸುತೆಯಲ್ಲ
ಅತಿ ಪ್ರೀತಿಯಿಂ ಪೊರೆದ ನಿಜಮಾತೆಯಲ್ಲಾ
ಸುತನಪೇಕ್ಷಿಸಿ ಹೆದರಿ ಅಜಮಿಳನು ಕರೆಯಲ್ಕೆ
ಪತಿತ ಪಾವನ ಹರಿಯ ನಾಮ ಹಿತವಾಯ್ತು ೧

ಧನವಲ್ಲ ಸಿರಿಯಲ್ಲ ಬಹು ಬೆಳೆದ ಮೈಯಲ್ಲ
ಹಣ ರಾಶಿ ಗಳಿಸುವ ದುರ್ಬುದ್ಧಿಯಲ್ಲ
ಮನ ಮತ್ಸರಗಳಲ್ಲ ಕಾಮಕ್ರೋಧಗಳಲ್ಲ
ತನುವಲ್ಲ ಡಂಬರದ ವೇದಾಂತವಲ್ಲ ೨

ತರಳನಾಗಿಹ ಧೃವಗೆ ತರುಣ ಪ್ರಲ್ಹಾದನಿಗೆ
ಕರಿರಾಜ ಹನುಮಾದಿ ನಿಜ ಭಕ್ತರಿಂಗೇ
ವರಧರ್ಮ ಪುತ್ರನಿಗೆ ಮಧ್ಯ ಪಾಂಡವನಿಗೇ
ಪರಮ ಪತಿವ್ರತಾ ರಮಣಿ ದ್ರೌಪದಿಗೇ ೩

ಧರಣಿಯನು ಹೊತ್ತಿರುವ ಆದಿಶೇಷಗೆ ಮತ್ತೆ
ನಿರುತವೂ ಭಜಿಸಿದ ಪರಮ ದಾಸರಿಗೆ
ಕರುಣಾಳು ಮೆಚ್ಚಿತಾ ಸಾಯುಜ್ಯವನ್ನಿತ್ತ
ಸಿರಿಯರಸ ಶ್ರೀಹರಿಯ ಭಜನೆಯೊಂದುಳಿದು ೪

ಜನ್ಮಬಂಧವ ನೀಗಿ ಪರಮ ಪದವಿಯ ಕೊಡುವ
ಸನ್ನುತವು ನಿಜ ಸೌಖ್ಯವನ್ನು ಕರುಣಿಸುವ
ಪ್ರಾಣಿಯಲಿ ಆತ್ಮನಲಿ ಶ್ರದ್ಧೆ ಹುಟ್ಟಿಸುವಂಥ
ಚನ್ನಕೇಶವ ಸ್ವಾಮಿ ಭಕ್ತಿಯೊಂದುಳಿದು ೫

## ೨೦೮

ಕಾಯಬೇಕೆನ್ನ ಕೇಶವನೇ ಬಂದು
ಪಾಯವನರಿಯೆನು ಹರಿಯೇ ಮಾಧವನೇ ಪ

ಭವಸಾಗರವ ದಾಟಿ ಬಂದೇ ಇನ್ನು
ಭವವನ್ನು ಬಂಬಿದೆ ಹರಿಯೇ ಶರಣೆಂದೆ ಅ.ಪ.

ಜವನ ಬಾಧೆಗೆ ಅಂಜಿ ಬಂದೇ
ಭವರೋಗ ವೈದ್ಯನೇ ರಕ್ಷಿಸೋ ತಂದೇ ೧

ಯೋನಿಗೆ ಬರಲಾರೆ ಹರಿಯೇ ಬಂದು
ಮೌನದಿ ವೇಳೆಯನನ್ಯರೊಳ್ತಳೆಯೇ ೨

ಜನ್ಮವ ಕಳದೆನು ಬರಿದೇ
ಗಾನಲೋಲನೆ ಎನ್ನ ರಕ್ಷಿಸೋ ತಂದೇ ೩

## ೨೦೯

ಕೇಶವನೆಂದು ಕ್ಲೇಶವ ನೀಗಿರಿ
ಕೇಶವನೆಂದು ಭವವನ್ನು ಪ

ಮಾಧವನೆಂದು ಪಾಪವ ಕಳೆಯಿರಿ
ಶ್ರೀಧರನೆಂದು ಶ್ರಮವನ್ನು ೧

ರಘುಪತಿಯೆಂದು ಪಾಶವ ಕಡಿಯಿರಿ
ನಗಧರನೆಂದು ಭಯವನ್ನು ೨

ಶ್ರೀಪತಿಯೆಂದು ಮತ್ಸರ ತ್ಯಜಿಸಿರಿ
ಮಾಪತಿಯೆಂದು ಖಲರನ್ನು ೩

ವಾಮನನೆಂದು ಕಾಮವ ತ್ಯಜಿಸಿರಿ
ರಾಮಯೆಂದು ಸುಳ್ಳನ್ನು ೪

ಶ್ರೀ ಸಖನೆಂದು ಸ್ವಾರಾಜ್ಯ ಪಡೆಯಿರಿ
ದಾಶರಥೇಯಂದು ಮುಕ್ತಿಯನು ೫

## ೨೧೦

ತಡೆಯುವುದ್ಯಾಕಯ್ಯಾ ಹರಿಯೆನ್ನ ಕಯ್ಯಾ
ಬಿಡು ಬಿಡು ಹರಿಪಾದ ಸೇರುವೆನಯ್ಯಾ ಪ

ಅರಿಗಳನೆಲ್ಲರ ಕಡಿದು ನಾ ಬಂದೇ
ಶರಣೆಂದು ಭವಕೆಲ್ಲ ಇಂದು ನಾ ಬಂದೇ ೧

ತುಂಟರೆಲ್ಲರನ್ನು ಗೆದ್ದು ನಾ ಬಂದೇ
ಬಂಟನಾಗಲು ಇಂದು ಶರಣೆಂದು ಬಂದೇ ೨

ಸನ್ನುತ ಹರಿಸೇವೆ ಮಾಡಲು ಬಂದೆ
ಚನ್ನಕೇಶವ ಸ್ವಾಮಿ ಶರಣೆಂದು ತಂದೇ ೩

## ೨೧೧

ದಾಸ ದಾಸರು ಪೇಳುತಿಹರಲ್ಲಾ ಕೇಶವಾ ಎಂದು
ತಾಸು ತಾಸಿಗೆ ಪೇಳುತಿಹರಲ್ಲಾ ಪ

ರಾಮನೆಂಬರು ನಿಮಿಷ ನಿಮಿಷಕೆ
ನೇಮದಿಂದಲಿ ಹರಿಯ ಭಜಿಪರು
ರಾಮನಾಮವ ಹಲವು ವಿಧದಲಿ
ಪ್ರೇಮದಿಂದಲಿ ಸ್ಮರಿಸುತಿಹರು ೧

ಮಾತು ಮಾತಿಗೆ ಕೃಷ್ಣಯೆಂಬರು
ನೀತಿ ನೀತಿಗೆ ವಿಠಲಯೆಂಬರು
ಸೇತು ಬಂಧನ ಸ್ವಾಮಿ ನಾಮವ
ನಿತ್ಯ ನುಡಿಯಲಿ ನೆನೆಯುತಿಹರು ೨

ಕಾಲ ಕಾಲಕೆ ಶೇಷಶಾಯಿಯ
ನೀಲರೂಪನ ನಾಮ ಸವಿಯುತ

ಬಾಲವಾಮನ ಮೂರ್ತಿ ಕೀರ್ತನೆ
ವೇಳೆ ವೇಳೆಗೆ ಮಾಡುತ ೩

ದೇವಗುಡಿಯಲಿ ನಿತ್ಯ ಮಾರ್ಗದಿ
ನಾವೆ ರೂಪವ ಧರಿಸಿ ಭವದೊಳು
ಭಾವಾತೀತನ ನಾಮ ಧ್ಯಾನಿಸಿ
ರಾವಣಾಂತ ಕನಡಿಯ ಸೇರುವ ೪

## ೨೧೨

ದಾಸನಾಗಬೇಕು ಶ್ರೀಕಾಂತನ ದಾಸನಾಗಬೇಕು ಪ

ದಾಸನಾಗಬೇಕು ವಾಸುಕಿ ಶಯನನ
ಸಾಸಿರ ನಾಮದಿ ಮೆರೆವ ಕೇಶವನ ಅ.ಪ.

ಶಂಖ ಚಕ್ರಗಳನ್ನು ಕರದೊಳು ಧರಿಸಿದ
ಪಂಕಜ ರಮಣ ಶ್ರೀ ಗೋವಿಂದನ
ಪಂಕಜ ಲೋಚನ ಪರಮ ಪಾವನನ
ಪಂಕಜೋದ್ಭವ ಪಿತನಾದ ಶ್ರೀಧರನ ೧

ನವನೀತ ಚೋರನ ವಸುದೇವ ತನಯನ
ಭವರೋಗ ವೈದ್ಯನ ಶರಣ ರಕ್ಷಕನ
ರವಿ ಕೋಟಿ ತೇಜನ ದಶರಥ ತನುಜನ
ಪವನಜನೊಡೆಯನ ಜಾನ್ಹಕಿ ಪ್ರಿಯನ ೨

ದನುಜರ ತರಿಯುವ ಪ್ರಣವ ಸ್ವರೂಪನ
ಅನುದಿನ ಭಕ್ತರ ಪೊರೆವ ಮಾಧವನ
ಚಿನುಮಯ ರೂಪನ ಕನಕ ಸೇವಿತನ
ಸನಕಾದಿ ವಂದಿತ ಚನ್ನಕೇಶವನ ೩

## ೨೧೩

ನಮಿಸುವೆನು ಭಕ್ತಿಯಲಿ ಚನ್ನಕೇಶವನೇ
ಅಮಿತ ಪಾವನ ಮೂರ್ತಿ ಅಜಸುರಾರ್ಚಿತನೇ ಪ

ಕರಿರಾಜ ಖಲನಕ್ರ ಭಾಧೆಯಿಂ ಮರೆಹೊಗಲು
ಕರಿಯನ್ನು ಸಲಹಿ ನಕ್ರಕೆ ಮೋಕ್ಷವಿತ್ತೇ
ಕರು ನೃಪತಿಯನುಜ ದ್ರೌಪದಿ ಮಾನ ಕಳೆಯುತಿರೆ
ಶರಣೆಂದ ಮಾನಿನಿಗೆ ಅಕ್ಷಯವನಿತ್ತೇ ೧

ಬಂಧುಗಳ ಕೊಂದು ಕುಲ ನಿರ್ಮೂಲ ಮಾಡಿರುವ
ಮಂದ ಮಾರುತನ ತನಯ ನಿಗೊಡೆಯನಾದೇ
ಮಂದರವ ಪೊತ್ತೆ ನೀ ಸುರರಿಗಮೃತವ ನಿತ್ತೆ
ಚಂದದಿಂದಜಮಿಳಗೆ ಅಂತ್ಯದಲಿ ವಲಿದೇ ೨

ದಾಸಗೊಲಿಯುವಿಯಂತೆ ಭಕ್ತಜನರಿಗೆ ನಿತ್ಯ
ಭಾಸವಾಗುವಿಯಂತೆ ವಿಶ್ವರೂಪದಲ್ಲಿ
ದಾಸನಾಗುವೆ ಭಜಿಪ ಭಕ್ತಿಯನು ನೀಡೆನ್ನ
ಕೇಶವನೆ ಸಲಹಯ್ಯ ಹೊಲೆ ದಾಸನೆಂದೂ ೩

## ೨೧೪

ನಾನೇನೂ ಮಾಡಲಾರೆ ರಂಗಯ್ಯ
ನೀನೆನ್ನ ಸಲಹ ಬೇಕು ಪ

ಗಾನಲೋಲನ ನಾಮ ಭಜನೆಯೊಂದುಳಿದು ನಾ
ನನ್ಯರೀತಿಯ ಕಾಣೆ ಸಲಹಯ್ಯ ಹರಿಯೇ ಅ.ಪ.

ತರಳಾ ಧ್ರುವನಂತೆ ತಪನ ನಾನರಿಯೆನು
ಸರಳೆ ದ್ರೌಪದಿಯಂತೆ ಸ್ತೋತ್ರವನರಿಯೇ
ಹರಿದಾಸರಂತೆ ದಾಸತ್ವ ನಾನರಿಯೆನು
ಪರಮ ಸೇವಕರಂತೆ ಸೇವೆಯ ನರಿಯೇ ೧

ಅಸುರನಂದನನಂತೆ ಕೀರ್ತನೆಯರಿಯೆನು
ವಸುಧೀಶನಂತೆ ನಾ ವ್ರತಗಳನರಿಯೇ
ವಸುಮತಿಯಂತೆ ನಾ ಯಾಚನೆಯರಿಯೆನು
ಋಷಿ ವೃಂದದಂತೆ ನಾ ಭಕ್ತಿಯನರಿಯೇ ೨

ಸಿರಿಯಂತೆ ನಿನ್ನನು ಸೇವಿಸಲರಿಯನು
ಕರಿಯಂತೆ ಸ್ಮರಣೆಯ ಮೊದಲು ನಾನರಿಯೆ
ಸುರಮುನಿಯಂತೆ ನಾ ಗಾಯನವರಿಯೆನು
ಸಿರಿ ಚನ್ನಕೇಶವ ಭಜನೆಯನರಿವೇ ೩

## ೨೧೫

ಪಿಡಿಯಿರಿ ಪಿಡಿಯಿರಿ ಹರಿ ಚರಣವನು
ಪಡೆಯಿರಿ ಪಡೆಯಿರಿ ಹರಿ ಕರುಣವನು ಪ

ಸ್ಮರಶರ ಬಾಧೆಗೆ ಸಿಲುಕದೆ ಜನರೇ
ಭರದಲಿ ಶ್ರೀ ಹರಿ ಸೇವೆಯನು
ನಿರುತವು ಗೈಯುತ ಕೇಶವನಾಮವ
ಹರುಷದಿ ಸ್ಮರಿಸುತ ಭಜಿಸುತಲೀ ೧

ದನುಜ ಭಂಜನನಾದ ಕೇಶವ ಸೇವೆಯ
ತನು ಮನ ಧನದಿಂದ ಗೈಯುತಲೀ

ಅನುದಿನ ಶ್ರೀ ಹರಿ ಕೀರ್ತನೆ ಮಾಡುತ
ಮನುಜ ರಂಜನನನ್ನು ಸವಿಸುತಲೀ ೨

ಸುಜನರ ಪಾವನ ಶರಣರ ತಾತನ
ಕುಜನರ ಕಾಲನ ಆದರದೀ
ಭಜನೆಯ ಮಾಡುತ ದೂರ್ವಾಪುರವನು
ಪ್ರಜಸಿದ ಕೇಶವನೂ ೩

## ೨೧೬

ಬಿನ್ನವೆನ್ನೆಣಿಸದಿರು ಎಲೆ ಮಾನವಾ
ಚನ್ನಕೇಶವ ಸ್ವಾಮಿ ಒಲಿದು ಪಾಲಿಸುವಾ ಪ

ವಸುಧೆಯಲಿ ಚಲಿಸುತಿಂತ ಸಕಲ ಜಂತುಗಳೆಲ್ಲ
ಹಸನಾಗಿ ತಿಳಿಯದೆ ನಿನ್ನಾತ್ಮವೆಂದು
ಹಸಿವೆ ತೃಷೆ ಕ್ಲೇಶಗಳು ಮುರಿದೊಗೆವ ಜೀವವನು
ಕಸಕಸರಿ ಮಾಡದಿರು ಪರರಾತ್ಮವೆಂದು ೧

ಅವರಿವರು ಬಂಧುಗಳು ಅಪ್ತೇಷ್ಟ ಸಹೃದರು
ಇವರವರು ದೂಷಕರು ಪರಜಾತಿಯೆಂದು
ಸವಿಸುತಲಿ ಮನಸನ್ನು ಪರಪಂಚವೆನಿಸುತ್ತ
ಭವವನ್ನೆ ಸೆಲೆ ನಂಬಿ ಪರರಾತ್ಮವೆಂದು ೨

ದಾಸದಾಸರಿಗೆಲ್ಲ ವಂದನೆಯ ಮಾಡುತ್ತ
ದಾಸರೆಲ್ಲರು ಜಗದಿ ಏಕಾತ್ಮರೆಂಬ
ವಾತನೆಯ ನಂಬದಲೆ ಬಿನ್ನಾತ್ಮರೆಂದೆಣಿಸಿ
ವಾಸುಕೀಶಯನನೂ ಭಿನ್ನಾತ್ಮನೆಂದು ೩

## ೨೧೭

ಯಾರಿಗೆ ದಾರೋ ಗೋಡೆಗೆ ಮಣ್ಣು
ಮಾರಿಯರೆಲ್ಲರು ಶ್ರೀ ಹರಿಯೇ ಪ

ಸತಿಯಲ್ಲ ಸುತರಲ್ಲ ರತಿಯಲ್ಲ ಮತಿಯಲ್ಲ
ಸ್ಥಿತಿಯಲ್ಲ ದೇವಾ ನಿನ್ನುಳಿದು ೧

ಅಂಬುಜಲೋಚನ ಪರಮ ಪುರುಷನ ಭವ
ಅಂಬುಜೆರಮಣಾ ನಿನ್ನುಳಿದು ೨

ನಂಬಿದ ಭಕ್ತರ ಸಲಹುವ ಹರಿಯೇ
ಸಂಭ್ರಮದಾತ್ಮಗೆ ನಿನ್ನುಳಿದು ೩

ನರಹರಿ ಭಕ್ತಿ ಮಾಡಿದ ಧರ್ಮ
ಸರಸದಿ ಪರಹಿತವನ್ನುಳಿದು ೪

ಹಿಡಿಯುವೆ ಮುಕ್ತಿಯ ಮಾರ್ಗವನೀಗ
ಪಡೆವೆನು ಸುಖವ ಕೇಶವನೇ ೫

## ೨೧೮

ಸ್ವಾಮಿ ನಿನ್ನಯ ಪಾದ ನಿಜವಾಗಿ ಕಂಡೆನು
ಪ್ರೇಮದಿಂದಲಿಯೆನ್ನ ಸೇರಿ ಕೊಂಡಾಡೋ ಪ

ನೀಲವರ್ಣದಿ ನಿತ್ಯ ನಲಿಯುತ್ತಲಿರುವದು
ಕಾಲಕಾಲಕೆ ಮತ್ತೆ ಸೇವೆಗೊಳುವದು
ಬಾಲರು ಪಿಡಿದರೆ ಇಷ್ಟವ ಕೊಡುವದು
ಓಲೈಸಿ ಭಕ್ತಗೆ ವರವನೀಯುವದು ೧

ಪಾದ ಮಧ್ಯದಿ ಪದ್ಮ ರೇಖೆಯ ಕಂಡೆನು
ಸಾಧು ಸಜ್ಜನರು ಪೂಜೆಯ ಮಾಡುವುದನು
ಖೇದವ ನೀಗುವ ಬೆರಳನು ಕಂಡೆನು
ಆದ್ಯಂತವಿಲ್ಲದೆ ನಿರುತವಾದುದನು ೨

ಮನದಣಿ ನೋಡಿದೆ ಪಾದಯುಗ್ಮಗಳನ್ನು
ಮನಲೇಪ ಮಾಡಿದೆ ಹರಿಪಾದಗಳಿಗೇ
ಅನುದಿನ ದೂರ್ವಾಪುರದಿ ನೆಲೆಸಿರುವಂಥ
ಘನಕೋಟಿ ತೇಜದ ಕೇಶವ ಪದವ ೩

## ೨೧೯

ಹರಿನಾಮ ಮರೆಯ ಬೇಡಯ್ಯ
ಪರಿ ದುರಿತಗಳನ್ನು ಅದು ನೀಗುವುದಯ್ಯಾ ಪ

ತರಳಪ್ರಲ್ಹಾದನಿಗೊಲಿದ ನಾಮವುಯಿದು
ದುರುಳ ರಕ್ಕಸರನ್ನು ತರಿದ ನಾಮವೋ ೧

ನಿರುತದಿ ಭಕ್ತರಿಗೊಲಿವ ನಾಮವುಯಿದು
ಸರಸದಿ ಭಜಕರ ಪೊರೆವ ನಾಮವೋ ೨

ಭಾಮೆಗಕ್ಷಯವಿತ್ತ ಪರಮನಾಮವುಯಿದು
ಪ್ರೇಮದಿ ದಾಸರಿಗೊಲಿವ ನಾಮವೋ ೩

ಕಾಮಿತ ವರಗಳನೀವ ನಾಮವುಯಿದು
ಸೋಮಶೇಖರ ನಿತ್ಯ ಭಜಿಪ ನಾಮವೋ ೪

ದಶರೂಪ ಧರಿಸಿದ ದಿವ್ಯ ನಾಮವುಯಿದು
ದಶಕಂಠನನು ಕೊಂದ ಶ್ರೀನಾಮವೋ ೫

ಕೇಶವ ರೂಪದಿ ಮೆರೆವ ನಾಮವುಯಿದು
ಪಾಶವ ಕಡಿಯುವ ನಿಜ ನಾಮವೋ ೬

ವರ ದೂರ್ವಾಪುರದ ಶ್ರೀಹರಿಯ ನಾಮವುಯಿದು
ಮರೆಯದೆ ಭಕ್ತರ ಪೊರೆವ ನಾಮವೋ ೭

ಕರುಣದಿ ಶರಣರ ಕಾಮ ನಾಮವುಯಿದು
ಸಿರಿ ಚನ್ನಕೇಶವನೆಂಬ ನಾಮವೋ ೮

## ಆತ್ಮನಿವೇದನೆ

## ೨೨೦

ಆತನೇ ದಾತನು ಯೆತ್ತಿಕೊಡುವವನು
ಭೂತದಯೆಯುಳ್ಳಂಥ ಪುಣ್ಯಾತ್ಮನು ಪ

ನಿಂದು ಕೀರ್ತಿಯ ಪಾಡೆ ದೇಹಿಯನ್ನುತ ಬೇಡೆ
ಸಿಂಧು ಜಲದಲಿ ಮಿಂದು ಭಜಿಸಲಾಗ
ಬಂಧನವ ಪರಿಹರಿಸಿ ಬಹು ಪ್ರೀತಿಯಿಂದೆನಗೆ
ಬಂದಿರುವ ಕಷ್ಟಗಳ ನೀಗುವರು ಯಾರೋ ೧

ನಿತ್ತು ಶ್ರೀ ಹರಿಭಜಿಸೆ ಕೂತು ಶ್ರೀ ಹರಿಸ್ಮರಿಸೆ
ತಾತನೇ ಗತಿಯೆಂದು ಪಾದದಲಿ ಬೀಳೇ
ಹೊತ್ತು ನೋಡದೆ ಮುದದಿ ಭಿನ್ನವೆಣಿಸದೆಯನಗೆ
ಯೆತ್ತಿ ಮೋಕ್ಷವ ಬೇಗನೀವ ನಾರೋ ೨

ನಾನು ಬಡವನು ಜಗದಿ ದೀನಹೀನನು ಹರಿಯೆ
ಏನು ಗತಿಯೆಂದೆನುತ ಚರಣ ಮರೆ ಹೊಕ್ಕೇ
ಪಾನ ಮಾಡುತಲೆನ್ನ ಅವಗುಣವ ನೀಗೆನಗೆ
ತಾನೆ ಭಿಕ್ಷವು ಬೇಗನೀವ ನಾರೋ ೩

ಭಜನೆ ಸ್ತೋತ್ರಗಳರಿಯೆ ಪೂಜೆ ವಿಧಿಯನು ತಿಳಿಯೇ
ಅಜನ ಪಿತ ಶ್ರೀಹರಿಯ ಮೆಚ್ಚಿಸಲು ಅರಿಯೇ
ತ್ಯಜಿಸಿ ದಾಸ್ಯತ್ವವನು ಹರಿಗೆ ಶರಣೆಂಬೆನಲು
ಸುಜನರನು ಪೊರೆವಂತೆ ಸಲಹುವನು ಯಾರೋ ೪

ನಾನು ಪಾಪಿಯು ಋಣಿಯು ಕ್ಲೇಶವನು ತೊರೆದೀಗ
ಇನ್ನು ಮರೆಯದೆ ನಿನ್ನ ದಾಸನಾಗುವೆನು
ಚನ್ನಕೇಶವ ಸ್ವಾಮಿ ರಕ್ಷಿಸೆಂದೊದರುತಿರೆ
ಪ್ರಾಣವನು ಯತ್ತೆನ್ನ ಸಲಹುವನು ಯಾರೋ ೫

## ೨೨೧

ಆದದ್ದ ಮರೆತು ಶ್ರೀ ರಂಗನ ಭಜಿಸಿರಿ
ಮೋದದಿ ಹರಿಯ ಸೇವೆಯ ಮಾಡಿರಿ ಪ

ಮುಕುಟವೆ ವಂದಿಸು ಮತ್ಸ್ಯಾವತಾರನ
ಮುಖವೆ ನೀ ಕೀರ್ತಿಸು ಮುದ್ದು ಕೂರ್ಮನ
ಸುಕಟಿಯೆ ಮುದ್ದಿಸು ಸೂಕರ ರೂಪನ
ನಖವೆ ನೀನಪ್ಪಿಕೊ ನರಸಿಂಹತನ ೧

ವಕ್ಷವೆ ಹೊರು ನೀನು ಗಿಡ್ಡ ವಾಮನನನ್ನು
ಪಕ್ಷವೇ ಪಿಡಿದಾಡು ಭಾರ್ಗವನನ್ನು
ಕಕ್ಷವೆ ಯೆತ್ತು ಶ್ರೀ ರಾಮಚಂದ್ರನನ್ನು
ಕುಕ್ಷಿಯೆ ಬೇಡು ಶ್ರೀ ಕೃಷ್ಣಾಮೃತವ ೨

ಹರುಷದಿ ತೊಡೆಯೆ ನೀ ಬುಧನ ಕೂಡ್ರಿಸಿಕೊಳ್ಳು
ಚರಣವೆ ಕಲ್ಕ್ಯಾನ ಮನೆಗೆ ನೀ ಪೋಗು
ಸರುವಾಂಗವೆ ನಿತ್ಯ ದಶನಾಮ ಸ್ಮರಿಸಿರಿ
ಸರಿಚನ್ನಕೇಶವ ನೊಲಿದು ಪಾಲಿಸುವಾ ೩

## ೨೨೨

ಇನ್ನಾದರೂ ದಯಬಾರದೇ ದಾಸನಮೇಲೆ
ಇನ್ನಾದರೂ ದಯಬಾರದೇ ಪ

ಪನ್ನಗ ಶಯನನೇ ಚೆನ್ನಕೇಶವನೇ
ನಿಂನ್ನನು ನಂಬಿದ ಶರಣನಮೇಲೇ ಅ.ಪ

ಹಲವು ಯೋನಿಗಳಲ್ಲಿ ನೆರೆ ಪುಟ್ಟಿ ಬಂದೇ
ಹಲವು ಯಾತನೆಗಳ ಸಹಿಸುತ್ತ ಬಂದೇ
ಹಲವು ರೀತಿಗಳಿಂದ ದುಃಖವ ತಿಂದೇ
ಸಲೆ ನಂಬಿ ಹರಿಗೀಗ ಶರಣೆಂದು ಬಂದೇ ೧

ಆರು ವೈರಿಗಳೆನ್ನ ತಿವಿದು ತಿಕ್ಕುತಲಿವೆ
ಸೇರಿ ಬಗೆಯುತಲಿವೆ ಪಂಚ ವ್ಯಾಘ್ರಗಳೂ
ಗಾರು ಮಾಡುತಲಿದೆ ಅಹಂ ಎಂಬ ಸಿಂಹವು
ಶೆರಿಯ ಭಜಿಸುತ್ತ ಬಲೆದಾಟಿ ಬಂದೇ ೨

ಬಂಧು ಬಾಂಧವರೆಂಬ ಕ್ರೂರವರ್ಗಗಳೆನ್ನ
ತಿಂದು ಸುಲಿಯುತಲಿವೆ ವಂಚಿಸಿ ಹರಿಯೇ
ಅಂದದಿ ದೂರ್ವಾ ಪಟ್ಟಣದಿ ನಿತ್ತಿರುವಂಥ
ಸಿಂಧು ಶಾಯಿಯೇ ರಂಗ ಸಲಹೆನ್ನ ತಂದೇ ೩

## ೨೨೩

ಎಂದಿಗೂ ಮರುಳಾಗೆನೋ ಸಂಸಾರಕ್ಕೆ
ಎಂದಿಗೂ ಮರುಳಾಗೆನೋ ಪ

ಬಂಧವ ತರಿವ ಕೇಶವನ ದಾಸನಾಗಿ
ಇಂದಿರಾಪತಿ ಪಾದ ಸೇರುವೆನಯ್ಯ ಅ.ಪ

ನಾರಿಯರನು ನೆಚ್ಚಿಸೀ ಧರ್ಮವ ಬಿಡಿಸಿ
ಮಾರಿಯರ ಸಾಕಿಸೀ
ಆರರ ವಶಮಾಡಿ ರತಿಕ್ರೀಡೆ ನಂಬಿಸಿ
ಮಾರಿಯ ಗೃಹಕೆನ್ನ ಗುರಿಮಾಡ್ವ ಭವಕೇ ೧

ಹೊನ್ನುಗಳಿಗೆ ಮೆಚ್ಚಿಸೀ ಸತ್ಯವ ಬಿಡಿಸಿ
ಮಣ್ಣುಗಳಿಗೆ ಸೊಕ್ಕಿಸೀ
ಬಣ್ಣೆಣ್ಣಿಸಲಾಗದ ಪಾಪವ ಮಾಡಿಸಿ
ಚಿನ್ನನ ಮರೆಸುವ ಮುಸಿಯಾದ ಭವಕೇ ೨

ಕರಗಳನ್ನೇ ಜೋಡಿಸಿ ಸರ್ವಾತ್ಮನ
ಸ್ಮರಣೆಗಳನ್ನೇ ಮಾಡಿ
ಸರಸದಿ ಪಾಲಿಪ ಭಕ್ತರ ಪರಿಯನ್ನು
ಭರದಿ ಸೇರಿಸಿ ಚನ್ನಕೇಶವಾ ಗತಿಯೆಂಬೇ ೩

## ೨೨೪

ಒಲಿಸಬೇಕು ಹರಿಯ ನಾವೀಗ ಕೇಶವನನ್ನು
ಒಲಿಸಬೇಕು ಹರಿಯ ನಾವೀಗ ಪ

ಒಲಿಸಬೇಕು ಹರಿಯ ನಾವು ಪರಮ ಭಕ್ತಿಯ ಸೇವಿಯಿಂದ
ಒಲಿಸಬೇಕು ರಂಗನನ್ನು ಮೋಕ್ಷವೀವ ಹರಿಯನು ೧

ಭಕ್ತಿರಹಿತವಾದ ಪೂಜೆ ಸ್ತೋತ್ರ ಸ್ಮರಣೆ ಭಜನೆಯಿಂದ
ಭಕ್ತಿರಹಿತ ಶ್ರವಣದಿಂದ ಹರಿಯು ತಾನು ಒಲಿಯನಯ್ಯ ೨

ಭಕ್ತಿಯಿಂದ ಪೂಜೆಮಾಡಿ ಭಕ್ತಿಯಿಂದ ಸ್ತೋತ್ರಪಾಡಿ
ಭಕ್ತಿಯಿಂದ ಶ್ರವಣ ಮಾಡಿ ಸೇವೆ ಮಾಡಲೊಲಿಯುತಾನೆ ೩

ದೂರ್ವಾಪುರದಿ ನಿತ್ತ ಹರಿಗೆ ಆತ್ಮ ನೇವೇದ್ಯವನು ಮಾಡೆ
ಗರ್ವರಹಿತನಾದ ಕೇಶವ ಬೇಗದಿಂದಲೊಲಿಯುತಾನೆ ೪

# ೨೨೫

ಕರುಣದಿ ಕಾಯೋ ಗೋವಿಂದಾ ಯಂವ
ದುರಿತಗಳಿಂದ ನೀನೀಗೊ ಮುಕುಂದ ಪ

ಹರಿಸೇವೆ ಮಾಡುತ್ತ ಬಂದೆ ಮುಂದೆ
ಚಿರ ಸಾಯುಜ್ಯವನ್ನು ನೀಡೋ ಶರಣಂದೆ ಅ.ಪ.

ಲಕ್ಷಯೆಂಬತನಾಲ್ಕು ಜನ್ಮಯೆತ್ತಿ
ಭಕ್ಷಿಸಿ ಬಂದೆನು ಕೋಟಿ ದುಃಖಗಳಾ ೧

ಸಾಕ್ಷಿಯಾಗಿರುವಂಥ ಜೀವಾತ್ಮನನು
ಲಕ್ಷಕೆ ತಂದೆ ಮನುಜ ಜನ್ಮದಲೀ ೨

ಪಾಪ ಪುಣ್ಯಕೆ ಕರ್ತೃವಾಗಿ ಭವದಿ
ಕೂಪದಿ ನಿಂದೆನು ಬೋಕ್ತೃವು ಆಗೀ ೩

ಪಾಪವ ಕ್ಷಮಿಸೋ ಸರ್ವಾತ್ಮಯಂನ
ತಾಪವ ನೀಗುತ್ತ ಜನ್ಮ ಪರಿಪರಿಸೋ ೪

ಜನ್ಮ ತಾಳಲಾರೆ ಹರಿಯೇ ತಾಳಿ
ಜನ್ಮದಿ ಹರಿಪಾದ ನಾ ಬಿಡಲಾರೆ ೫

ಸನ್ನುತವರ ದೂರ್ವಾಪುರದ ನಂಮ
ಚನ್ನಕೇಶವನೇ ಭಕ್ತಿಯನು ನೀ ಕೊಡಲೋ ೬

## ೨೨೬

ಕರುಣಿಸು ಕರುಣಿಸು ಚನ್ನಕೇಶವನೇ
ಕರುಣಿಸು ನಾ ನಿನ್ನ ದಾಸನೆಂತೆಂದು ಪ

ಅಹೋ ರಾತ್ರಿ ಹರಿ ನಿನ್ನ ಧ್ಯಾನವ ಮಾಳ್ಪೇ
ಸಹಸ್ರನಾಮಗಳೀಶ ಬೇಗ ಮುಕ್ತಿಯನು ೧

ನಂಬಿದೆ ಹರಿ ನಿನ್ನ ಚರಣವ ದೇವಾ
ಅಂಬುಜ ನಯನನೆ ನಿನ್ನ ಭಕ್ತಿಯನು ೨

ಬಹಳ ನೊಂದೆನು ಸಂಸಾರ ಜಾಲದಲೀ
ಇಹ ಯಾತ್ರೆ ಮುಗಿಸುತ್ತ ಪರಗತಿಯನ್ನು ೩

ವರ ದೂರ್ವಾಪುರದಲ್ಲಿ ನಿರುತನಾಗಿದ್ದು
ಸರಸದಿ ಭಕ್ತರ ಪೊರೆವ ಶ್ರೀ ಹರಿಯೇ ೪

## ೨೨೭

ಕಷ್ಟಗಳ ಪರಿಹರಿಸೊ ಶ್ರೇಷ್ಠ ಮಾರುತಿಯೇ
ಭ್ರಷ್ಟನಾದೆನು ಭಂಡ ಸಂಸಾರದಲ್ಲೀ ಪ

ಸ್ವಾರ್ಥವೆನ್ನುವ ದುಃಖ ಸಾಗರದಿ ಮುಳುಗಿದ್ದು
ಸ್ವಾರ್ಥಕೋಸುಗ ಹೀನ ಕೃತ್ಯಗಳ ಗೈದೂ
ಅರ್ಥವನು ಗಳಿಸುತ್ತ ತುಂಬಿದೆನು ಈ ವಡಲ
ವ್ಯರ್ಥವಾಯಿತು ಜನ್ಮ ಸಾರ್ಥವನು ಮಾಡೋ ೧

ನರಜನ್ಮ ಸ್ಥಿರವೆಂದು ಪುನರ್ಜನ್ಮವಿಲ್ಲೆಂದು
ನಿರುತದೀ ಧರ್ಮ ಕರ್ಮಗಳ ತೊಲಗಿದೆನು

ಭವದಿ ಸುಖವೆಲ್ಲವೂ ಮಾಯವಾಯಿತು ದೇವಾ
ಶರಣರಿಗೆ ತಂದೆ ನೀನೆಂದು ಮೊರೆಹೊಕ್ಕೇ ೨

ಪರಹಿತವ ಬಯಸದಲೆ ಕೇಡು ಬಗೆದೆನು ನಿತ್ಯ
ಪರಸತಿಯಪೇಕ್ಷೆಯಲಿ ನಿರುತನಾಗಿದ್ದೇ
ಅರಿತೆನೀಗಲೆ ನಾನು ಸರ್ವ ನಶ್ವರವೆಂದು
ನರಹರಿಯ ನೀರೆರೆಯೊ ಈ ಬಾಡು ಶಶಿಗೇ ૩

ಭಕ್ತವತ್ಸಲನೆಂಬ ಬಿರುದ ಪೊತ್ತಿಹೆ ನೀನು
ಭಕ್ತಿಯಲಿ ನಾ ನಿಂನ ಸೇವೆ ಮಾಡುವೆನು
ಭಕ್ತದಾಯಕಯಂನ ಹಸಿವೆ ತೃಷೆಗಳ ನೀಗಿ
ಮುಕ್ತಿಯನು ನೀಡೆನಗೆ ಚನ್ನಕೇಶವನೇ ೪

## ೨೨೮

ಚನ್ನಕೇಶವ ಚನ್ನಕೇಶವ
ಚನ್ನಕೇಶವ ತ್ರಾಹಿಮಾಂ ಪ

ಮನ್ನಿಸೆನ್ನನು ರಕ್ಷಿಸೆನ್ನನು
ಸನ್ನುತಾಂಗನೆ ಪಾಹಿಮಾಂ ಅ.ಪ.

ಭವದಿ ನೊಂದೆನು ಸವೆದು ಬೆಂದೆನು
ಜವದಿ ಬಂದೆನು ತ್ರಾಹಿಮಾಂ
ಭವಣೆಯನು ಪರಿಹರಿಸಿ ದೇವನೆ
ಭವ ವಿದೂರನೆ ಪಾಹಿಮಾಂ ೧

ನಾನು ಏನನು ನಿನ್ನ ಮರತೆನು
ನಾನು ಬಡವನು ತ್ರಾಹಿಮಾಂ
ಗಾನ ಲೋಲನೆ ಬಿಡದೆ ಭಜಿಸುವೆ
ದೀನ ವತ್ಸಲ ಪಾಹಿಮಾಂ ೨

ಭಕ್ತವತ್ಸಲ ಭಕ್ತದಾಯಕ
ಭಕ್ತಿಯರಿಯೆನು ತ್ರಾಹಿಮಾಂ
ಮುಕ್ತಿದಾಯಕ ಶಕ್ತಿ ಮೂರುತಿ
ಮುಕ್ತಿ ಪಾಲಿಸಿ ಪಾಹಿಮಾಂ ೩

## ೨೨೯

ಚನ್ನಕೇಶವ ನಿನ್ನ ಭಜನೆಯೊಂದುಳಿದು ನಾ
ನನ್ಯರ ನಂಬೆನು ಸಲಹಯ್ಯ ಹರಿಯೇ ಪ

ತರಳಾ ಧೃವನಂತೆ ತಪಸ ನಾನರಿಯೆನು
ಸರಳೆ ದ್ರೌಪದಿಯಂತೆ ಸ್ತೋತ್ರವನರಿಯೇ
ಸರಸ ಜಾಂಬುಕಿಯಂತೆ ಸೇವೆಯನರಿಯೆನು
ಕರಿಯಂತೆ ಸ್ಮರಣೆಯ ಮೊದಲು ನಾನರಿಯೇ ೧

ದಾಸ ಕನಕನಂತೆ ಭಕ್ತಿಯ ನರಿಯೆನು
ವಾಸುಕಿಯಂತೆ ನಾ ಯಾಚನೆಯರಿಯೇ
ದಾಸ ಮಾರುತಿಯಂತೆ ದಾನತ್ವವರಿಯೆನು
ವಾಸವನಂತೆ ನಾ ಕೀರ್ತನೆಯರಿಯೇ ೨

ಹರಿಯ ಲೀಲೆಗಳನ್ನು ಒಂದಿಷ್ಟನರಿಯೆನು
ಹರಿ ಪೂಜೆ ಸೇವೆಯ ಸ್ಮರಣೆಯನರಿಯೇ
ಹರಿಯ ಮನೆ ಘಂಟೆಯ ಬಾರಿಸಲರಿಯೆನು
ಸಿರಿ ಚನ್ನಕೇಶವ ಮಹಿಮೆಯನರಿಯೇ ೩

## ೨೩೦

ದಯಮಾಡೆನಗೇ ಕೃಷ್ಣದಯ ತೋರನಗೇ ರಂಗ
ದಯ ಮಾಡೆನಗೆ ಶ್ರೀ ಚನ್ನಕೇಶವನೇ ಪ

ಧರಣಿ ಪಾಲಕನಂತೆ ಮೃತವ ನಾನರಿಯೆನು
ಸರಳೆ ದ್ರೌಪದಿಯಂತೆ ಸ್ತೋತ್ರವನರಿಯೇ
ಕರಿರಾಜನಂತೆ ನಾ ಮರೆಹೊಕ್ಕಲರಿಯೆನು
ತರಳ ಧೃವನಂತೆ ತಪ ಮಾಡಲರಿಯೇ ೧

ಪರೀಕ್ಷಿತನಂತೆ ಶ್ರವಣವ ಮಾಡಲರಿಯೆನು
ವರಶುಕರಂತೆ ಕೀರ್ತನೆ ಮಾಡಲರಿಯೇ
ತರಳ ಪ್ರಲ್ಹಾದನಂದದಿ ಸ್ಮರಿಸಲರಿಯೆನು
ಚರಣವ ರಮೆಯಂತೆ ನಾ ಭಜಿಸಲರಿಯೇ ೨

ಹರಿಯನ ಕ್ರೂರನಂತೇ ನಮಿಸಲರಿಯೆನು
ಹರಿಯ ಪೃಥುವಿನಂತೆ ಪೂಜಿಸಲರಿಯೇ
ಮರುತಜನಂತೆ ನಾ ದಾಸ್ಯತ್ವವರಿಯನು
ನರನಂತೆ ಮಿತ್ರತ್ವ ಪಡೆಯಲಿಕ್ಕರಿಯೇ ೩

ಆತ್ಮವ ಬಲಿಯಂತೆ ಅರ್ಪಿಸಲರಿಯೆನು
ನಿತ್ಯವು ನರಕದಿ ಮುಳುಗಿ ನಾನಿರುವೇ
ಮತ್ಸ್ಯಾದಿ ದಶರೂಪವೆತ್ತಿದ ರಂಗನೆ
ಬೃತ್ಯರ ಸಲಹಯ್ಯ ಸ್ವಾಮಿ ದೂರ್ವೇಶಾ ೪

## ೨೩೧

ಪಾಲಿಸು ಜಗದೀಶಾ ಸರ್ವೇಶಾ
ಪಾಲಿಸು ಜಗದೀಶಾ ಪ

ಪಾಲಿಸು ಸರ್ವೇಶ ದೇವ ದೇವೇಶ
ಪಾಲಿಸು ಬಾಲನ ರಾಮ ರಮೇಶ ಅ.ಪ.

ಶರಣರ ತಂದೆ ನೀನು ಸರ್ವೇಶಾ
ದುರುಳರಾಂತಕನು ನೀನು
ಪರಿಯಿಂದ ಬಳಲುವ ಪರಮ ದಾಸರಿಗೆಲ್ಲಾ
ಪೊರೆಯುವ ರಾಜಾಧಿರಾಜನೇ ನೀನು ೧

ಮಾನಿನಿ ಕಾಯ್ದೆ ನೀನು ಸರ್ವೇಶಾ
ಮಾನವ ನೀಡೋ ನೀನು
ಹೀನರ ಸಲಹುವ ಪರಮ ನಾಯಕ ನೀನು
ದೀನರ ರಕ್ಷಿಪ ತಾತನೇ ನೀನು ೨

ಸುಜನರ ದೇವ ನೀನು ಸರ್ವೇಶಾ
ಭಜಕರ ನಾಥ ನೀನು
ಕುಜನರ ಕಾಲನು ದೂರ್ವಾಪುರೇಶನು
ದ್ವಿಜವೃಂದ ವಂದ್ಯನು ಚನ್ನಕೇಶವನು ೩

## ೨೩೨

ಬಾಗಿಲ ತೆಗೆಯವ್ವಾ ಲಕ್ಷ್ಮೀದೇವಿ
ಬಾಗಿಲ ತೆಗೆಯವ್ವಾ ಪ

ಬಾಗಿಲ ತೆಗೆಯವ್ವಾ ಸಾಗಿ ಬಂದಿಹನಯ್ಯಾ
ಭೋಗಿ ಭೂಷಣ ಪ್ರಿಯ ಕೇಶವನ ದಾಸಾ ಅ.ಪ.

ಸಂಸಾರ ಜಾಲದಲೀ ಸಿಲುಕಿ ಬೆಂದೇ
ಸಂಸಾರ ಮಾಯದಲೀ
ಹಿಂಸೆ ಮಾಡಿದವಯ್ಯಾ ಐದಾರುರಿಪುಗಳು
ಸಂಶಯ ಪಡದೆ ಬಂದೇ ಶರಣೆಂದೇ ೧

ಭವದೊಳುರಳಿ ಬಿದ್ದನೋ ಪ್ರಾಣಾಂತಕ
ಸವೆದು ಕರಗಿ ಬೆಂದೆನೋ
ಯುವತಿಯರೊಡಗೂಢಿ ಇಹವೆನ್ನೆ ನೆರೆನಂಬಿ
ವಿವಿಧ ಕಷ್ಟವ ಪೊಂದಿ ಬಂದೇ ಶರಣೆಂದೇ ೨

ಹಲವು ಜನ್ಮಗಳಿಂದ ನೋಡಲು ಬಂದೆ
ಹಲವು ರೀತಿಗಳಿಂದ
ನಳಿನ ನಾಭನ ದಿವ್ಯ ರೂಪವ ನೋಡುವೆ
ನಳಿನಾಕ್ಷಿ ತಾಯ ಕೇಶವನ ಸೇರುವನು ೩

## ೨೩೩

ಸೋತುಹೋದೆ ನಾನು ಶ್ರೀಹರಿ
ಸೋತುಹೋದೆ ನಾನು ಪ

ಪತಿತ ಪಾವನ ಮೂರ್ತಿಯ ಪ್ರೀತಿಯ
ಸತತ ಪಡೆಯಲು ಕೆಲಸವ ಮಾಡಿ ಅ.ಪ.

ನಿತ್ಯದಿ ಭಜಿಸುತ ಹರಿನಾಮವನು
ಸತ್ಯಧರ್ಮದಿ ನಡೆಯುತಲೀ
ಭೃತ್ಯರಂದದಿ ಸೇವೆಯ ಮಾಡುತ
ನಿತ್ಯನೆನಾ ಧನ್ಯಾತ್ಮನಾಗದೆ ೧

ಪರಮಾತ್ಮನ ಕೀರ್ತನೆಯನು ಮಾಡುತ
ಹರುಷದಿ ದಾಸನಾಗುತಲೀ

ಹರಿಯ ಸಾಸಿರ ನಾಮವ ಸ್ಮರಿಸುತ
ಶರಣಾಗತ ಪರಿಪಾಲನ ನೋಡಿದೆ ೨

ಹೊನ್ನು ಹೆಣ್ಣು ಮಣ್ಣಿಗೋಸುಗ
ಜನ್ಮವ ಮೋಹದಿ ನವಿಸದಲೇ
ಚಿನ್ಮಯ ರೂಪನ ಪೂಜೆಯ ಮಾಡುತ
ಚನ್ನಕೇಶವ ಪಾದವ ಸೇರದೆ ೩

## ೨೩೪

ಹರಿಯೆನ್ನ ನರಜನ್ಮ ವ್ಯರ್ಥವಾಯ್ತು
ಪರಮ ಭಕ್ತಿಯೊಳಿನ್ನು ಭಜಿಸುವೆನು ಕಾಯೋ ಪ

ತೊಡೆಯ ಮೇಲಾಡುತಿಹ ಶಿಶುವಿನಾನುಡಿ ಕೇಳಿ
ಕಡು ಮೂರ್ಖತನದಿಂದ ಭ್ರಮೆಗೊಂಡೆನೋ
ಸಡಗರದಿ ಕಿವಿಗೊಟ್ಟು ಕಿಂಕಿಣಿಯ ಧ್ವನಿಗಳನು
ಎಡಬಿಡದೆ ಕೇಳುತಿಹ ಹರಿಣನಂತಾದೇ ೧

ತೊಡೆಗುಹ್ಯ ಕುಚಗಳಿಗೆ ಅನುದಿನವು ನಲಿಯುತ್ತ
ಮಡದಿಯರ ಅಂಗ ಸಂಗದ ನಂಬುತಾ
ಒಡಲ ಶಾಂತಿಯಗೊಳಿಸೆ ಬಡಿಗೋಲು ಕೆಡಹಿಕೊಂ
ದಡಗುತಿಹ ಮೂಷಕನ ತೆರದಲ್ಲಿ ಕಳೆದೇ ೨

ನಿರುತದಿಂ ಪರಸತಿಯ ಲಾವಣ್ಯವನು ನೋಡಿ
ಚರಿಸಿತೆನ್ನಯ ಮನವು ಅವಳ ಕೂಟಕ್ಕೇ
ಉರಿವ ದೀಪವ ಕಂಡು ಕನಕ ಮಣಿಯೇಯೆಂದ
ಎರಗುತಿಹ ಹುಳದಂತೆ ಹಾಳಾದೆ ಬರಿದೇ ೩

ಜರಿದು ನಿಜವೃತ್ತಿಯನು ಪರದಾಸ್ಯದಲಿ ಮುಳುಗಿ
ಪೊರದೆ ಹೊಟ್ಟೆಯನಾ ಪರಾನ್ನ ಭಕ್ಷದಲೀ
ಹರುಷದಿಂ ಬಲೆಯತುದಿ ಮಾಂಸಕ್ಕೆ ಮೆಚ್ಚಿದಾ
ಮರುಳಾ ಮೀನಿನ ಗತಿಯು ಯನಗಾಯ್ತು ನಿಜದೀ ೪

ನಾರಿಯರ ಜಾಲಕ್ಕೆ ಪ್ರತಿದಿನವು ಸಿಲುಕುತ್ತ
ಮಾರಿಯರ ಸಾಕಿ ನಾ ಫಲವ ತಿಂದೆ
ಭೋರು ಭೋರೆಂದೆನುತ ಭ್ರಮರ ಸಂಪಿಗೆಯಸಳ
ಸಾರಿ ಕೊಡಲೆ ಮೃತ್ಯುವಶವಾಗುವಂತೇ ೫

ಮೂರಾರು ಶತ್ರುಗಳು ತರಿದೆನ್ನ ಮನವನ್ನು
ಗಾರು ಮಾಡುತಲಿಹವು ತಿಳಿಯದಾ ಹರಿಯೇ
ನರಸಿಂಹನೇ ಐದು ಇಂದ್ರಿಯವ ಗೆಲಲಾರೆ
ಭೂರಿ ಭಕ್ತಿಯೊಳೆರಗಿ ಮರೆಹೊಕ್ಕೆ ಕಾಯೋ ೬

ಪನ್ನಗಶಯನ ಶ್ರೀ ವೇಣುಗೋಪಾಲನೆ
ಚನ್ನಿಗಕೇಶವನೇ ದೂರ್ವೇಶನೇ
ನಿಂನನಾ ಬಿಡಲಾರೆ ಮಾರಮಣ ಪೊರೆಯಂನ
ಯೋನಿ ಜನ್ಮಕೆ ಮುಂದೆ ಬರದಂತೆ ಮಾಡೋ ೭

## ೨೩೫

ಹರಿಯೇ ನಿನ್ನಯ ಭಕ್ತಿಯದರವೊಂದುಳಿಧು ನಾ
ಸಿರಿಯರಸನೆ ನಿನ್ನೊಳನ್ಯ ಕೇಳೆನು ರಂಗಾ ಪ

ಸತಿ ಬೇಡ ಸುತ ಬೇಡ ಪತಿ ಬೇಡ ಸುತೆ ಬೇಡ
ಸತತ ಶ್ರೀ ಹರಿ ನಿನ್ನ ದ್ಯಾನವ ಕೊಡಲೋ ೧

ಗತಿ ಬೇಡ ಸ್ಥಿತಿ ಬೇಡ ಸುಖ ದುಃಖ ಭವ ಬೇಡ
ಪತಿತ ಪಾವನ ನಿನ್ನ ಸ್ತೋತ್ರವ ಕಲಿಸೋ ೨

ಸಿರಿ ಬೇಡ ಕರಿ ಬೇಡ ಹಣ ಬೇಡ ಮನೆ ಬೇಡ
ಸಿರಿ ಚೆನ್ನಕೇಶವನ ಮಹಿಮೆಯ ತಿಳಿಸೋ ೩

## ತಾತ್ವಿಕ ಹಿನ್ನೆಲೆಯ ಹಾಡುಗಳು

### ೨೩೬

ಪಾದಪೂಜೆಯನು ಮಾಡುವೆ ರಾಮಾ
ಪಾದಪೂಜೆಯನು ಪ

ಕಾಯಾ ವಾಚದಲೀ ಮನಸಿನಿಂದ
ನ್ಯಾಯ ಮಾರ್ಗದಲೀ ಅ.ಪ.

ಘನ ಭಕ್ತಿರಸವೆಂಬ ನೀರನು ತಂದು
ತನುವೆಂಬ ಘಟದಿಂದ ೧

ವರಭೂತದಯೆಯೆಂಬ ಗಂಧವ ಪೂಸಿ
ಪರಮ ಸುಕೃತಿಯಿಂದ ೨

ದಾನಧರ್ಮಗಳೆಂಬ ಹೂವನು ಹಾಕಿ
ವೀಣಾದಿ ಸ್ವರದಿಂದ ೩

ಸತ್ಯ ಜ್ಞಾನಗಳೆಂಬ ಮಂತ್ರವ ಹೇಳಿ
ಅತ್ಯಂತ ಕೃಪೆಯಿಂದ ೪

ಸ್ವಾರ್ಥ ತ್ಯಾಗವು ಯೆಂಬ ಆರತಿ ಮಾಡಿ
ನರ್ತನಸ್ತುತಿಯಿಂದ ೫

ದೇಹವಾಹುತಿಕೊಟ್ಟು ಅರ್ಪಣೆ ಮಾಡಿ
ಮೋಹದುಪೇಕ್ಷೆಯಿಂದ ೬

ಮುಕ್ತಿಯ ಫಲವೆಂಬ ಪ್ರಸಾದ ತಿಂದು
ಭಕ್ತರಾಕೃತಿಯಿಂದ ೭

ಜನುಮಕ್ಕೆ ಬರದಂತೆ ಬೇಡುವೆ ನಿಂದು
ತನುಬಂಧ ಹರಿವಂತೆ ೮

ಪನ್ನಗಶಯನನನ್ನು ಪೂಜಿಪೆನಿಂದು
ಚನ್ನಕೇಶವನನ್ನು ೯

## ೨೩೭

ಬನ್ನಿರಿ ದಾಸರೇ ಪೋಗುವಾ ನಮ್ಮ
ಚನ್ನಕೇಶವನೆಂಬ ಹರಿಮಂದಿರಕೇ ಪ

ಬನ್ನಿರಿ ಪೋಗುವಾ ಗುಡಿಯೊಳು ತಿನ್ನುವಾ
ಚನ್ನಗೆ ಅರ್ಪಿಸಿ ತಂದ ಪಕ್ವಗಳ ಅ.ಪ.

ನಾ ತಂದಿರುವೆನು ಪರಮಾನ್ನವನ್ನು
ತಾತನ ನಾಮಕ್ಕೆ ಬೆರಿಸಿ ಮಾಡಿದೆನು
ನೀತಿಯೊಳಾಭಕ್ತಿ ಮಧುಕ್ಷೀರವನ್ನು
ಸತ್ಯದಿ ಕೂಡಿಸಿ ಸೇವಿಸುವಾ ೧

ಪರಹಿತವೆನ್ನುವ ಸಕ್ಕರೆ ತಂದು ನಾ
ಬೆರಿಸುವೆ ಧರ್ಮಗಳೆಂಬ ಪಾಯಸಕೇ
ಹರಿಯ ಕೀರ್ತನೆಗಳ ಅಮೃತವ ಸೇರಿಸಿ
ಪರಮಾನ್ನವೀ ರೀತಿ ಮಾಡಿರುವೆನಯ್ಯ ೨

ಹರಿಭಕ್ತಿಯೆಂಬುವ ತಂಡುಲವನೆ ತಂದು
ಹರಿಯ ಸ್ಮರಣೆಯೆಂಬ ವುದಕದಿ ತೊಳೆದು
ಹರಿಯ ಭಜನೆಯೆಂಬ ಬೆಂಕಿಯ ಮೇಲಿಟ್ಟು
ಸರಸದಿ ನಾ ಪಾಕವ ಮಾಡಿರುವೆ ೩

ಸನ್ನುತ ದೂರ್ವಾಪಟ್ಟಣದಿ ನಿತ್ತಿರುವಂಥ
ಪನ್ನಗಶಯನ ಶ್ರೀ ಹರಿಯ ನೆನೆಯುತ್ತ
ಉನ್ನತ ಸೇವೆಯಿಂದಾತನ ಮೆಚ್ಚಿಸಿ
ತಿನ್ನುವಾ ಕೇಶವ ನೀಯುವ ವರವಾ ೪

## ೨೩೮

ಭಕ್ತಿಯೆಂಬ ಬೀಜ ಬಿತ್ತಯ್ಯ ಅದರಲ್ಲಿ ಬೆಳೆವ
ಮುಕ್ತಿಯೆಂಬ ಫಲವ ತಿನ್ನಯ್ಯ ಪ

ಭಕ್ತಿಯೆಂಬ ಬೀಜ ಬಿತ್ತಿ ತ್ಯಾಗವೆಂಬ ಕ್ಷೇತ್ರದಲ್ಲಿ
ಶಕ್ತಿ ಮೀರಿ ನೀರ ಸಂಚಿ ಯುಕ್ತಿಯಿಂದ ಸಾಕಿರೋ ೧

ಪ್ರೀತಿಯಿಂದ ಮರವ ಸೇರಿ ಧರ್ಮವೆಂಬ ಟೊಂಗೆ ಹತ್ತಿ
ಆತುರದೀ ಜ್ಞಾನವೆಂಬ ಕುಸುಮವನ್ನೇ ಮೂಸಿರೋ ೨

ಜ್ಞಾನದಿಂದ ಹರಿಯ ಸೇವೆಯನ್ನು ಮಾಡಿ
ಹರಿಯು ಕೊಡುವ
ಹಣ್ಣ ನೀವು ತೆಗೆದುಕೊಂಡು ತೋಷದಿಂದ ನೋಡಿರೋ ೩

ಮುಕ್ತಿಯೆಂಬ ಹಣ್ಣ ನೀವು ಸ್ವಾರ್ಥವೆಂಬ ಸಿಪ್ಪೆ ಬಿಸಟು
ಭಕ್ತರಂತೆ ಕೇಶವಾಯೆಂದು ಭಕ್ತಿಯಿಂದ ತಿನ್ನಿರೋ ೪

## ೨೩೯

ಹಲವೂ ಜನ್ಮ ತಳೆದೂ ಬಂದೇ
ಹಲವೂ ದುಃಖವ ಸಹಿಸೀ ಬಂದೇ ಪ

ಫಲಗಳ ತಿಂದೂ ಸೋತೂ ಬಂದೇ
ಸಲಹೋ ರಂಗನೇ ದೂರ್ವಾಪುರಿಯೇ ಅ.ಪ.

ಘೋರ ಕಷ್ಟವು ಮಾಯಾಭವವು
ಸಾರವಿಲ್ಲವು ಸಂಸಾರದಲೀ
ಧಾರುಣಿಯಲಿ ಬಾಳಲಾರೆ
ನೀರಜಾಕ್ಷನೇ ದೂರ್ವಾಪುರಿಯೇ ೧

ಖೂಳ ಪಾಪಿಯಹುದು ನಾನು
ಬಾಲನಂತೆನ್ನ ಅಪರಾಧ ಕ್ಷಮಿಸೋ
ಜಾಲದಿಂದ ಮೊದಲು ಬಿಡಿಸೋ
ಬಾಲಮೂರ್ತಿಯೇ ದೂರ್ವಾಪುರಿಯೇ ೨

ನಿನ್ನ ಭಜನೆಯ ಮಾಡುತ್ತಿರುವೆನು
ನಿನ್ನ ದಾಸನಾಗುವೆ ನಾನು
ನಿನ್ನ ನಾಮ ಸ್ಮರಿಸುತ್ತಿರುವೆನು
ಚನ್ನ ಕೇಶವ ದೂರ್ವಾಪುರಿಯೇ ೩.

## ಮಂಗಳ ಪದ್ಯಗಳು

### ೨೪೦

ಜಯತು ಕರಿಕಾನೇಶ್ವರಿ
ಜಯತು ನೀಲ್ಕೋಡೇಶ್ವರಿ ಪ

ಜಯತು ಪರಮೇಶ್ವರಿ
ಜಯತು ಶ್ರೀ ಮಹೇಶ್ವರಿ
ಜಯತು ಶ್ರೀ ಭುವನೇಶ್ವರಿ
ಜಯತು ಶ್ರೀ ವಜ್ರೇಶ್ವರಿ ೧

ಜಯತು ಶ್ರೀ ಕಮಲಾಕ್ಷಿದೇವಿ
ಜಯತು ಶ್ರೀ ಮಹಾಲಕ್ಷಿದೇವಿ
ಜಯತು ಶ್ರೀ ಗಾಯಿತ್ರಿ ದೇವಿ
ಜಯತು ತ್ರೈಪುರ ಭೈರವಿ ೨

ಜಯತು ತಾರಾ ಕಾಳಿದೇವಿ
ಜಯತು ಶ್ರೀ ಮಹಾಕಾಳಿದೇವಿ
ಜಯತು ಛಿನ್ನಮಸ್ತದೇವಿ
ಜಯತು ಶ್ರೀ ಮಾತಂಗಿದೇವಿ ೩

ಜಯತು ಷೋಡಶಿ ಶಕ್ತಿದೇವಿ
ಜಯತು ಬಹುಚರಾ ಶಾಂಭವಿ
ಜಯತು ಪೀತಾಂಬರ ಸುದೇವಿ
ಜಯತು ಮಹಾಮಾಯಿ ದೇವಿ ೪

ಜಯತು ಶ್ರೀ ಲಲಿತಾಂಬಿಕಾ
ಜಯತು ಶ್ರೀ ದುರ್ಗಾಂಬಿಕಾ

ಜಯತು ಶ್ರೀ ಮೂಕಾಂಬಿಕಾ
ಜಯತು ಶ್ರೀ ಜಗದಾಂಬಿಕಾ ೫

ಜಯತು ಶ್ರೀ ಧೂಮಾವತಿ
ಜಯತು ಮಹಾಸರಸ್ವತಿ
ಜಯತು ನಿತ್ಯ ಕಲಾವತಿ
ಜಯತು ಮಾತಾ ಪಾರ್ವತಿ ೬

## ೨೪೧

ಜಯ ಮಂಗಳ ನಿತ್ಯ ಶುಭಮಂಗಳಂ ಪ

ಮಂಗಳಂ ಆದ್ಯಂತರಹಿತಗೆ
ಮಂಗಳಂ ದಶರೂಪಧರನಿಗೆ
ಮಂಗಳಂ ವರ ದೂರ್ವಾಪುರದಲಿ ನಿತ್ತ ಕೇಶವಗೇ ಅ.ಪ.

ಹರಿಕಥೆಯ ಶ್ರೋತ್ರಗಳು ಆನಂದದಿಂ ಕೇಳೆ
ಹರಿಯ ಕೀರ್ತನೆಯನ್ನು ನಾಲಿಗೆಯು ಮಾಡೇ
ಹರಿನಾಮ ಸ್ಮರಣೆಯನು ಮನವು ತಾ ಮಾಡುತಿರೆ
ಚರಣಗಳ ಭಕ್ತಿಯಲಿ ಭಜಿಸುತ್ತಲಿರಲು ೧

ಹರಿಯೆ ಮಹಿಮೆಯ ನಂಬಿ ವಂದನೆಯ ಮಾಡುತಿರೆ
ಹರಿಯೆ ರೂಪವ ಕಂಡು ಪೂಜೆಯನು ಮಾಡೇ
ಹರಿಯೆ ದಾಸ್ಯತ್ವವನು ಶ್ರದ್ಧೆಯೊಳು ಗಳಿಸುತಿರೆ
ಹರಿಯೆ ಮಿತ್ರತ್ವವನು ಪಡೆಯುತ್ತಲಿರಲು ೨

ಹರಿ ಚರಣದಲ್ಲಾತ್ಮವನ್ನು ಅರ್ಪಿಸುತಿರಲು
ಹರಿ ಸೇವೆ ದಾಸರೀರೀತಿ ಗೈಯುತಿರೇ
ಹರುಷದಿಂ ಕಾರ್ಯವನು ನೆರವೇರಿಸುತಲೀಗ
ಹರಿಯ ಪ್ರೀತಿಗೆ ಸಿಲುಕಿ ಮುಕ್ತಿಯನು ಪಡೆಯೇ ೩

## ೨೪೨

ಮಲಗಯ್ಯ ಕೇಶವಾಮಲಗಯ್ಯ ಮಾಧವಾ
ಮಲಗಯ್ಯ ಚನ್ನಕೇಶವ ರಂಗರಾಯಾ ಪ

ಶ್ರೀಲೋಲ ಮಲಗಯ್ಯ ಪಾಡಿ ತೂಗುವೆನಯ್ಯ
ಬಾಲನ ಸಲಹಯ್ಯ ಕೂಡಿ ಪರಮ್ಮಾತ್ಮಾ ಅ.ಪ.

ಜಗವೆಲ್ಲ ಕತ್ತಲೆಯಿಂದ ಮಸುಕಿಹುದಯ್ಯ
ಖಗವೃಂದ ಪಶುವರ್ಗವೆಲ್ಲ ನಿದ್ರಿಪುದೂ
ಜಗವೆಲ್ಲ ನಿಃಶಬ್ದವಾಗಿದೆ ಶ್ರೀಹರಿ
ಗಗನದಿ ಗೂಗೆಯು ತೂಗುತಿದಯ್ಯ ೧

ಜನರೆಲ್ಲ ಹರಿ ನಿಂನ ಸೇವೆ ಮಾಳ್ಪುದ ಬಿಟ್ಟು
ಘನನಿದ್ರಾಂಗನೆಯನ್ನು ಅಪ್ಪಿ ಕೊಳ್ಳುವರೊ
ಪ್ರಣವ ಸ್ವರೂಪನೇ ಮಲಗು ನೀ ಬೇಗದಿ
ತನುವೆಂಬ ತೊಟ್ಟಿಲದಿ ತೂಗುವೆನಯ್ಯಾ ೨

ಪನ್ನಗಶಯನನೆ ಆದ್ಯಾಂತರಹಿತನೇ
ಮನ್ನಿಸಿ ಭಕ್ತರ ಪೊರೆವ ಮಾದವನೇ
ಬಿನ್ನರೂಪವ ತಾಳಿ ಕಾಯವು ದಣಿದಿದೆ
ಇನ್ನು ನಿದ್ರೆಗೆ ಪೋಗು ತೂಗುವೆನಯ್ಯ ೩

## ಗಣೇಶಸ್ತುತಿ

### ೨೪೩

ಮಾರವೈರಿ ತನುಜನೆ ಭೂರಿ ಸುಂದರಾಂಗನೆ
ಚಾರುಹಾಸ ಪಾಲಿಸೆನ್ನ ನೀರಜಭವ ಮಾಧವನುತ ಪ

ಅಜಮುಖಾಮರೇಂದ್ರರು ಭಜಿಸಿ ಸಿದ್ಧಿಗೊಂಬರು
ಸುಜನ ಕಮಲ ದಿನಕರಾಭ ಭುಜಗೆ
ವಿಧೃತ ತ್ರಿಜಗವಿನುತ ೧

ತ್ರಿಪುರ ದಹನಕಾಲದಿ ರಿಪುದವಾಗ್ನಿ ನಿಮ್ಮನು
ತಪವಗೈದು ಹರನು ಭಜಿಸೆ ಸುಪಥನ
ಕರುಣಿದೆಯೊ ವಿಭು ೨

ಧೇನುನಗರಧಾಮನೆ ಸ್ವಾಮಿ ವಿಘ್ನರಾಜನೆ
ಸಾಮಜಾಸ್ಯ ಪಾಲಿಸೆನ್ನ ಕಾಮಿತಗಳ ಕರುಣಿಸುತಲಿ ೩

## ದೇವದೇವತಾಸ್ತುತಿ

### ೨೪೪

ಅಜಸುರಸನ್ನುತ ಸುಜನವಂದಿತ ಹರೇ
ಭಜಿಸುವೆ ನಿನ್ನನು ಭುಜಗ ಭೂಷಣ ಪ್ರಿಯ ಪ

ಅತಿಶಯ ಕಾಮದಿ ಸತಿಯನಪಹರಿಸಿದ
ಪತಿತ ರಾವಣನನು ಖತಿಯಲಿ ಕೊಂದೆ ನೀಂ ೧

ತರಳ ಭಾವದ ಪರಿ ತರಳನ ಭಾರ್ಯೆಯ
ಪರಿಸಲು ವಾಲಿಯ ತರಿದೆಯೊ ಶರದಿಂದ ೨

ದಶರಥನುದರದಿ ದಶರಥನಾಗಿಯು
ಪಶುಪತಿ ಮಿತ್ರನೆ ಜನಿಸಿದೆ ಕರುಣದಿ ೩

ಮಾನವ ರೂಪನೆ ಮಾನವ ಜಿತಾಸುರ
ಮಾನವ ವಂಶಜ ಮಾನವ ರೂಪನೆ ಪೊರೆ ೪

ಧೇನುನಗರಪತಿ ದಾನವಖಂಡನ
ಧ್ಯಾನ ಸ್ವರೂಪನೆ ಜ್ಞಾನವ ಪಾಲಿಸು ೫

## ೨೪೫

ಇಂದಿರಾ ಕಾಂತನೆ ಪೊರೆ ಶ್ರೀ ಹರೇ ಪ

ನಂದ ನಂದನ ದಿವ್ಯ ಸುಂದರ ಮಂದಾರ ಅ.ಪ.

ವಲ್ಲವೀ ಕುಚತಟ ಪಲ್ಲವ ಕುಂಕುಮ
ಚೆಲ್ವಕಪೋಲನೆ ಸಲ್ಲಲಿತಾಂಗನೆ ೧

ಈಶ ಹೃದಯನಿವಾಸ ಕೇಶವ ಹರೆ ದಾಸನ
ಮನ್ನಿಸು ಭಾಸುರ ರೂಪನೆ ೨

ಬಾಲಕ ಧ್ರುವನುತ ಲೀಲಾವಾಮನ ರೂಪ
ಬಾಲ ಗೋಪಾಲ ಭೂಲೀಲಾ ವಿಹಾರಿಯೆ ೩

ಗೋಪಾಲ ಬಾಲಕ ತಮೋದೀಪಾ ಶಾರ್ಙ
ಚಾಪಾ ಪಾಪಾಳಿ ಖಂಡನ ಭೂಪ ನಿರ್ಲೇಪನೆ ೪

ಕಂಸವಂಶಾಂತಕ ವಂಶವಿನೋದಿಯೆ
ಅಂಶುಕ ಭಾಸುರ ಧೇನುಪುರಾಧೀಪಾ ೫

## ೨೪೬

ಇದು ಈಗ ಸಮಯ ಸೀತಾರಾಮ ಪ

ಇದು ಈಗ ಸಮಯವು ಪದುಮದಳಾಕ್ಷನೆ
ಸದಯದಿ ನಿಂದೆನ್ನ ಒದಗಿ ಕಾಯ್ವ ಶ್ರೀರಾಮ ಅ.ಪ.

ಖಾಸವು ತುಂಬೆ ಕಂಠದಿ ಶ್ವಾಸವು ನಿಲ್ಲೆ
ಘಾಸಿಯಾಗಲು ಘುರುಘುರುಕೆಂದು ಬೋರಿಡೆ
ಸಾಸಿರ ಚೇಳು ಕಡಿದಂತಾಗುವಾಗ ೧

ಕಾಲವು ಸಲ್ಲೆ ಪಂಚೇಂದ್ರಿಯಂಗಳು ಸಡಿಲೆ ಈ ದೇಹದಿ
ಲಾಲಾ ಮೂತ್ರವು ಮಲ ಜೋಲಿ ಬೀಳುತಲಿರೆ
ಕಾಲನ ದೂತರು ಬಂದು ಬಿಡದೆಳೆಯುತಿರುವಾಗ ೨

ನಂದನಾದಿಗಳು ನಿಂದು ಗೋಳಿಡುತಿರೆ ಬಂಧು ಬಳಗಗಳು
ಒಂದನು ನೋಡಿದೆ ಕುಂದುತ್ತ ಚಿತ್ತದಿ ನಿಂದಿರಲು
ತಂದೆ ಧೇನುಪುರಿನಾಥ ಬಂದೆನ್ನ ಕಾಯೊ ಹೋಗುವಾಗ ೩

## ೨೪೭

ಈ ಸೊಬಗನಿನ್ನಾವ ದೇವರೊಳು ಕಾಣೆ
ಈಶ ಪರಮೇಶ ಜಗದೀಶ ಶ್ರೀ ಶಿವನ ಪ

ಸುಂದರತ್ವದಿ ನೋಡೆ ತ್ರಿಪುರಸುಂದರಿಯರಸ
ಬಂಧುತ್ವದಲಿ ವಿಷ್ಣು ಸೋದರಿಯ ರಮಣ
ಅಂದ ಚಂದದಿ ನೋಡೆ ಸುಂದರೇಶ್ವರನಿವನು
ಚಂದ್ರ ನಾಗಾಭರಣ ಲೋಕ ಶಂಕರನು ೧

ಭೋಗದಲಿ ನೋಡೆ ತಾಂ ಮೋಹಿನಿಯನಾಳ್ದವನು
ಯೋಗದಲಿ ಯೋಗೇಶ ಯೋಗ ಭಾವಿತನು
ತ್ಯಾಗದಲಿ ನೋಡೆ ತಾಂ ಸರ್ವಸಂಗ ತ್ಯಾಗಿ
ನೈಗಮದಿ ತಿಳಿಯೆ ತಾಂ ನಿಗಮ ಗೋಚರನು ೨

ವೀರತನದೊಳಗಿವನು ತ್ರಿಪುರ ಸಂಹಾರಕನು
ಧೀರತನದೊಳಗಿವನು ಮದನವಿಧ್ವಂಸಿ
ಸಾರತನದೊಳಗಿವನು ಶ್ರೀ ಮಹಾದೇವನು
ಕಾರಣಕೆ ಕಾರಣನು ಜಗದಾದಿ ಗುರುವು ೩

ಹುಟ್ಟು ಸಾವುಗಳೆಲ್ಲ ಎಷ್ಟಾರ್ಥದಾಯಕನು
ಪಟ್ಟಣವು ರತ್ನ ರಜತಾದ್ರಿಯಾಗಿಹುದು
ಪುಟ್ಟ ಬಾಲನಿಗೊಲಿದು ಕಟ್ಟು ಮಾಡಿದ ಯಮನ
ಅಷ್ಟ ಮೂರ್ತಿಯು ಲೋಕ ಸೃಷ್ಟಿ ಕಾರಣನು ೪

ಎಲ್ಲಿ ನೋಡಿದರಲ್ಲಿ ವಿಶ್ವರೂಪದೊಳಿಹನು
ಎಲ್ಲಿ ನೋಡಿದರಲ್ಲಿ ಸೂಕ್ಷ್ಮದಿಂದಿಹನು
ಎಲ್ಲಿ ನೋಡಿದರಲ್ಲಿ ಸರ್ವಾತ್ಮನಾಗಿಹನು
ಎಲ್ಲಿ ನೋಡಲು ಧೇನುಪುರನಾಥ ಶಿವನು ೫

## ೨೪೮

ಏಕೆ ನಿರ್ದಯವೊ ಓ ರಾಮ ಶ್ರೀ ರಘುರಾಮ ಪ

ಸ್ಮರಿಸಿ ಸ್ಮರಿಸಿ ನಾನು ಕರಗಿ ಬೆಂಡಾದೆನೊ
ಕರುಣವಿಲ್ಲವೆ ನಿನಗೆ ಶ್ರೀ ರಘುರಾಮ
ಕರುಣವಿಲ್ಲವೆ ನಿನಗೆ ೧

ಪಾವನ ಚರಿತನೆ ಪಾವನ ಮಹಿಮನೆ
ಪಾವನ ರೂಪನೆ ಬಾ ಶ್ರೀ ರಘುರಾಮ
ಪಾವನ ರೂಪನೆ ಬಾ ೨

ಮೌನೀಶ ವಂದ್ಯನೆ ಮಾನವ ಸೇವ್ಯನೆ
ಧೇನುಪುರೀಶನೆ ಬಾ ಶ್ರೀ ರಘುರಾಮ ಧೇನುಪುರೀಶನೆ ೩

## ೨೪೯

ಕರುಣಿಸು ಕಮಲಾಸನ ಮಾತಯೆ ನೀಂ ಕರಧೃತ ವರ ಕಮಲೆ ಪ

ಶರಣವ ಪೊಂದಿಹೆ ಕರುಣದೊಳೀಕ್ಷಿಸು ವರದೆ ವರಲಕ್ಷ್ಮಿ ಅ.ಪ.

ಗಂಧ ಕುಸುಮ ಧೂಪಾವಳಿಯಿಂದಲಿ ಸುಂದರಿ ಪೂಜಿಪೆನು
ಬಂಧುರಗಾತ್ರಿಯೆ ಅಂದದೊಳೆನ್ನಯ ಮಂದಿರದೊಳಗಿಹುದು ೧

ಶ್ರಾವಣ ಮಾಸದಿ ಭಾವಕಿ ನಿನ್ನನು ಭಾವದಿ ಭಾವಿಸುತ
ತಾವಕ ಪಾದವ ಪ್ರೇಮದಿ ಪೂಜಿಪೆ ದೇವಿಯೆ ಒಲಿಯುವುದು ೨

ಚಂದನಭೂಷಿತೆ ಸುಂದರ ಗಾತ್ರೆಯ ಮಂದಹಾಸಮೊಲಿಯೆ
ಚಂದದ ಕಿಂಕಿಣಿಯಂದದರವದೊಳ್ ಬಂದು ದಯಂಗೆಯ್ಯೆ ೩

ಹರಿಮಾನಸ ಮೋಹದ ಪ್ರಾಣೇಶ್ವರಿ ಹರಸುತ ವರಗಳಿಂದ
ವರಧೇನುನಗರ ವರಜನ ಪೋಷಿಣಿ ಕರುಣಾಕರೆ ವರದೆ ೪

## ೨೫೦

ಕಾಮವೈರಿಜಾಯೆ ಪಾಹಿ ಕೋಮಲಾಂಗಿಯೇ ಶಿವೆ ಪ

ಹೇಮಕನಕ ದಾಮಭೂಷೆ ಕಾಮಿನೀಪ್ರಿಯೆ ಶಿವೆ ಅ.ಪ.

ಅಷ್ಟಬಾಹು ಶೋಭಿತಾಂಗಿ ದುಷ್ಟನಾಶಿನಿ ಶಿವೆ
ಅಷ್ಟಮೂರ್ತಿ ವಾಮರೂಪೆ ಇಷ್ಟದಾಯಕಿ ಶಿವೆ ೧

ಬಾಲಚಂದ್ರ ಭಾಸಮಾನ ಫಾಲಶೋಭಿತೆ ಶಿವೆ
ನೀಲವೇಣಿ ವಿಮಲವಾಣಿ ಕಾಲರೂಪಿಣಿ ಶಿವೆ ೨

ಚಕ್ರರಾಜ ಮಧ್ಯವರ್ತಿ ಶಕ್ತಿಕಾರಿಣಿ ಶಿವೆ
ವಕ್ರಕೇಶಿ ಮುಖ್ಯದನುಜ ಶಕ್ತಿಹಾರಿಣಿ ಶಿವೆ ೩

ಕರುಣಿಸಿಂದು ವರವ ದೇವಿ ಚರಣಕೊಂದಿಪೆ ಶಿವೆ
ಸುರನರಾದಿ ಗೀಯಮಾನ ಪಾದಪಲ್ಲವೆ ಶಿವೆ ೪

ನಾಗವೇಣಿ ಧೇನುನಗರ ಸರ್ವಮಂಗಳ ಶಿವೆ
ಭೋಗ ಭಾಗ್ಯ ಸುಖಗಳಿತ್ತು ಪೊರೆಯೆ ಪಾರ್ವತಿ ಶಿವೆ ೫

## ೨೫೧

ಕಾಲ ಚಕ್ರವನೇರಿ ಭಾಸಿಪ ಬಾಲ ಸೂರ್ಯನ ವಂದಿಪೆ ಪ

ನೀಲ ಮೃಗಧರ ಕಾಲ ರೂಪನೆ ಬಾಲ ಚಂದ್ರನೆ ಪೂಜಿಪೆ ಅ.ಪ.

ಸೃಷ್ಟಿ ರೂಪನೆ ವೃಷ್ಟಿದಾಯಕ ಶ್ರೇಷ್ಠ ಭೂಮಿಯ ಪುತ್ರನೆ
ಕಷ್ಟಹರ ಸುಜ್ಞಾನ ಮೂರುತಿ ಇಷ್ಟದಾಯಕ ಸೌಮ್ಯನೆ ೧

ದೇವಗಣಗುರು ಕ್ಷೇಮದಾಯಕ ಜೀವವರ ಗುರು ಪಾಲಿಸೈ
ದೇವಶುಕ್ರನೆ ಕಾವ್ಯರೂಪನೆ ಕಾವ್ಯ ಸೇವನೆ ಪೋಷಿಸೈ ೨

ಪುಂಗವರ ಮಹಿಮಾಂಗ ಶನಿ ಸನ್ಮಂಗಳಾತ್ಮಕ ದೇವನೆ
ಮಂಗಳವನೆಸಗೆಂದು ವಂದಿಪೆ ರಾಹುವೆ ವರಕೇತುವೆ ೩

ಶ್ರೀನಿವಾಸನೆ ಪಾಲಿಸುವುದೆಂದೀ ನವಗ್ರಹ ಭಕ್ತಿಯಿಂ
ಧೇನುನಗರ ಜನೇಶನೇವರ ವೇಂಕಟೇಶನೆ ಪೋಷಿಸೈ ೪

## ೨೫೨

ಕಾಲ ಭುಜಗವೇಣಿಯೆ ಪೊರೆಯೆ ಲೋಲೆ ಶ್ರೀ ವರಲಕ್ಷ್ಮಿಯೆ ಪ

ಕಾಲಕಾಲ ವರ ಮೋಹದ ಸೋದರಿ
ಬಾಲಚಂದ್ರಸಮ ಫಾಲ ವಿರಾಜಿತೆ ಅಪ

ಇಂದು ಸುಂದರ ಭಾಸಿತೆ ವಿನುತೆ ಬಂಧುರಾಲಕ ಭೂಷಿತೆ
ಕುಂದ ಕುಸುಮಸಮ ಮಂದಹಾಸದಿ ಬಂದು
ಸಲಹು ವರ ಇಂದಿರೆ ವಿಮಲೆ ೧

ಅಂಬುಜಾನನೆ ಕಾಮಿನಿ ವಿಮಲೆ ಬಿಂಬರದನ ವಾಸೆಯೆ
ಬಿಂಬವಿಡಂಬಿನಿ ಕುಂಭಸಮಸ್ತನಿ
ಶಂಬರವೈರಿ ಶುಭಂಕರಿ ಮಹಿತೆ ೨

ಪೊಳೆವ ಲೋಚನ ಥಳಕು ದೇವಿ ಬೆಳೆವ ಮಿಂಚಿನ ಬೆಳಕು
ಅಳಿಕುಲ ಕುಂತಳ ದಳರುಚಿ ಬಿಂಬಿತ
ದಳಿತ ಕುಸುಮಾವಳಿ ಕಲಿತ ಮುಖಾಮಲೆ ೩

ಭೃಂಗವೇಣಿಯೆ ಭಜಿಪೆ ತಾಯೆ ಶೃಂಗಾರ ಭೂಷೆ ಮಂಗಳೆ
ತುಂಗ ಕುಚಭರ ಭಂಗಿತ ಮಧ್ಯೆಯೆ
ಅಂಗಜ ಮಾಧವ ಮಂಗಳರೂಪೆ ೪

ಮಾನಿನಿ ಗುಣಭೂಷಿತೆ ಸತತಂ ಸಾನುರಾಗದೆ ಸಲಹು
ಧೇನುನಗರ ಪರಿಪಾಲನ ಚತುರೆ ವಿನೋದೆ
ಸರ್ವಸುಖ ಸಂಪದೆ ವರದೆ ೫

## ೨೫೩

ಕ್ಷೀರ ಜಲಧಿ ಜಾತೆ ಬಾಲೆ ಸಾರಸಾಕ್ಷಿ ಮಂಗಳೆ
ಹಾರನೂಪುರಾದಿ ಲೋಲೆ ಬಾರೆ ಕಮಲೆ ನಿರ್ಮಲೆ ಪ

ರಾಜ ರಾಜ ಪೂಜಿತಾಂಘ್ರಿ ರಾಜಗೃಹ ನಿವಾಸಿನಿ
ರಾಜಕಾಂತಿ ಕೋಮಲಾಂಗಿ ರಜಿಸೌ ಮಹಾತ್ಮಳೆ ೧

ಮಂಗಳಾಂಗಿ ಭೃಂಗವೇಣಿ ಅಂಗನಾ ಶಿರೋಮಣಿ
ಅಂಗಭವ ಸುಮಾತೆ ಪೊರೆಯೆ ಸಂಗತಾರ್ತಿಹಾರಿಣಿ ೨

ದೀನನನ್ನು ನೋಡು ದಯದಿಂ ಸಾನುರಾಗದಿಂದಲಿ
ಧೇನುನಗರ ಪಾಲಿನಿ ಶ್ರೀ ಮಾನಿನೀ ಹರಿಪ್ರಿಯೆ ೩

## ೨೫೪

ಕ್ಷೀರಸಾಗರ ಸಂಭವೆ ರಮೆ ಪಾಲಯಾಶು ಮಾಂ ದೇವಿ ಪ

ಮಾರಜನಕ ಮೋಹನಾಂಗಿಯೆ ಸಾರಸಾಕ್ಷಿಯೆ ವರಲಕ್ಷ್ಮಿಯೆ ಅ.ಪ.

ಪದ್ಮಗಂಧಿಯೆ ಪದ್ಮ ವದನೆಯೆ ಪದ್ಮನೇತ್ರೆಯೆ ಪದ್ಮಹಸ್ತಯೆ
ಪದ್ಮನಾಭಿಯೆ ಪದ್ಮ ಚರಣೆಯೆ
ಪದ್ಮನಾಭ ಸುಪದ್ಮಿನೀ ಭಾಮೆಯೆ ೧

ಇಂದು ಸೋದರಿ ಸುಂದರೀ ಮಣಿ
ಚಂದ್ರಮಂಡಲೆ ಮಧ್ಯಭಾಸುರೆ
ಇಂದು ಪೂಜಿಸಿ ವಂದಿಸುವೆನು ಇಂದಿರೇಯೇ
ಶ್ರೀ ಸಿಂಧುರಗಮನೆಯೆ ೨

ನಾಗವೇಣಿಯೆ ಬೇಡಿಕೊಂಬೆನು
ಭೋಗಭಾಗ್ಯವನಿತ್ತು ನೀ ಪಾಲಿಸು
ನಾಗಲಾಲಿತೆ ಶ್ರೀ ಜಯಲಕ್ಷ್ಮಿಯೆ ಬೋಗಿನಿಯೆ
ಶ್ರೀ ಧೇನುಪುರೀಶ್ವರಿ ೩

## ೨೫೫

ಕೈಲಾಸವಾಸ ಶ್ರೀತಜನ ಶುಭಕರ ಗಿರಿಜಾ ಹೃದಯ ವಿಲಾಸ
ಹಿಮ ಹಿಮಕರ ಧವಳ ಸುಭಾವ ದೇವ ದೇವ ಪ

ದೇವ ಸರಸಿಜಭವ ವಿನುತಪ್ರಭಾವ ಜಲಧರ
ಸಮಸುರುಚಿರಗ್ರೀವ ವರ ಮೇರುಶರಾಸನ
ದೇವ ದೇವ ಪರಮೇಶ ನಿರಂಜನ
ಪಾರ್ವತೀರಮಣ ಪಾಹಿ ಜಗನ್ಮಯ ೧

ಸಾಂಬ ನುತಮುನಿಜನ ದಿವಿಜಕದಂಬ
ಹರಿಶರಜಿತ ಪುರ ನಿಕುರುಂಬ
ಜಿತಧೃತ ಮನಸಿಜ ಶಶಿಬಿಂಬ ರವಿ ಸೋಮ ವಿಲೋಚನ
ಫಾಲನೇತ್ರ ಗಂಗಾಧರ ಮೃಡಹರ ಕಾಲಕಾಲ
ತ್ರಿಪುರಾಂತಕ ಶಂಕರ ೨

ಈಶ ವಿಲಸಿತ ಮೃದು ಮಧುರಸುಹಾಸ ಭವ
ವಿದಳನ ವರದ ಗಿರೀಶ
ಪರತರ ಶಿವ ಪರಮ ಮಹೇಶ ನಿಗಮಾಗಮ ಗೋಚರ
ವ್ಯೋಮಕೇಶ ಶಶಿಶೇಖರ ಭಾಸುರ ಭೋಗಿ ಭೂಷ
ವರ ಧೇನು ಪುರೀಶ್ವರ ೩

## ೨೫೬

ಕೌಮಾರಿಮಿತ್ರೆ ಕೋಮಲಗಾತ್ರೆ ಪ್ರೇಮದಿ
ಪಾಲಿಸು ಸೋಮಸುಭಾಸೆ ಪ

ಮಂದಾರವಾಸೆ ಸುಂದರಹಾಸೆ
ಇಂದೀವರಾಕ್ಷಿಯೆ ವಂದಿತ ಜಾಯೆ ೧

ಭೃಂಗಾಲಕಾಂತೆ ಅಂಗಜಾಕ್ರಾಂತೆ
ಶೃಂಗಾರಶೋಭಿತೆ ಮಂಗಳಮಾತೆ ೨

ಹೇಮಾಂಬರಾಂಗಿ ಶ್ಯಾಮಲಾಪಾಂಗಿ
ಧೇನುಪುರಾಧಿಪೆ ಕೋಮಲಾಲಾಪೆ ೩

## ೨೫೭

ಜಾನಕೀಪತೆ ಪೊರೆ ಸೂನಭಾಣ ಕೋಟಿ ರೂಪ
ಮಾನವಾಗ್ರಗಣ್ಯ ಭೂಪ ಪ

ರಾವಣಾದಿ ದನುಜ ಹೃದಯ ಜೀವಮಕರ ಧೀವರೇಶ
ಪಾವಮಾನಿ ಚಿತ್ತಕಮಲ ಭಾವ ಸೂರ್ಯ ರಾಮಚಂದ್ರ ೧

ಸೂರ್ಯಕೋಟಿ ಭಾಸಮಾನ ಧೈರ್ಯ ಜಲಧಿ ದನುಜ ಸಂಘ
ಶೌರ್ಯ ವಾರಿವಾಹವಾತ ಸೂರ್ಯವಂಶ ಸುಪ್ರಕಾಶ ೨

ಇಂದುಕಾಂತಿ ಕೋಮಲಾಸ್ಯ ಕುಂದರದನ ಮಂದಹಾಸ
ದಿಂದ ಧೇನುನಗರಪತಿಯೆ ಬಂದು ಪಾಲಿಸೈ ಶ್ರೀಹರಿಯೆ ೩

## ೨೫೮

ದಿವ್ಯ ಸುಂದರ ವಿಗ್ರಹ ಜಯ ಜಯ
ಸರ್ವಮಂಗಳಸಾರ ಜಯ ಜಯ
ಭವ್ಯ ಸಚ್ಚಿದಾನಂದ ಜಯ ಜಯ ಶ್ರೀರಾಮ ೧

ವೇದ ವೇದಾಂತವೇದ್ಯ ಜಯ ಜಯ
ಬೋಧನೈಕ ಸುಖ ಜಯ ಜಯ
ವಾದ ದೂರವರ ಜಯ ಜಯ ಶ್ರೀರಾಮ ೨

ಸತ್ಯ ಸಂಕಲ್ಪೇಶ್ವರ ಜಯ ಜಯ ನಿತ್ಯ ನಿರ್ಗುಣ
ನಿರಂಜನ ಜಯ ಜಯ
ತತ್ವ ತಾರಕ ಮಂತ್ರ ಜಯ ಜಯ ಶ್ರೀರಾಮ ೩

ಸೃಷ್ಟಿರಕ್ಷಣ ಸುದಕ್ಷ ಜಯ ಜಯ ಅಷ್ಟಮೂರ್ತಿ
ವಿಶ್ವರೂಪ ಜಯ ಜಯ
ಕೃಷ್ಣ ವಿಷ್ಣು ವಾಸುದೇವ ಜಯ ಜಯ ಶ್ರೀರಾಮ ೪

ಪುಂಡರೀಕ ಶುಭನೇತ್ರ ಜಯ ಜಯ
ಚಂಡಕೋದಂಡಧರ ಜಯ ಜಯ
ಚಂಡಕಿರಣ ಕುಲತಿಲಕ ಜಯ ಜಯ ಶ್ರೀರಾಮ ೫

ಭಕ್ತ ಮಾನಸ ಹಂಸ ಜಯ ಜಯ
ಮುಕ್ತಿದಾಯಕ ರಾಮ ಜಯ ಜಯ
ಮಿತ್ರ ಪಾಲನ ಲೋಲ ಜಯ ಜಯ ಶ್ರೀರಾಮ ೬

ಕಾಮಕೋಟಿ ಸಮಾನ ಜಯ ಜಯ
ಕಾಮಿತ ಫಲದಾತ ಜಯ ಜಯ
ಸೋಮವಂಶಜ ದೇವ ಜಯ ಜಯ ಶ್ರೀರಾಮ ೭

ಮತ್ಸ್ಯ ಕೂರ್ಮ ವರಾಹ ಜಯ ಜಯ
ಮರ್ತ್ಯಸಿಂಹ ವಾಮನ ಜಯ ಜಯ
ಶಕ್ತ ಭಾರ್ಗವ ಕಲ್ಕಿ ಜಯ ಜಯ ಶ್ರೀರಾಮ ೮

ಭಾನುಮಂಡಲ ಭಾಸುರ ಜಯ ಜಯ
ಮೌನಿಮಂಡಲ ಮಧ್ಯಗ ಜಯ ಜಯ
ಧೇನುಪುರಾವನಶೀಲ ಜಯ ಜಯ ಶ್ರೀರಾಮ ೯

## ೨೫೯

ನಮಾಮಿ ದಿವ್ಯ ತರಂಗೆ ಶಿವೆಗಂಗೆ ಕೃಪಾಪಾಂಗೆ ನಮಾಮಿ ಪ

ದಯಾಸಾರೆ ಸುಧಾಕಾರೆ ಧಿಯಾದೊರೆ ಗುಣಾಕರೆ
ತ್ರಯೀವಾಣಿ ಮಹಾವೇಣಿ ಸುರೂಪಿಣಿ ನಮಾಮಿ ೧

ಶುಭಂ ದೇಹಿ ಕೃಪೆ ಪಾಹಿ ಶುಭೇ ಭಾಗೀರಥೀ ಸತೀ
ಪರಂಪಾರೇ ಜಲಾಧಾರೆ ಜಿತಕ್ಷೀರೆ ನತಾಮರೆ ನಮಾಮಿ ೨

ಗಿರೀಶಾಂಕಾತ್ ಪರಂಶೈಲಾತ್ ಧರಾಂ ಪ್ರಾಪ್ತೇ ಮುನೀಹಿಮಾಂ
ಮಹಾಭೂತೆ ಸುವಿಖ್ಯಾತೇ ಧರಾನಾಥೇ ಸತಾಂಗತೇ ನಮಾಮಿ ೩

ವರಂಧೇನುಪುರಸ್ತೋಹಂ ಭಜೆ ದೇವೀಂ ಭವಾಪಹಾಂ
ಮಹಾವಿಷ್ಣೋಸ್ಸುತಾಂ ಪುಣ್ಯಾಂ ಮುನೇಃ
ಕನ್ಯಾಂ ಸುಪಾವನಾಂ ನಮಾಮಿ ೪

## ೨೬೦

ನರಸಿಂಹ ಮಂತ್ರವೊಂದಿದು ಸಾಲದೆ
ದುರಿತಕೋಟಿಗಳ ತಾಂ ಪರಿಹರಿಸುವುದಕೆ ಪ

ಭೂತ ಬೇತಾಳಗಳ ನಿಗ್ರಹಿಸುವೀ ಮಂತ್ರ ಪಾತಕ
ಗೃಹ ಬೃಂದ ಬಂಧನದ ಮಂತ್ರ
ಕಾತರವ ವಿಧ್ವಂಸ ಗೈಯುತಿಹ ವರ ಮಂತ್ರ
ಮಾತೆಯಂದದಿ ಪಾಲಿಸುತ್ತಲಿಹ ಮಂತ್ರ ೧

ನಿತ್ಯ ಸಂಪದವಿತ್ತು ರಕ್ಷಿಸುವುದೀ ಮಂತ್ರ ಶಕ್ತಿ ಸೌಖ್ಯವ
ಮುದವ ಕರುಣಿಸುವ ಮಂತ್ರ
ಭಕ್ತಿ ಸೌಭಾಗ್ಯ ಪರಮಾಯವೀಯುವ ಮಂತ್ರ ಸತ್ಯ
ನಿರ್ಮಲ ಮನವನಾಗಿಸುವ ಮಂತ್ರ ೨

ಮೃತ್ಯು ಮುಖದಿಂದತ್ತಿ ಮುದ್ದಿಸುವುದೀ ಮಂತ್ರ
ಸತ್ವಗುಣವನು ವರ್ಧಿಸುತ್ತಲಿಹ ಮಂತ್ರ
ಭಕ್ತರನು ವಾತ್ಸಲ್ಯದಿಂದ ಸಲಹುವ ಮಂತ್ರ ಅತ್ಯಾದರದಿ
ಬಿಡದೆ ಜೊತೆಯೊಳಿಹ ಮಂತ್ರ ೩

ಈ ಮಂತ್ರ ಮಹಿಮೆಯನು ಪ್ರಹ್ಲಾದ ತಾ ಬಲ್ಲ ಸ್ವಾಮಿ
ಶಂಕರ ಪದ್ಮಪಾದ ಲಕ್ಷ್ಮೀಯರು
ಪ್ರೇಮದಿಂ ಜಪಗೈವ ವರದೀಕ್ಷಿತಂ ಗರಿವು ಭೂಮಿಯೊಳಗೀ
ಮಂತ್ರ ಸರ್ವ ಸಾಧನವು ೪

ಮಂಗಳಂ ಲಕ್ಷ್ಮೀಶ ನರಸಿಂಹ ದೇವರಿಗೆ ಮಂಗಳಂ ಭಕ್ತಾರ್ತಿ
ನಾಶ ಮುರಹರಗೆ
ಮಂಗಳಂ ಯೋಗೀಶ ಪುಂಡರೀಕಾಕ್ಷನಿಗೆ ಮಂಗಳಂ
ಧೇನುಪುರ ಕೃಷ್ಣ ವಿಷ್ಣುವಿಗೆ ೫

## ೨೬೧

ಪರಿಭಾವಿಪೆ ತಾವಕರೂಪಂ
ಕರುಣಾರಸಮಾರ್ಜಿತ ಸಂತಾಪಂ ಪ

ವನಮಾಲಿಕಾ ಭಾಸಿತದೇಹಂ
ಮುನಿಮಾನಸ ಪೂಜಿತ ನಿರ್ಲೇಪಂ
ವನರುಹಾಸನ ಮುಖ್ಯ ವಂದಿತ ಗೌರವಂ ನರ ಪುಂಗವಂ
ಮನುಕುಲಾರ್ಚಿತ ಪಾದಪಂಕಜ ರಾಘವಂ ಸುರಧೇನುವಂ ೧

ದಶಕಂಧರ ಕಂಧರ ವಾತಂ ದಿಶಿ
ಶೋಭಿತ ಪಾವನ ಕೀರ್ತಿಯುತಂ
ಪಶುಪತಿ ಪ್ರಿಯಮವ್ಯಯಂ ಸುರಪೂಜಿತ ಗುಣಭೂಷಿತಂ
ಶಶಧರಾನನೆ ಜಾನಕೀ ಪ್ರಿಯ ಭಾಸುರಂ ಕರುಣಾಕರಂ ೨

ಖರದೂಷಣ ಶಾಸಕ ದೇವಂ ಶರಣಾಗತ ಸಂರಕ್ಷಣ ನಿರತಂ
ಚರಣಪಲ್ಲವನುನ್ನ ದುಂದುಭಿಕಾಯಂ ಅಕ್ಷಯಂ ಅದ್ವಯಂ
ಸುರವರಂ ವರಧೇನುನಾಮಕ ನಗರನಾಯಕಂ ಹಾಯಕಂ ೩

## ೨೬೨

ಪಾಲಯ ನರಕೇಸರಿ ಸತತಂ ಪರಿಪೂರ್ಣ ಗುಣಾಕರ ಪ

ಬಾಲಕನುತಿಹಿತ ದೇವ ವಿನುತ ಸಂಜೀವ ದೇವ
ಲೀಲಾ ಖೇಲನ ಸ್ತಂಭ ವಿದಾರಣ ೧

ರಾಕ್ಷಸ ಗರ್ಭ ನಿರ್ಭೇದನ ನಿಪುಣ ಸಿಂಹನಾದ ಶ್ರೀದ
ದಕ್ಷೀ ವಿಪಕ್ಷಸು ಶಿಕ್ಷಣ ದಕ್ಷನೆ ೨

ಶೂರ ಹಿರಣ್ಯಕ ಹೃದಯ ದಳನಸಂಹಾರ ವೀರ
ಹಾರ ವಿರಾಜಿತ ಸಾರ ಪೊರ ಹರೆ ೩

ಸರ್ವದನುಜ ಕುಲ ಗರ್ವ ವಿದಾರಣ ಕಾಲ ಲೋಲ
ಸರ್ವಭುವನ ಭಯ ಭಂಜನ ರಂಜನ ೪

ಶ್ರೀ ಲಕ್ಷ್ಮೀ ಕುಚ ಕುಂಕುಮ ಪಂಕಿಲ ದೇಹ ದೇವ
ನೀಲ ನಿಭಾಕೃತಿ ಧೇನುನಗರ ಪತೇ ೫

## ೨೬೩

ಪಾಲಿಸು ಪಾಲಿಸು ಪಾರ್ವತಿಪತಿಯೆ ಪಾಲಿಸು
ಪಾಲಿಸು ಪನ್ನಗಧರನೆ ಪ

ಅಂಧಕ ಮಥನನೆ ಗಂಗಾಧರನೆ
ಕುಂದೇಂದು ನಿರ್ಮಲ ಭೂತಿ ಭೂಷಿತನೆ ೧

ಶಂಕರ ಭವಭಯ ಶಂಕಾವಿನಾಶ
ನ್ಯಂಕುಭಾಸಿತ ಕರಪಂಕಜ ಭೂಷ ೨

ಕೈಲಾಸ ವಾಸನೆ ಕಾಲಕಂಧರನೆ
ಶೈಲಜಾ ಕುಚತಟ ಕುಂಕುಮ ಭಾಸ ೩

ಗಂಗಾಜನಕ ಪ್ರಿಯ ಅಂಗಜ ಹರಣ
ತುಂಗಭುಜಗ ಚಂದ್ರ ಸಂಗಮಹಿಮ ೪

ಲೀಲಾತಾಂಡವ ಗೌರೀ ಲಾಲಿತ ಹೃದಯ
ಬಾಲಕ ನುತಿಪ್ರೀತ ಧೇನು ಪುರೀಶಾ ೫

## ೨೬೪

ಪಾಲಿಸು ಪಾಲಿಸು ಪಾರ್ವತಿ ತನಯನೆ ಫಾಲಚಂದ್ರಯುತನೆ
ಕಾಲ ಕಾಲ ಸಂಭಾವನಲೋಲುಪ ವಾರಿಜಾಸ್ಯನುತನೆ ಪ

ಅಜ ಸುರಪತಿನುತ ಭಜಿಸುವೆ ದೇವನೆ ಸುಜನ ವಂದಿತ ಚರಣ
ಗಜವದನಾ ಸುರಕುವಲಯ ದಿನಕರ ಧೂರ್ಜಟಿಸುತ ಗಣಪ ೧

ಕಾಮಿತ ಫಲಗಳ ಪಡೆಯಲು ಸುಜನರು ನೇಮದಿ ಪೂಜಿಪರು
ಸಾಮಜ ವದನನೆ ಭಕ್ತರಭೀಷ್ಟವ ಪ್ರೇಮದಿ ಕರುಣಿಸುತ ೨

ಗಾನಲೋಲ ವರತಾಂಡವ ಪ್ರೀತನೆ ಕೋಮಲಾಂಗ ಸತತಂ
ಧೇನುನಗರ ಸಂರಕ್ಷಣ ದಕ್ಷನೆ ಸಾನುರಾಗದಲನಿಶಂ ೩

ಇಂದ್ರಾದಿ ದಿವಿಜರೆಲ್ಲ ಕುಂದುತ್ತ ದೈತ್ಯ ಭಯದಿಂ
ಸುಂದರಿ ನಿನ್ನ ಭಜಿಸೆ ನಿಂದೆಲ್ಲರನ್ನು ಪೊರೆದೆ ೪

ಕಮಲಾಕ್ಷಿ ವಿಮಲಪಾಣಿ ಕಮಲಾಪ್ತ ಮುಖ್ಯರಮಣಿ
ಸುಮಶೋಭಮಾನವೇಣಿ ಕಮನೀಯ ದಿವ್ಯಪಾಣಿ ೫

ಶಾಕಿನಿರೂಪೆ ದೇವಿ ಲೋಕೈಕ ವೀರ್ಯ ಧೈರ್ಯ
ಬೇಕಾದ ವರಗಳಿತ್ತು ಶ್ರೀಕಾರ ಶಕ್ತಿಯೆನ್ನ ೬

ಜ್ಞಾನವು ಮೌನ ಜಯವುಂ ಧ್ಯಾನ ಸುಮಂಗಲತ್ವಂ
ಮಾನ ಸುಪುತ್ರ ಹಿತಮಂ ಧೇನು ಪುರೀಶೆ ಕೊಟ್ಟು ೭

## ೨೬೫

ಪಾಲಿಸು ಯದುಪತಿಯೆ ಶ್ರೀಹರಿಯೆ ಹರಿಯೆ ಹರಿಯೆ ಪ

ನಾನಾಯೋನಿಗಳಲ್ಲಿ ಶ್ವಾನನಂದದೆ ಸುತ್ತಿ
ದೀನನಾಗಿಯೆ ಮುಕ್ತಿ ಕಾಣದೆ ಸುಳಿವೆ
ಶ್ರೀಹರಿಯೆ ಹರಿಯೆ ಹರಿಯೆ ೧

ದೇಶಕೋಶವು ಬಂಧು ಪಾಶದೊಳಗೆ ಸಿಕ್ಕಿ
ದೋಷಗೈವೆ ಆಶೆಯಬಿಡೆನಾ ಶ್ರೀಹರಿಯೆ ಹರಿಯೆ ಹರಿಯೆ ೨

ಅಂಗವು ಕುಂದಿತು ಭಂಗವ ಪೊಂದುವೆ
ಮಂಗಳ ಕಾಣದೆ ಹಿಂಗುತ್ತಲಿರುವೆ
ಶ್ರೀಹರಿಯೆ ಹರಿಯೆ ಹರಿಯೆ ೩

ಧೇನುನಗರ ದೊರೆ ಭಾನುಸನ್ನಿಭ ಶೌರೆ
ದೀನನಾಗಿಯೆ ನಾಂ ಧ್ಯಾನವ ಗೈವೆ
ಶ್ರೀಹರಿಯೆ ಹರಿಯೆ ಹರಿಯೆ ೪

## ೨೬೬

ಪಾಲಿಸು ಶ್ರೀಹರಿಯೆ ಯದುಭೂಮಿಪತಿಯೆ ಪ

ಬಾಲಾರ್ಕ ಸಮಮುಖ ಲೋಲ ಮುರಳೀಧರ ಅ.ಪ.

ನಂದ ನಂದನ ದಿವ್ಯ ಸುಂದರ ರೂಪನೆ
ಬಂಧುರಾಲಕ ವರ ಮಂದಹಾಸನೆ ೧

ಗೋಪ ಸುಂದರೀಗಣ ದೀಪವಿರಾಜಿತ
ತಾಪಿಂಛ ಪಲ್ಲವ ನೂಪುರ ಶೋಭಿತ ೨

ಕಾಳೀಯ ಮರ್ದನ ನೀಲಾಂಬುದ ಪ್ರಭ
ನಾಳೀಕಾನನ ಚಿತ ಲೋಲಾಕ್ಷಿ ಚಿತ್ತನೆ ೩
ಅಂಗಜಪಿತ ಭವ ಭಂಗ ಮಾನುಷ ವೇಷ
ಶೃಂಗಾರ ಶೋಭಿತ ಭೃಂಗಾಲಕಾರ್ಚಿತ ೪

ಧೇನುನಗರ ದೊರೆ ಸಾನುರಾಗದಿ ಪೊರೆ
ಗಾನ ವಿನೋದ ಹರೆ ಭಾನುಸನ್ನಿಭ ಶೌರೆ ೫

## ೨೬೭

ಪಾಲಿಸೆನ್ನ ಪಾರ್ವತೀಶ ಫಾಲಲೋಚನ
ಲಾಲಿಸೆನ್ನ ನುತಿಯ ದೇವ ಕಾಲಕಂಧರ ಪ

ಪುಲ್ಲನಯನ ಚಲ್ವವದನ ಮಲ್ಲಿಕಾರ್ಚಿತ
ಬಿಲ್ವ ಪಲ್ಲವಾದಿಪ್ರಿಯನೆ ಶೈಲಜಾಪತೆ ೧

ಶಂಕರೇಂದುಮೌಳಿ ವಿನುತ ಪಂಕಜಪ್ರಿಯ
ಸಂಕಟಾದ್ರಿ ದೇವರಾಜ ಲೋಕಪಾಲಕ ೨

ಪಾಹಿ ಪಾಹಿ ಕಾಲಕಾಲ ಮೋಹನಾಶಕ
ಸ್ನೇಹದಿಂದಲೆನ್ನ ಬಿಡದೆ ವಾಮದೇವನೆ ೩

ಧಾನವಾಂತಕಾದಿ ಹೃದಯ ಜೀವ ರೂಪನೆ
ಧೇನುನಗರ ದಿವ್ಯ ಕಮಲ ಭಾನುರೂಪನೆ ೪

## ೨೬೮

ಪಾಹಿ ಕಾಳಿಕೆ ಪಾಹಿ ದಿವ್ಯ ಚೂಳಿಕೆ ಪ

ಪಾಹಿ ಲೋಕ ಸನ್ನುತೆ ಪಾಹಿ ಪುರಂದರ ವಂದಿತೆ ಅ.ಪ.

ರಕ್ತಬೀಜ ಶಿಕ್ಷಣಿ ಭಕ್ತವೃಂದ ರಕ್ಷಣಿ
ಶಕ್ತಿವಿಜಿತ ರಾಕ್ಷಸೆ ನಿತ್ಯಮಂಗಲ ಸಾಹಸೆ ೧

ಕ್ರೂರ ಭಂಡ ಭಂಜಿನಿ ಶೂರ ಪದ್ಮಮರ್ಧಿನಿ
ನರಸಿಂಹ ಸೋದರಿ ಪಾಲಯಮಾಂ ವನ ಶಂಕರಿ ೨

ಮೌನಿಹೃದಯ ರಂಜಿನಿ ಮಾನವೇಂದ್ರ ಪೋಷಿಣಿ
ಧೇನುನಗರ ಪಾಲಿನಿ ಮಾನಿನಿ ಶ್ರೀ ಶಿವ ಭಾಮಿನಿ ೩

## ೨೬೯

ಪೂಜಿಸುವೆನು ದೇವಿಯ ಶ್ರೀನಿತ್ಯ ಗೌರಿಯ ಪ

ಪರಶಕ್ತಿರೂಪೆಯ ಪರತತ್ವಮೂರ್ತಿಯ
ಪರಮಮಂಗಳ ದೇವಿಯ ಪರಮಾನುರಾಗದಿ ೧

ಮೃಗಧರಮೌಳಿಯ ಜಗದುದ್ಧಾರಾಂಬೆಯ
ಮಿಗೆ ಮನದಲಿ ಧ್ಯಾನಿಸಿ ಅವಾಹಿಸುತ್ತಲಿ ೨

ಸರ್ವಲೋಕೇಶ್ವರಿಯ ಸರ್ವಾಲಂಕಾರೆಯ
ಸರ್ವಾಂಗ ಸುಂದರಿಯ ಆಸನವನಿತ್ತು ೩

ವಿದ್ಯಾಧಿದೇವಿಯ ಶುದ್ಧಚಿದ್ರೂಪೆಯ
ಪಾದ್ಯಾರ್ಘ್ಯಾಚ ಮನದಿಂದ ಪರಿಶುದ್ಧ ಹೃದಯದಿ ೪

ಪಂಚಮವಾಣಿಯ ಚಂಚರಿಕಾಂಬೆಯ
ಪಂಚಾಮೃತವ ಜಲವ ಮುದದಿಂದ ತಳಿಯುತ ೫

ಸುಂದರ ಹಾಸೆಯ ಸೌಂದರ್ಯ ಶರದಿಯ
ಚಂದ್ರಗಾವಿಯ ನುಡಿಸಿ ಕಂಚುಕವ ಗೊಡಿಸಿ ೬

ಚಂದ್ರ ಬಿಂಬಾಸ್ಯೆಯ ಸಿಂಧುರ ಗಮನೆಯ
ಇಂದು ತಿಲಕವ ತಿದ್ದುತ ಗಂಧವನೆ ತೊಡೆದು ೭

ಮಂಗಳ ಮಾತೆಯ ಮಂಗಳ ಮೂರ್ತಿಯ
ಮಂಗಳ ದ್ರವ್ಯದಿಂದ ಶೃಂಗಾರ ವೆಸಗಿ ೮

ಲೀಲಾವಿನೋದೆಯ ಬಾಲ ಕುಚಾಂಬೆಯ
ಮಾಲೆಯ ನರ್ಪಿಸುತ ಕುಸುಮಗಳ ನಿಚಯದಿ ೯

ಪಾಪನಿಹಂತ್ರಿಯ ಶ್ರೀಪತಿ ಸೋದರಿಯ
ಧೂಪ ದೀಪವ ಕಲ್ಪಿಸಿ ಅಚಮನವಿತ್ತು ೧೦

ಸತ್ಯಸಂಕಲ್ಪೆಯ ನಿತ್ಯಸಂತುಷ್ಟೆಯ
ಉತ್ತಮ ಫಲಭಕ್ಷ್ಯದಿಂ ನೈವೇದ್ಯ ವೆಸಗಿ ೧೧

ಕಂಬುಸುಕಂಠಿಯ ಬಿಂಬಫಲಾಧರೆಯ
ತಾಂಬೂಲ ದಕ್ಷಿಣೆಯಂ ಭಕ್ತಿಯೊಳರ್ಪಿಸಿ ೧೨

ಮಂಗಳ ಮೂರ್ತಿಯ ಮಂಗಳ ಗೌರಿಯ
ಮಂಗಳಾರತಿಯ ಗೈದು ಆಚಮನವಿತ್ತು ೧೩

ಕಲಕೀರವಾಣಿಯ ಕಲಹಂಸಗಮನೆಯ
ಲಲನಾಶಿರೋಮಣಿಯ ಬಲವಂದುನಮಿಸಿ ೧೪

ಜಯ ಜಯ ಗೌರಿಯೆ ಜಯ ಜಯ ಮಾತೆಯೆ
ಜಯದೇವಿ ಕರುಣಿಸು ನೀಂ ವರ ಸುಪ್ರಸಾದವ ೧೫

ಮಾನಿನಿ ದೇವಿಯು ಮೌನಿ ಸುವಂದ್ಯೆಯು
ಧೇನುಪುರೀಶ್ವರಿಯು ಸುಪ್ರೀತೆಯಾಗಲಿ ೧೬

## ೨೭೦

ಪೊರೆ ದೇವ ನಿನ್ನ ಪಾದಾರವಿಂದವ ನಂಬಿದೆ ಸದಯದೆ
ಕರುಣಾಕರ ಭಕ್ತ ಪಾರಾಯಣ ಸತ್ಯನಾರಾಯಣ ಪ

ಭಕ್ತಿ ಭಾವದೆ ನಿನ್ನ ಸೇರಿದೆನು ವ್ರತ ಮಾಡಿದೆನು ಸತ್ಯ ದೇವನೆ
ಕೃಪೆ ತೋರುವುದು ವರ ನೀಡುವುದು ಸತ್ಯ ದೇವೇಶನೆ
ನಿತ್ಯ ನಿರ್ಮಲ ವರ ಲಕ್ಷ್ಮೀನಾರಾಯಣ
ಬೇಡುವೆನು ನುತಿ ಮಾಡುವೆನು ೧

ಗಂಧ ಪುಷ್ಪಾಕ್ಷತೆ ದೀಪಗಳಿಂ ಪಂಚಫಲಂಗಳಿಂ ಇಂದಿರೇಶನೆ
ನಿನ್ನ ಪೂಜಿಸಿದೆ ನಿತ್ಯ ಭಾವಿಸಿದೆ ವಂದಾರು ಮಂದಾರ
ಮಂದರ ಗಿರಿಧರ ಸಿಂಧುಶಯನ
ಪಾಲಿಸೆನ್ನನು ಬೇಡಿಕೊಂಬೆನು ೨

ಮೌನೀಶ ವಂದ್ಯನೆ ಸರ್ವೇಶನೆ ದೀನಪಾಲಕನೆ ಸುಜ್ಞಾನ
ಸುಖವಿತ್ತು ಪಾಲಿಪುದು ಯನ್ನ
ಭಾವಿಪುದು ನಿಜತೋರುವುದು
ಧೇನುಪುರೀಶನೆ ಸತ್ಯದೇವೇಶನೆ ಮೌನೀಶ ರಕ್ಷಿಸು
ದಯೆಯಿಂದ ಬಹು ವಿಧದಿಂದ ೩

## ೨೭೧

ಪೊರೇ ಶೈಲಜಾಪತೇ ಶಿವಶಂಕರ ಶರಣಾಗತ ಕ್ಷೇಮಂಕರ ಪ

ದುರಿತ ಸಾಗರದಲ್ಲಿ ಕರೆಕರೆ ಪೊಂದುತ
ಕರಗುವೆ ಹಿತರನ್ನು ಕಾಣೆನು ೧

ಭವಭಯ ಮೃತ್ಯುವು ಭವಿಸುತ್ತಲಿರ್ಪುದು
ಭವಸಾಗರ ಸಂತಾರಕ ೨

ಭೂತಿ ಭಾಸಿತ ದೇಹ ಭೀತಿ ಭಯ
ಭಂಜಿಪ ನಾಥರ ಕಾಣೆ ಭೂತೇಶನೆ ೩

ಕಮಲ ರಂಜಿತ ಕರ ಕಮಲ ಭೂಷಿತ ಶಿರ
ಕಮಲಾನುಜ ಕಮಲಾಂಚಿತ ೪

ಧೇನುನಾಯಕವಾಹ ಧೇನುಕಾಪತಿ
ವರಧೇನುನಗರ ಸನ್ನಿವಾಸನೆ ೫

## ೨೭೨

ಬಾರೋ ಯಾದವ ಕುಲಚಂದ್ರ ತೋರೊ ಮುಖಾಂಬುಜವ
ಕಾರುಣ್ಯ ಪೂರ್ಣನೆ ಬಾರೊ ಯಾದವ ಕುಲಚಂದ್ರ ಪ

ಮಾರಾರಿ ದಾನವ ಭೀತಿಯ ಪೊಂದಿರೆ
ನಾರೀರೂಪದಿಂದೈದಿ ಪಾಲಿಸಲಿಲ್ಲವೆ ೧

ದುರುಳ ದುಶ್ಶಾಸನ ತರಳೆ ದ್ರೌಪದಿ ಸೀರೆ
ಸೆರಗನು ಸೆಳೆಯಲು ಕರುಣಿಸಲಿಲ್ಲವೆ ೨

ಪಾಲಿಸು ದೇವನೆ ಕಾಲಕಂಧರಪ್ರಿಯ
ಬಾಲ ಪ್ರಹ್ಲಾದ ವರದ ಲೀಲಾ ನರಹರಿ ರೂಪ ೩

ಮೌನಿ ಮಾನಸಪ್ರಿಯ ಗಾನರೂಪನೆ ಹರೆ
ಧೇನುನಗರ ದೊರೆ ಧ್ಯಾನಿಸುವೆನೊ ಶೌರೆ ೪

## ೨೭೩

ಭುಜಗಭೂಷ ಹರ ಪಾಹಿ ಶಿವ ತ್ರಿಜಗವಂದ್ಯ ಪರಿ ಪಾಹಿ ಶಿವ ಪ

ಪರಮಪುರುಷ ಹರ ಪಾಹಿ ಶಿವ ಕರುಣಾಕರ ಭವ ಪಾಹಿ ಶಿವ
ಶರಣಾಗತ ಪರಿಪಾಲ ಶಿವ ಗಿರಿಜಾ ಹೃದಯವಿಲೋಲ ಶಿವ ೧

ಖಂಡಚಂದ್ರಧರ ಪಾಹಿ ಶಿವ ಕುಂಡಲೀಂದ್ರಧರ ಪಾಹಿ ಶಿವ
ಚಂಡದನುಜ ಸಂಹಾರ ಶಿವ ತಾಂಡವೇಶ ಜಿತಮಾರ ಶಿವ ೨

ಭಾನು ಸೋಮ ಶಿಖಿ ನೇತ್ರ ಶೀವ ಧೇನುನಾಥ ವರವಾಹ ಶಿವ
ಸ್ವಾನುಭೂತಿ ಪರಿಪೂರ್ಣ ಶಿವ ಧೇನುನಗರ ಸುವಿಲಾಸ ಶಿವ ೩

## ೨೭೪

ಭಜನಗ್ಯೆವ ನಿನ್ನ ದೇವಿ ಭುಜಗಭೂಷರಾಣಿಯ ಪ

ಭುಜಗಭೂಷರಾಣಿಯೆ ಭೂಜಗತಾಲವೇಣಿಯೆ ಅ.ಪ.

ಕಾಲಕಾಲ ಚಿತ್ತ ಕುಮುದ ಬಾಲ ಚಂದ್ರಮಂಡಲೆ
ಬಾಲ ಚಂದ್ರಮಂಡಲೆ ವಿಲೋಲ ನೀಲಕುಂಡಲೆ ೧

ಚಂಡಶೂಲ ಖಂಡನೈಕ ಚಂಡಶೂಲಧಾರಿಣಿ
ಚಂಡಶೂಲಧಾರಿಣಿ ಪ್ರಚಂಡ ಪ್ರಾಣಹಾರಿಣಿ ೨

ದೇವಿ ದೇವಿ ಸುಪ್ರಸನ್ನೇ ಭಾವನ್ಯೆಕ ಗೋಚರೆ
ಭಾವನ್ಯೆಕೆ ಗೋಚರೆ ಸ್ವಭಾವ ಭಾವಿ ಭಾಸುರೆ ೩

ಪಂಕಸಕ್ತ ಭಕ್ತಚಿತ್ತ ಸಂಕಟ ಪ್ರಮಾಥಿನೀ
ಸಂಕಟ ಪ್ರಮಾಥಿನೀ ಶುಭಕರಾರ್ತಿ ನಾಶಿನೀ ೪

ಸಾನಾರಾಗದಿಂದ ಪೊರೆಯೆ ಗಾನಲೋಲೆ ಮಾನಿನಿ
ಗಾನಲೋಲೆ ಮಾನಿನಿ ಧೇಪುರ ನಿವಾಸಿನೀ ೫

## ೨೭೫

ಮಂಗಳಾಂಗ ಕರುಣಾಪಾಂಗ ಅಂಗಜಾರಿಪ್ರಿಯತುರಂಗ
ಸಂಗ ರೂಪಜಿತ ಭವಭಂಗ ಗಂಗಾ ಜನಕ ಜಯ ಶ್ರೀರಂಗ ಪ

ದೇವ ದೇವ ದಿವ್ಯ ಪ್ರಭಾವ ಭಾವನಾದಿ ದೂರ ಭಾವ
ಪಾವನ್ಯೆಕ ರೂಪ ನಿರ್ಲೇಪ ಶ್ರೀವಧೂಕುಚ ಕುಂಕುಮ ದೀಪ ೧

ಇಂದಿರಾ ಮುಖ ಪಂಕಜಸೂರ್ಯ ಮಂದಹಾಸ ಪೂರಿತಾಸ್ಯ
ಕುಂದರದನ ದಿವ್ಯಹಾರ ಬೃಂದಾವನ ವಿಹಾರಶೂರ ೨

ಮುರಳೀಧರ ಗೋವಿಂದ ಮುರಾರೆ ಶರಣಜನ ಸಂರಕ್ಷಕ ಶೌರೆ
ದುರಿತ ದೂರ ವರಧೇನುನಗರ ಪುರವಿಹಾರ ಪಾಲಿಸು ವೀರ ೩

## ೨೭೬

ಮನುವಂಶ ಜಲಧಿಜಾತೆ ಸೀತೆ ಪೊರೆಯೆ ಜಾನಕಿ
ಘನ ಪುಣ್ಯವಿನಯೆ ದಿವ್ಯರೂಪೆ ಜನನಿ ಭಾಮಿನಿ ಪ

ರಾಮಚಂದ್ರ ಭಾಸಮಾನ ಹೃದಯ ಕುವಲಯೆ
ಕಾಮದಗ್ಧ ದನುಜನಯನ ಕಾಲರೂಪಿಣಿ ೧

ಲಕ್ಷ್ಮಣಾದಿ ಭಕ್ತಪಾಲೆ ನಿತ್ಯರೂಪಿಣಿ
ಚಿತ್ತದಲ್ಲಿ ನೆಲಸು ದೇವಿ ತತ್ವಭೂಷಿಣೆ ೨

ಆದಿಶಕ್ತಿ ಭೇದರಹಿತೆ ಮೋದದಾಯಕಿ
ಮಾಧವಾಂಘ್ರಿ ಯುಗಳ ಸೇವೆಯನ್ನು ಕರುಣಿಸು ೩

ಭೂಮಿತನಯೆ ಭೂಮ ಮಹಿಮೆ ಕಾಮಿನೀ ರಮೆ
ಸಾಮಜಾಕರೋರು ಯುಗಳೆ ರಾಮ ಸುಂದರಿ ೪

ಪಂಕಜಾದಿ ಕುಸುಮಲೋಲೆ ಶಂಕರೀಪ್ರಿಯೆ
ಅಂಕದಲ್ಲಿ ಪೊರೆಯೆ ಮಾತೆ ಪಂಕಜಾನನೆ ೫

## ೨೭೭

ಮಾರುತಿಯೆ ಕೃಪೆ ಮಾಡ್ಯೆ ವರ ಪ

ವೀರ ಮಹೋದಧಿ ಪಾರ ವಿಲಂಘನ ಧೀರದಾನವ
ಪ್ರಾಣ ಹರ ಗಂಭೀರನೆ ಅ.ಪ.

ಅಕ್ಷಪ್ರಾಣೋರಗ ಪಕ್ಷೀಶ ರಾವಣ ಪಕ್ಷರಾಕ್ಷಸ ಕಾಲ
ವಕ್ಷ ವಿಮಲ ಪಕ್ಷ ೧

ಸೀತಾ ಹೃದಯ ಪ್ರೇಮ ದಾತಾ ಸಿಂಹಿಕಾಮೇಘ
ವಾತ ಲಂಕೇಶ ಮುಖ ಭೀತಿಸಂದಾಯಕ ೨

ರಾಮ ಪ್ರಿಯಂಕರ ದಾಮ ವಿಭೂಷಿತ ಕಾಮ
ವಿವರ್ಜಿತ ಭೀಮ ನಿತ್ಮಾತ್ಮಕ ೩

ಕಾನನ ಗೋಚರ ವಾನರ ಪುಂಗವ ಜನಕೀ
ಪ್ರಾಣದ ಧೇನುನಗರಹಿತ ೪

## ೨೭೮

ಯಾದವೇಂದ್ರ ಪಾಲಿಸೆನ್ನ ಓ ದಯಾನಿಧೇ ಪ

ಶಂಕರಾದಿ ದಿವಿಜರು ಪಂಕಜಾದಿ ಪೊಗಳಿಂ
ಪಂಕಜೋಪಮಾನ ಪಾದ ಪೂಜೆಗೈವರು ೧

ಶಾರಧೇಂದು ಭಾಸಮಾನ ಹಾರರಾಜೆ ಶೋಭಿತ
ನಾರದಾದಿ ಗಾನ ಲೋಲ ವಾರಿಜಾಸ್ಯನ ೨

ನಾಮರೂಪ ರಹಿತನೆ ಸಾಮಜಾದಿ ಪಾಲಕ
ಧೇನು ನಗರಾಭಿವಂದ್ಯ ನಾಮಲೋಲನೆ ೩

## ೨೭೬

ರಂಗನಾಥ ಪಾಲಿಸೆನ್ನ ಮಂಗಳಾಂಗ ಶ್ರೀಶ ಬೇಗ ಪ

ನಿನ್ನ ಭಜನೆಯನ್ನು ಗೈವೆ ಪನ್ನಗಾರಿವಾಹ ಹರೆ
ಸ್ವರ್ಣವಸನ ಭೂಷಿತಾಂಗ ಸನ್ನುತಾಂಗ ಧೀರಶೂರ ೧

ದುಷ್ಟರನ್ನು ಶಿಕ್ಷಿಸುತ್ತ ಸೃಷ್ಟಿಗೊಡೆಯನೆನಿಸಿ ನೀನು
ಇಷ್ಟ ವರಗಳನ್ನು ಕೊಟ್ಟು ಶ್ರೇಷ್ಟನೆನಿಸು ನಂಬಿದೆನು ೨

ಕಾಮಿತಾರ್ಥ ಫಲಗಳೀವ ಕಾಮ ಜನಕ ದೇವನೆ
ಧೇನುನಗರದಲ್ಲಿ ನೆಲಸಿ ನೇಮದಿಂದ ಪೂಜೆಗೊಂಬೆ ೩

## ೨೮೦

ರಘುಕುಲಾಂಬುಧಿ ಚಂದ್ರನೆ ಪೊರೆ ನೀಂ
ಅಘಹರ ಧರಣೀಂದ್ರನೆ ಪ

ಜಾನಕೀ ಮುಖಪಂಕಜ ಭಾಸ್ಕರ ದೀನ ಹೃದಯ
ಕುಮುದಾಳಿ ಸುಧಾಕರ ಅಘಹರ ಧರಣೀಂದ್ರನೆ ೧

ರಾವಣಾಂತಕ ಪಾವನರೂಪನೆ ಪಾವಮಾನಿ ಸಂಪೂಜಿತ
ರಾಮನೆ ಅಘಹರ ಧರಣೀಂದ್ರನೆ ೨

ನೀಲಮೇಘ ಸಮಾನ ಸುಂದರ ದೇಹ ವಾಲೀ
ಪ್ರಾಣಾವಳಿ ಕಾಲಹವ್ಯವಾಹ ಅಘಹರ ಧರಣೀಂದ್ರನೆ ೩

ಭಂಡರಾಕ್ಷಸ ಖಂಡನನಿರ್ಮಲ ಚಂಡ ಪರಾಕ್ರಮಿ
ಚಾಪವಿಲೋಲ ಅಘಹರ ಧರಣೀಂದ್ರನೆ ೪

ರಾಮರಘುಪತಿ ಲಕ್ಷ್ಮಣವಂದಿತ ಶ್ಯಾಮಸುಂದರರೂಪ
ಧೇನುಪುರಾಧಿಪ ಅಘಹರ ಧರಣೀಂದ್ರನೆ ೫

## ೨೮೧

ರವಿಕುಲಾಂಬುಧಿ ಸೋಮನೆ ಭುವನ ಪಾವನ ರಾಮನೆ ಪ

ಕವಿವರಾರ್ಚಿತ ಭೂಮನೆ ದಿವಿಜಸನ್ನುತ ನಾಮನೆ ಅ.ಪ.

ಕಂಡೆನು ದೇವಿಯ ಲಂಕೆಯೊಳು
ಚಂಡ ರಾವಣನುಪವನದೊಳು
ಚಂಡರಕ್ಕಸಿಯರ ಮಧ್ಯದೊಳು
ಚಂದ್ರ ಮಂಡಲಾಸ್ಯೆ ಇರುವಳು ೧

ಸುಂದರಿ ನಿನ್ನನು ಧ್ಯಾನಿಪಳು ಕುಂದುತ್ತ ಚಿತ್ತದಿ ಶೋಕಿಪಳು
ಮಂದ ಮಂದಮಾಗಿ ಕಣ್ಣೀರ
ಬಿಡುವಳು ಬಂಧನ ದೊಳಿರುವಳು ೨

ಮಾಸಿದ ಸೀರೆಯನುಟ್ಟಿಹಳು ದೂಸರ ವೇಣಿಯ ಸುತ್ತಿಹಳು
ಭೂಷ ವಿಶೇಷದೊಳಾಸೆಯನಿಡಳುಪವಾಸವನೆ ಗೈವಳು ೩

ಕಾಮಿನಿ ತಾಪವ ಪೊಂದಿಹಳು
ತಾಮರಸಾಕ್ಷಿಯು ನೊಂದಿಹಳು
ಭಾಮೆಯು ಶ್ರೀರಾಮ ಭಾವದೊಳಿರುವಳು
ರಾಮ ರಾಮೆನ್ನುವಳು ೪

ಮಾನಿನಿ ಯೋಗಿನಿಯಾಗಿಹಳು
ಜ್ಞಾನ ವಿಜ್ಞಾನವ ಪೊಂದಿಹಳು
ಜಾನಕಿ ಪತಿ ಭಕ್ತಿದೇವಿಯಾಗಿರುವಳು ಧೇನುಪುರೀಶ ಕೇಳು ೫

## ೨೮೨

ರವಿ ಕುಲಾಂಬುಧಿ ಪೂರ್ಣಚಂದ್ರ
ಕರುಣಾಕರ ಧರಣೀಧರೇಂದ್ರ ಪ

ದಶರಥಸುಪುತ್ರ ಶಶಧರ ಸುವಕ್ತ್ರ
ಪಶುಪತಿಮಿತ್ರನೆ ಪೊರೆಯೊ ಎನ್ನನು ೧

ವನರುಹದಳಾಕ್ಷ ದನುಭುಜವಿಪಕ್ಷ
ಮುನಿಜನ ಸುರಕ್ಷ ರಕ್ಷಿಸೆನ್ನನು ದೇವನೆ ೨

ಸುರಜನ ಸುಪೋಷ ಖರಹರ ಸುರೇಶ
ನಿರತವು ನಾ ನಿನ್ನ ನಮಿಸುವೆನೈ ಹರೇ ೩

ದಾನವಖಂಡನ ಧೇನುಪುರೀಶನೆ
ಮಾನವ ಪುಂಗವ ದೇವನೆ ಪೊರೆಯೈ ೪

## ೨೮೩

ರಾಜ ಶಿರೋಮಣಿ ದಯಮಾಡೈ ಪ

ಕಾಲವಿಭೀತಿಯಿಂ ಬಾಲನು ಗೋಳಿಡೆ
ಶೂಲದೆ ಕಾಲನ ಸಂಹರಿಸಿದೆ ೧

ಕ್ಷೀರಾಬ್ಧಿ ಮಧ್ಯದೊಳ್ ಹಲವು ಪುಟ್ಟಲು
ಲೀಲೆಯೊಳೆಲ್ಲವ ನೀಂಟಿದೆ ೨

ಕೈಲಾಸವಾಸ ಶೈಲಾಪ್ತ ಬಂಧುವೆ
ಬಾಲರಾಜಾಂಚಿತ ಭೂಷಣ ೩

ನಿರ್ಮಲರೂಪ ನಿಷ್ಕಲ ಸ್ವರೂಪ
ಬ್ರಹ್ಮಮಸ್ತಕ ಕಾಲರೂಪ ೪

ಫಾಲಾಕ್ಷದೇವ ಮಾಲಾ ಮನೋಹರ
ನೀಲಲೋಹಿತ ಧೇನುಭೂಪತೆ ೫

## ೨೮೪

ರಾಮ ನಿನ್ನ ಭಜನೆಗೈಯುವೆ ಕಾಮಾರಿಮಿತ್ರ
ರಾಮ ನಿನ್ನ ಭಜನೆಗೈಯುವೆ ಪ

ರಾಮ ನಿನ್ನ ಭಜನೆಯನ್ನು ಪ್ರೇಮದಿಂದ ಮಾಳ್ಪ ಜನಕೆ
ಕಾಮಿತಾರ್ಥವಿತ್ತು ಸುಖವ ಪ್ರೇಮದಿಂದಕರುಣಿಸುವವನೆ ೧

ಜಾನಕಿಯರಮಣ ನಿನ್ನ ಧ್ಯಾನಮಾಳ್ಪೆನಯ್ಯ ಸತತ
ಸಾನುರಾಗದಿಂದ ಸಲಹು ಭಾನುವಂಶ ಜಲಧಿಚಂದ್ರ ೨

ಇಂದಿರೇಶ ನಿನ್ನ ಪಾದವಿಂದು ಪೂಜೆಗೈವೆ ನಾನು
ತಂದೆ ಸಲಹೊ ರಾಗದಿಂದ ಸುಂದರಾಂಗ ಸುಪ್ರಸನ್ನ ೩

ಹಾರ ಕುಂಡಲಾದಿಭೂಷ ಚಾರುಮಕುಟಧರಸುಶೋಭ
ಸಾರಸಾಕ್ಷ ರವಿಜವರದ ತೋರೋ ಮುಖವ ರಾಘವೇಂದ್ರ ೪

ರಾವಣಾದಿ ಸಕಲದನುಜ ಜೀವಹರಣ ರಘುಕುಲೇಶ
ಪಾವಮಾನಿ ಪೂಜಿತಾಂಘ್ರಿ ಧೇನುಪುರನಿವಾಸ ದೇವ ೫

## ೨೮೫

ರಾಮರಘುಕುಲ ಲಕ್ಷ್ಮಣಾಗ್ರಜ ಸೋಮವಂಶಜಾಸಮೇಶ
ಪೊರೆಯೋ ಕರುಣದಿ ಪ

ಬ್ರಹ್ಮರುದ್ರರು ಹರಿಸುರೇಂದ್ರರು ಕರ್ಮವಶದಿ ನಿನ್ನ
ರೂಪಿನಿಂದ ಶೋಭಿಪರು ೧

ಸತ್ವಮೂರ್ತಿಯೆ ತತ್ವರೂಪಿಯೆ ನಿತ್ಯಹೃದಯ
ಕಮಲದಲ್ಲಿ ನಿನ್ನ ಭಾವಿಪೆ ೨

ತಾಟಕಾಂತಕ ಕೋಟಿಭಾಸ್ಕರ ಕೋಟಿರೂಪ ನಿನ್ನ
ಪಾದವನ್ನು ನಂಬಿದೆ ೩

ಕಮಲನೇತ್ರನೆ ವಿಮಲಗಾತ್ರನೆ ಕಮಲಮುಖವನು
ನೋಡಿ ನಾನು ಧನ್ಯನಾಗುವೆ ೪

ಪ್ರೀತಿವಚನದಿ ನೀತಿಯಿಂ ಭವಭೀತಿಯನ್ನು
ಧೇನುನಗರ ಪತಿಯೆ ಭಂಜಿಸೈ ೫

## ೨೮೬

ಲಕ್ಷ್ಮೀಯುತ ನಾರಾಯಣ ಪಕ್ಷೀಶ ವಾಹನ
ಈಕ್ಷಿಸು ಪ್ರೇಮದೊಳೆನ್ನ ನೀಂ ಪ

ನಾರದ ಗಾನ ಭೂರಿ ವಿನೋದ ಸಾರಸ ಸನ್ನಿಭ
ಲೋಚನ ಶ್ರೀಶ ಶಾರದ ಚಂದ್ರಸಮ ಹಾರ ವಿಹಾರ ೧

ಸುಂದರ ಭುಜದಿಂ ಇಂದಿರೆ ತನುಮಂ ಅಂದದೊಳಪ್ಪುತ
ಮೋದವ ಪೊಂದಿ ವಂದಿತ ಜನ ಮನೋನಂದ ವಿನೋದ ೨

ಶ್ರೀವನಮಾಲಾ ಭಾವಿತಭಾವ ದೇವಚಿದಾತ್ಮ
ಜೀವಪ್ರಭಾವ ಶ್ರೀ ವಿಭವಾನ್ವಿತ ಪಾವನರೂಪ ೩

ದಾನವ ವೈರಿ ಜ್ಞಾನ ಸ್ವರೂಪ ಭಾನುಕರಾರ್ಪಿತ
ಭಾಮ ಯಶೋಧ ಧೇನುಕಪುರಪ್ರಿಯ ಗಾನ ಸ್ವರೂಪ ೪

## ೨೮೭

ವಂದಿಸುವೆ ನಂದಪುತ್ರ ಇಂದಿರಾಮನೋಹರ
ಇಂದಿರಾ ಮನೋಹರ ಪೂರ್ಣೇಂದು ಕೋಟಿ ಸುಂದರ ಪ

ನೀಲವಾರಿವಾಹಗಾತ್ರ ಲೋಲಚೇಲ ಭಾಸುರ
ಲೋಲ ಚೇಲಭಾಸುರ ವಿಲೋಲ ನೀಲಕುಂತಲ ೧

ದೇವ ದೇವಾಧೀಶ ಶೂರ ದೇವಕೀ ಪ್ರಿಯಂಕರ
ದೇವಕೀ ಪ್ರಿಯಂಕರ ವಿಭಾವನ್ಯೈಕ ಗೋಚರ ೨

ಧೇನುಪುರ ವರವಿಹಾರಿ ಸೂನಭಾಣ ಜನಕನೆ
ಸೂನ ಭಾಣ ಜನಕನೆ ವಿನೋದ ವೇಂಕಟೇಶನೆ ೩

## ೨೮೮

ವಂದಿಸುವೆ ಭಾರ್ಗವೀಶ ಸುಂದರಾಂಗ ಲೋಕಾಧೀಶ ಪ

ವಂದ್ಯಮಾನ ಪಾದಕಮಲ ಇಂದಿರಾ ಮನೋವಿಹಾರ ಅ ಪ.

ಅಷ್ಟಮೂರ್ತಿ ಕಷ್ಟಹರಣ ಕೃಷ್ಣಮೂರ್ತಿ ಶ್ರೀ ಕೇಶವ
ದುಷ್ಟದನುಜ ಕುಲವಿನಾಶ ಸೃಷ್ಟಿಪಾಲದೇವಾಧೀಶ ೧

ನಿನ್ನ ಪಾದವನ್ನು ಭಜಿಪೆ ಚೆನ್ನಕೇಶವ ಪಾಲಿಸೆನ್ನ
ಇನ್ನೂ ಭವದಿ ಶೋಕಗೊಂಬೆ ನಿನ್ನ ಹೊರತಿನ್ಯಾರ ಕಾಣೆ ೨

ಪುಟ್ಟ ಧ್ರುವಗೆ ಪಟ್ಟಗಟ್ಟಿ ದಿಟ್ಟತನದಿ ಪೊರೆದ ನೀನು
ಕಷ್ಟದಿಂದಜಾಮಿಳನು ಕೂಗೆ ಇಷ್ಟವರವ ನಿತ್ತೆ ದೇವ ೩

ಕಾನನದಿ ಸ್ನಾನಗೈದು ಜಪವ ಮಾಡಲಾರೆ ನಾನು
ಧೇನುನಗರ ಪತಿಯೆ ನಿನ್ನ ಧ್ಯಾನದಿಂದ ಜ್ಞಾನವೆಂದು ೪

## ೨೮೯

ವಂದಿಸುವೆ ಸುಂದರಾಂಗ ನಿಜಸೌಂದರ್ಯಜಿತಾನಂಗ
ಬೃಂದಾರಕಾದಿ ಮುನಿ ಬೃಂದವಂದಿತ ಮುಕುಂದ
ಗೋವಿಂದ ನಂದ ಮೂರುತಿ ಹರೆ ಪ

ದೇವಾದಿ ಜೀವ ಸುಪ್ರಭಾವ ಭಾಸಿತ ಮುಖ
ದೇವಕೀ ವಸುದೇವ ಭಾವನಾ ಗೋಚರ ೧

ಹಾರಕುಂಡಲ ಮನ ಮಾಲಾವಿರಾಜಿತ
ಕ್ಷೀರಾಬ್ಧಿ ಕನ್ಯಕಾ ಲೋಲಾ ಮುರಾಂತಕ ೨

ಧೇನುನಗರ ಪರಿಪಾಲಕ ವೇಂಕಟೇಶ
ಸಾನುರಾಗದಿ ಪೊರೆ ಗಾನವಿನೋದ ಹರೆ ೩

## ೨೯೦

ವರ ಹಿಮಧರ ತನುಜಾತೆಯ ಮಾತೆಯೆ
ಪರಮಶಿವಶಂಕರಿಯೆ ಪ

ತುರುಬಿನೊಳಿಹ ಸುರತರುಸುಮದರಳಂ
ಕರುಣಿಸು ಮಂಗಳೆಯೆ ಅ.ಪ.

ಪಂಕಜನಾಭಿಯೆ ಪಂಕಜಪಾಣಿಯೆ ಪಂಕಜಲೋಚನೆಯೆ
ಪಂಕಜಗಂಧಿಯೆ ಪಂಕಜವದನೆಯೆ ಶಂಕರಸುಂದರಿಯೆ ೧

ಗೌರಿಯೆ ಗಿರಿಜೆಯೆ ಕಾತ್ಯಾಯನಿಯೆ ಹೈಮವತೀಶ್ವರಿಯೆ
ಪಾರ್ವತಿ ಶಿವೆ ಪರಮೇಶ್ವರಿ ಶಂಕರಿ ಕಾಳಿಯೆ ಶಾಂಭವಿಯೆ ೨

ವಾದ ವಿದೂರೆಯೆ ಬೋಧನ ರೂಪೆಯೆ
ಮಾಧವ ಸೋದರಿಯೆ
ಭೂಧರವಾಸೆಯೆ ಶ್ರೀ ಲಲಿತಾಂಬೆಯೆ ರಾಜರಾಜೇಶ್ವರಿಯೆ ೩

ಸತ್ಯ ಚರಿತ್ರೆಯೆ ನಿತ್ಯ ಕಲ್ಯಾಣಿಯೆ ಭಕ್ತವತ್ಸಲೆ ವಿಜಯೆ
ಸತ್ಯ ಸಂಕಲ್ಪೆಯೆ ಸತ್ಯ ಚಿದ್ರೂಪೆಯೆ ನಿತ್ಯ ಸುಮಂಗಳೆಯೆ ೪

ದಾನವ ಭಂಜಿನಿ ಮೌನಿಸುರಂಜಿನಿ ಭಾನುಮಂಡಲ ರುಚಿರೆ
ಗಾನವಿನೋದಿನಿ ಧೇನುಪುರೀಶ್ವರಿ ಮಾನಿನಿ ಪಾಲಯಮಾಂ ೫

## ೨೯೧

ಶಾಂಭವಿ ಶೈಲಜೆ ಅಂಬಿಕೆ ದೇವಿ
ಅಂಬುರು ಹಾಸನೆ ಪಾಲಿಸು ಪ್ರೇಮದಿ ಪ

ದಕ್ಷಸುಪುತ್ರಿ ಅಕ್ಷಯ ಪೂರ್ಣೆ
ರಾಕ್ಷಸನಾಶಿನಿ ಯಕ್ಷಸುಪೋಷಿಣೆ ೧

ದಿವ್ಯಸ್ವರೂಪೆ ಭವ್ಯಕಲಾಪೆ ಸ್ತವ್ಯ ಸ್ವರೂಪಿಣಿ ಗರ್ವ ವಿದಾರಿಣೆ ೨

ಕುಂಕುಮಶೋಭೆ ಸಂಕಟಹಾರಿಣಿ ಅಂಕದಿ
ಪಾಲಿಸು ಶಂಕರಿ ಗೌರಿ ೩

ನಿನ್ನನು ನಂಬಿದೆ ನೀರಜನೇತ್ರೆ ಮನ್ನಿಸು
ಪ್ರೇಮದಿ ಸ್ವರ್ನಸುಗಾತ್ರಿ ೪

ಮಾನಿನಿವಂದಿತೆ ಗಾನವಿಲೋಲೆ
ಧ್ಯಾನವಗೈಯುವೆ ಧೇನುಪುರೀಶೆ ೫

## ೨೯೨

ಶ್ರೀ ಕಂಠಕಾಮಿನಿ ಲೋಕೇಶಪಾಲಿನಿ ನಾಕೇಶವಂದಿತೆ
ಭೂಕಾಂತ ಸೋದರಿ ಪ

ರಾಜಮರಾಳೀ ಸೋಜಿಗಗಮನೇ
ರಾಜೀವನೇತ್ರೇ ರಾಜರಾಜಾರ್ಚಿತೆ ೧

ಶ್ಯಾಮಲರೂಪಿಣಿ ಕೋಮಲಾಲಾಪಿನಿ
ಕಾಮಸುಂದರಿ ಕೋಟಿ ಭಾಸಿತ ಗಾತ್ರೆ ೨

ನಿತ್ಯವು ವಂದಿಪೆ ನಿತ್ಯದಾಯಕಿ ದೇವಿ
ಸತ್ವವಿಜಿತ ದೈತ್ಯ ಸರ್ವಸಂಹಾರಿಣಿ ೩

ಮಂಗಳದಾಯಕಿ ಮಂಗಳ ಮಹಿಮೆಯೆ
ಮಂಗಳಂ ಜಯ ಗೌರಿ ಮಂಗಳಂ ಪಾರ್ವತಿ ೪

ಈಶ ಹೃದಯ ರೂಪೆ ಪಾಶವಿದಾರಿಣಿ
ಶ್ರೀಶ ಸಹೋದರಿ ಧೇನುಪುರೀಶ್ವರಿ ೫

## ೨೯೩

ಶ್ರೀಕಾಂತ ನಿನ್ನ ನಂಬಿದೆ ನಾಕೇಶವಂದ್ಯ ಪ

ಸಾಕೇತಪುರ ನಿವಾಸ ಲೋಕಕಂಟಕ ಹರಣ ಅ.ಪ.

ಪಂಕ್ತಿಸ್ಯಂದನ ಚಿತ್ತ ಪಂಕೇರುಹಾರ್ಕರೂಪ
ಪಂಕ್ತಿಕಂಧರ ಹರಣ ನಾಕೇಶವಂದ್ಯ ೧

ಸೀತಾ ಹೃದಯಪ್ರಿಯ ವಾತತನಯ ಸೇವ್ಯ
ಭೀತಾರ್ತಿ ವೀತಿಹೋತ್ರನೆ ನಾಕೇಶ ವಂದ್ಯ ೨

ಮಂಗಳ ರೂಪನೆ ಅಂಗಜಪಿತ ಹರೇ
ತುಂಗದಾನವ ಭಂಜನ ನಾಕೇಶವಂದ್ಯ ೩

ಕೋದಂಡ ಖಂಡಿತಾರೇ ಭೇದ ವಿವರ್ಜಿತ
ನಾದ ವಿನೋದ ಸುಖದ ನಾಕೇಶ ವಂದ್ಯ ೪

ಭಾನುವಂಶಜ ದಿವ್ಯ ಜಾನಕೀ ವಲ್ಲಭ
ಧೇನುನಗರಪತಿಯೆ ನಾಕೇಶವಂದ್ಯ ೫

## ೨೯೪

ಶ್ರೀತುಳಸಿ ಜಯ ತುಳಸಿ ಜಯ ಜಯ ತುಳಸಿ
ಶ್ರೀರಾಮ ತುಳಸಿವರ ಶ್ರೀಕೃಷ್ಣ ತುಳಸಿ ಪ

ನಿನ್ನ ಪಾದವು ಚತುರ್ಮುಖನ ಭಾಗವು ದೇವಿ
ನಿನ್ನ ಮಧ್ಯವು ಹರಿಯ ಭಾಗವಾಗಿಹುದು
ನಿನ್ನ ತುದಿ ಕೈಲಾಸನಾಥ ಶಿವ ಭಾಗವು
ನಿನ್ನ ಮೈಯೊಳು ಸಕಲ ದೇವತೆಗಳಿಹರು ೧

ಗಂಗೆ ಗೋದಾವರಿಯು ತುಂಗಭದ್ರೆಯು ಯಮುನೆ
ಮಂಗಳ ತರಂಗಿಣಿಯು ಶ್ರೀ ಕೃಷ್ಣವೇಣಿ
ರಂಗನಾಥ ಸಮೇತ ದಿವ್ಯ ಕಾವೇರಿಯು
ಮಂಗಳೆಯೆ ನಿನ್ನಾವಾಸವಾಗಿಹರು ೨

ಕಾಶಿ ಕಂಚಿಯು ಮಧುರೆ ನೈಮಿಷ ಹರಿದ್ವಾರ
ಭಾಸುರದ ಗೋಕರ್ಣ ದ್ವಾರಕಾವತಿಯು
ಶ್ರೀಶೈಲ ಹಿಮವಂತ ಸರ್ವ ಸುಕ್ಷೇತ್ರಗಳು
ಭಾಸಮಾಗಿರುತಿಹವು ನಿನ್ನ ನೆರಳಿನಲಿ ೩

ನಿನ್ನ ಬೃಂದಾವನವೆ ವೈಕುಂಠ ಕೈಲಾಸ
ನಿನ್ನ ತೀರ್ಥವೆ ಸಕಲ ಪುಣ್ಯತೀರ್ಥ
ನಿನ್ನ ದರ್ಶನವೆಲ್ಲ ದೇವತಾ ದರ್ಶನವು
ನಿನ್ನ ಪೂಜೆಯೆ ಸಕಲ ದೇವತಾ ಪೂಜೆ ೪

ನೀನಿರುವ ದೇಶದಲಿ ರೋಗಗಳ ಭಯವಿಲ್ಲ
ನೀನಿರುವ ದೇಶದಲಿ ಪಾಪ ಭಯವಿಲ್ಲ
ನೀನಿರುವ ದೇಶದಲಿ ಯಮನ ಭಯವಿಂತಿಲ್ಲ
ನೀನಿರುವ ದೇಶದಲಿ ಭೂತ ಭಯವಿಲ್ಲ ೫

ಗಂಧ ಪುಷ್ಪವು ಧೂಪ ದೀಪ ನೈವೇದ್ಯದಿಂ
ವಂದಿಸುತ ನಿನ್ನ ನಾಂ ಪೂಜೆಗೈಯುವೆನು
ಇಂದಿರೆಯ ಸೌಭಾಗ್ಯ ಸಂತತಿಯ ನೀನಿತ್ತು
ಮುಂದೆ ಪಾಲಿಸು ಭಕ್ತಿ ಮುಕ್ತಿ ಸಂಪದವಂ ೬

ಜಯ ಮಂಗಳಂ ತುಳಸಿ ಸರ್ವಮಂಗಳೆ ದೇವಿ
ಜಯ ಮಂಗಳಂ ತುಳಸಿ ಮುರಹರನ ರಮಣಿ
ಜಯ ಮಂಗಳಂ ತುಳಸಿ ಲೋಕಪಾವನೆ ಮೂರ್ತಿ
ಜಯ ಮಂಗಳಂ ತುಳಸಿ ಧೇನುಪುರ ದೇವಿ ೭

## ೨೯೫

ಶ್ರೀ ವಿಷ್ಣು ಮೋಹಿನಿ ರೂಪ ತಾಳಿದನು ಸುಕಲಾಲಾಪ ಪ

ಸುರದಾನವಗಣ ಸುಧೆಯನು ಕಡೆಯಲ್
ದುರುಳ ರಕ್ಕಸರು ಸುಧೆಯನು ಬಯಸೆ
ಕರೆಕರೆಗೊಳ್ಳುತ್ತಮರರು ನಿಲ್ಲೆ ಕರೆದವು
ಮಿಂಚಿನ ಥರ ಥರ ರಾಶಿ ೧

ಥಳುಕುತಬಂದಳ್ ಕಮಲಾಂಬಿಕೆಯು
ನಳಿದೋಳ್ಗಳ ಕಂಕಣ ರವಮಿಳ್ಳೆ
ಚಳಕಿನ ಸೀರೆಯ ನೂಲಿಸುತ ರಮಣಿ ಚಲುವಿಂದಲ್
ಬಂದಳು ಸುಂದರಿಯು ೨

ಕುಂಕುಮ ರಂಜಿತ ಫಾಲವಿಶಾಲ ಅಂಕ
ದೊಳೊಪ್ಪಿದ ಕದಳೀಸಾರ
ಪಂಕಜದಂತಿಹ ಮುಖ ಸುವಿಲಾಸ
ಸಂಕರ್ಷಣ ಶ್ರೀಹರಿಯ ವಿಲಾಸ ೩

ಶಿರದೊಳ್ಮೆರೆಯುವ ರತ್ನಾಭರಣ ವರ ಕಂಧರದೊಳ್ಮುಕ್ತಾಭರಣ
ನೆರೆ ಬಾಹುಗಳೊಳ್ ಭುಜಕೀರ್ತಿಗಳು
ಸುರುಚಿರ ಹಸ್ತದಿ ಕಂಕಣ ಧಾಟಿ ೪

ವಿರಚಿತ ಜಘನದಿ ಕಾಂಚಿಕಲಾಪ ಕರಧೃತ
ಚಾಮರ ಬೆರಳಿನೊಳೊಪ್ಪುತ
ಕರೆದಳು ಮನ್ಮಥ ಮೋಹದ ಮಳೆಯಂ ೫

ನೋಡುತ ರಕ್ಕಸ ಪಾಳಿಗಳಾಗ ಕೂಡಿದ
ಮೋಹವ ಪೊಂದಲು ಬೇಗ
ಸುಂದರಿ ಬೆಳಕಿನ ಮಿಂಚುಗಳ್ಕೆದರೆ ಅಂದದ
ಕಂಗಳ ಢಾಳವು ಪೊಳೆಯೆ ೬

ಚಂದ್ರ ಕಿರಣ ಸೂಸಿದವೊಲ್ಮೆರೆಯೆ ಕುಂದ
ಸುಮಾಳಿಯ ಗುಂಪುಗಳೊರೆಯೆ
ಓಹೋ ಮೋಹ ವರ್ಷಾದಕಾಲ ಅಹವದೊಳ್ಮಾರನ ಕಡುಬಿಂಕ
ಊಹೆಗಳವೆ ಮೋಹಿನಿ ಸುಳಿದಾಟ ಸಾಹಸಿಗರು
ನೊಂದರು ಮನದೊಳಗೆ ೭

ಅಂಗನೆ ಲಾವಣ್ಯಾಂಬುಧಿಯೊಳಗೆ
ಭಂಗಿತರಾದರು ನೀಚರು ಭರದಿಂ
ಅಂಗಜ ಬಾಣದಿ ಮೋಹವಗೊಳ್ಳೆ
ಪೊಂಗೊಡದಲಿ ಸುಧೆಯನು
ನೋಡುತ ಕಂಗಳ ನಲವಿಂದೊಪ್ಪಿಸಿ ಪಿಡಿಯೆ ಶೃಂಗಾರದ
ಬೆಡಗಿನ ಸ್ವೈವರಿಯೆ ೮

ದೇವನೆ ಪಾಲಿಸು ಭಾವಜ ಜನಕ ಕಾವವ
ನಿರ್ಜರ ಜೀವವನೆಲ್ಲ
ಗೋವಿಂದಾಚ್ಯುತ ಪಾಹಿ ಮುರಾರೆ ರಾವಣಹರಣ
ರಕ್ಷಿಸು ಎಂದೆನಲು ೯

ಧೇನುನಗರ ಪತಿ ಶ್ರೀಪತಿಯಾಗ ಮಾನಸಹಿತ
ನೀ ದೇವತೆಗಳಿಗೆ
ದಾನವಗೈದು ಪೀಯೂಷವನೆಲ್ಲ
ಮಾನವಗೈದನು ನಿರ್ಜರರ್ಗೆಲ್ಲ ೧೦

## ೨೯೬

ಶ್ರೀಶ ಪಾಲಿಸೊ ಹರೆ ಶ್ರೀಶ ಪಾಲಿಸೊ ಕೇಶವ
ಚಿತ್ತದ ಕ್ಲೇಶವ ಭಂಜಿಸಿ ವಾಸುದೇವನೆ ದಯದಿ ಹರೆ ಪ

ಇಂದಿರಾವದನಾರವಿಂದ ಭಾಸ್ಕರ ಕುಂದರದನ ವದನ ಹರೆ ೧

ರಾವಣ ಖಂಡನ ಭಾವಜ ಜನಕನೆ
ಪಾವನ ಮೂರುತಿಯೆ ಹರೆ ೨

ಚಿನ್ಮಯ ರೂಪನೆ ಬ್ರಹ್ಮಕಾರಣಗುಣ ನಿರ್ಮಲ ನಿರ್ಗುಣನೆ ಹರೆ ೩

ಯೋಗಿ ಹೃತ್ಕಮಲ ವಿಯೋಗರಹಿತ ಹರಿ
ಭೋಗಿ ಭೂಷ ನುತನೆ ಹರೆ ೪

ಧೇನುನಗರ ಪತೆ ಜ್ಞಾನಿ ವೇಂಕಟಪತೆ
ಧ್ಯಾನವ ಗೈಯುವೆನೈ ಹರೆ ೫

## ೨೯೭

ಸಲಹೈ ಸೀತಾಪತೆ ಲೋಲ ಮುಕ್ತಾಫಲ
ಹಾರಶೋಭಿತ ಮುಖ
ತೋರೋ ಗುಣಾಕರ ಸಾರಸ ಲೋಚನ ಪ

ಇಂದು ವಂಶಜಾ ದಿವ್ಯ ಕಂಧರದಲಿ
ತೋರ್ಪ ಸುಂದರ ಬಾಹುಯುಗ
ಕಂದರ್ಪ ಶತಕೋಟಿ ಸುಂದರ ವಿಗ್ರಹ ಮಂದಹಾಸದಿ
ಬಂದು ಕಂದನ ಪೊರೆಯೈ ೧

ಪಂಕಜಾಸನ ಮುಖ್ಯ ಶಂಕರಪೂಜಿತ ಸಂಕಟ ಪರಿಹರಿಸೈ
ಲಂಕಾಪತಿಯ ತಮ್ಮ ನಂಕವ ಪೊಂದಲು
ಶಂಕೆಯಿಲ್ಲದೆ ಸ್ಥಿರ ಲಂಕಾ ರಾಜ್ಯವನಿತ್ತೆ ೨

ಜನನ ಮರಣಗಳ ಘನಪರಿವಾಹದಿ ನೆನೆದು ಶೋಕಿಪೆ ದೇವನೆ
ವನರುಹ ಲೋಚನ ತವತಾರಕ ಮಂತ್ರವ
ವಿನಯದೊಳೀವುದೈ ಧೇನು ಪುರಪತೆ ೩

## ಮಂಗಳ ಪದ್ಯಗಳು

### ೨೯೮

ಇಂದಿರಾ ಮನೋವಿಹಾರಿ ಮಂಗಳಂ
ಸುಂದರಾಂಗ ಸುಜನಪೋಷ ವೇಂಕಟೇಶನೆ
ಸಕಲೋದ್ಧಾರ ಕಾರ ನರಹರೆ ಪ

ಪಾಪಹಾರಿ ದೀಪಸುಜನ ತಾಪಹಾರಕ
ಶ್ರೀಪತೇ ಶುಭಂಕರಾರಿತಾಪನಾಶಕ
ವನಮಾಲಾಧಾರಿ ಶ್ರೀಹರೀ ೧

ವಿಮಲ ಸುಗುಣ ಕಮಲನೇತ್ರ ಪಾಲಿಸೈ ಹರೆ
ಸುಮನಸಾಳಿ ಗೀಯಮಾನ ಪಾದಪಂಕಜಾ ಸನಕಾದಿ
ಸೇವ್ಯವಿನುತ ಭೂಪತೆ ೨

ದುಷ್ಟ ಹೃದಯ ದೂರಭಾವ ಕಷ್ಟನಾಶಕ
ಸೃಷ್ಟಿಪಾಲದನುಜವೈರಿ ಧೇನುಪುರಪತೆ
ವಿಹಿತ ಪಾಲ ಕಮಲಲೋಚನ ೩

## ೨೯೯

ಇಂದಿರೆ ವಿಜಯೆ ಜಯಮಂಗಳಂ ಪ

ಸಾರಸಭವನುತೆ ಸಾರಸಶರಮಾತೆ
ಸಾರಸದಳಹಿತೆ ಸಾರಸಮಹಿತೆ ಮಂಗಳಂ ೧

ಇಂದು ಬಿಂಬಾಧರೆ ಇಂದು ಸುಮಾಕರೆ
ಇಂದು ಸಹೋದರಿ ಸುಂದರ ಕಬರಿ ಮಂಗಳಂ ೨

ರಾಜರಾಜಾರ್ಚಿತೆ ರಾಜಮುಖಾಂಚಿತೆ
ರಾಜಗೃಹಾರ್ಚಿತೆ ರಾಜಿತ ವನಿತೆ ಮಂಗಳಂ ೩

ಮೌನಿಕುಲಾರ್ಚಿತೆ ಮಾನವ ವಂದಿತೆ
ಧೇನುನಗರ ಹರಿಮಾನಿನಿ ಜನನಿ ಮಂಗಳಂ ೪

## ೩೦೦

ಕಂದರ್ಪಕೋಟಿ ಸುಂದರಾಂಗ ರಾಮ ತೇ ಸುಮಂಗಳಂ ಪ

ಮಂದಾರು ಹೃದಯ ಕುಮುದ ಚಂದ್ರ
ರಾಮ ತೇ ಸುಮಂಗಳಂ
ಬೃಂದಾರಕೇಂದ್ರ ವಂದ್ಯಪಾದ ರಾಮ ತೇ ಸುಮಂಗಳಂ ೧

ದಿವ್ಯರೂಪ ಕಾಂತಿಮಹಿತ ರಾಮ ತೇ ಸುಮಂಗಳಂ
ಸರ್ವಸುಗುಣ ಪೂರ್ಣಮಹಿತ ರಾಮ ತೇ ಸುಮಂಗಳಂ ೨

ಸುರಾಸುರಾಳಿ ಗೀಯಮಾನ ರಾಮ ತೇ ಸುಮಂಗಳಂ
ಪುರಾರಿ ಚಿತ್ತ ಕಮಲ ಮಿತ್ರ ರಾಮ ತೇ ಸುಮಂಗಳಂ ೩

ಭಕ್ತ ಹೃದಯ ಕಮಲಹಂಸ ರಾಮ ತೇ ಸುಮಂಗಳಂ
ಸತ್ವನಿರ್ಜಿತ ದೈತ್ಯ ಮಂಡಲ ರಾಮ ತೇ ಸುಮಂಗಳಂ ೪

ದೀನಮಾನವಾಳಿ ಪಾಲಕ ರಾಮ ತೇ ಸುಮಂಗಳಂ
ಧೇನುನಗರ ದೇವ ದೇವ ಶ್ರೀ ರಾಮ ತೇ ಸುಮಂಗಳಂ ೫

## ೩೦೧

ಗೌರಿಗೆ ಶುಭದಾರತಿಯನು ರಚಿಪೆ ಪ

ವನಿತಾ ರಮಣಿಗೆ ವನಶಂಕರಿಗೆ ಮನಸಿಜ
ಜೀವನದಾಯಕಿಗೆ ಶುಭದಾರತಿಯನು ರಚಿಪೆ ೧

ಸುಂದರ ರೂಪೆಗೆ ಚಂದ್ರಧರಾಂಬೆಗೆ ಸುಂದರೇಶ್ವರ
ಪ್ರಿಯಭಾಮಿನಿಗೆ ಶುಭದಾರತಿಯನು ರಚಿಪೆ ೨

ವರದಾಯಕಿಗೆ ಪರಮಕಲ್ಯಾಣಿಗೆ ನರಹರಿಸುಪ್ರಿಯ ಸೋದರಿಗೆ
ಶುಭದಾರತಿಯನು ರಚಿಪೆ ೩

ಹೈಮವತೀಶೆಗೆ ತಾಮರಸಾಕ್ಷಿಗೆ
ಶ್ಯಾಮಕಲಾಂಬಿಕೆ ಶಿವಸುಂದರಿಗೆ
ಶುಭದಾರತಿಯನು ರಚಿಪೆ ೪

ಧೇನಪುರೀಶೆಗೆ ಮೌನಿ ಸನ್ನುತೆಗೆ ಮಾನಿನಿ
ಮಾಘದ ಮಂಗಳೆಗೆ
ಶುಭದಾರತಿಯನು ರಚಿಪೆ ೫

## ೩೦೨

ಚಂಡನಾಡಿದ ರಘುಕುಲ ನಂದನಾಶ್ರಿತವತ್ಸಲ ಪ

ಇಂದುಮುಖಿ ಸೀತಾದೇವಿ ಸುಂದರ ಕರಕಮಲಾರ್ಪಿತಮಾದ ಅ.ಪ.

ಮರುಗ ಮಲ್ಲಿಕಾ ಜಾಜಿ ವರ ಪಾರಿಜಾತ ತತಿ ಸುರಗಿ
ಸೇವಂತಿ ಪರಿಚಿತಮಾದ
ಸುರಸುಗುಂಭಿತ ಪರಮ ಶೋಭಾನ್ವಿತ ಸುರುಚಿರ
ಮಾಲ ವಿರಚಿತ ಮಾದ ೧

ಕಿಂಕಿಣಿ ಝಣರಲು ಕಂಕಣವಲುಗಲು
ಪಂಕಜನೇತ್ರಿಯು ಶಂಕಿಸದಿರಲು
ಅಂಕದೊಳುರೆಯೊಗೆದ ಪಂಕಜಾಕಾರದ ಶಂಕರ
ಪೊಗಳಲು ಚಂಪಕ ದರಳಿನ ೨

ಮಾನಿನಿಯರು ಪಾಡೆ ಮೌನೀಶರಾಗ ನೋಡೆ ಗಾನದಿ
ಸುರಜಾಲ ಜಯ ಜಯವೆನ್ನಲು
ಸಾನುರಾಗದಿ ಸೀತಾ ಮಾನಿನಿಯೊಡಗೂಡಿ
ಧೇನುನಗರ ಶ್ರೀ ರಾಮನು ಮುದದಿ ೩

## ೩೦೩

ಚಂಡನಾಡಿದ ಹರಿ ಚಂಡನಾಡಿದ ಪ

ಪುಂಡರೀಕ ಜಾತೆಯೊಡನೆ ಪುಂಡರೀಕ ಕುಸುಮಮಯದ ಅ.ಪ.

ನೀರೆ ಲಕ್ಷ್ಮಿಯಿಂದ ಕೂಡಿ ಸಾರ ಸೊಬಗಿನಿಂದ ನೋಡಿ
ವಾರಿಜಾಕ್ಷಿ ಕರವ ನೀಡಿ ಪಾರಿಜಾತ ಕುಸುಮಮಯದ ೧

ಸೊಂಪಿನಿಂದ ಮಂದಹಾಸ ಪೆಂಪುದೋರೆ ಸಿರಿಯಮ್ಮೆ
ಗಂಪಿನಿಂದ ರಮೆಯು ಸಹಿತ ಚಂಪಕದ ಕುಸುಮಮಯದ ೨

ಪುಲ್ಲನಯನ ಪರಿಮಳವ ಚೆಲ್ವ ಚಂದ್ರ ಕಿರಣದಂತೆ
ಚೆಲ್ವನಾಂತ ಸರಸಮಾನ ಮಲ್ಲಿಗೆಯ ಕುಸುಮಮಯದ ೩

ದಿವ್ಯ ಮಾಧುಪ ಝೇಂಕೃತಿಯು ಭವ್ಯಮಾಗೆ ದಿವಿಜರೆಲ್ಲ
ದಿವ್ಯಮೆಂದು ಪೊಗಳೆ ಸುಖದಿ ನವ್ಯ ಜಾಜಿ ಕುಸುಮಮಯದ ೪

ಶ್ರೀನಿವಾಸ ಸಕಲ ಹೃದಯ ಶ್ರೀನಿವಾಸ ಧೇನುನಗರ
ಶ್ರೀನಿವಾಸ ವೆಂಕಟೇಶ ಶ್ರೀನಿವಾಸ ಕುಸುಮಮಯದ ೫

## ೩೦೪

ದೃಷ್ಟಿ ತಾಕಿತೆ ನಿನಗೆ ಶ್ರೀರಾಮ
ಸುಂದರತರ ಮುಖ ಚಂದ್ರನ ನೋಡುತಲಿ
ಸುಂದರಿಯರೆಲ್ಲ ಬಂದು ಕಂದ ನಿನ್ನ ಮುದ್ದಿಡಲು ೧

ಬಾಲನೆ ನಿನ್ನವರ ನೀಲ ಶುಭಕುಂತಲವ
ನೀಲ ವೇಣಿಯರು ತಿದ್ದಿ ಲಾಲಿಸಿದ ಕಾರಣದಿಂ ೨

ಮಂಗಳವಾದ ನಿನ್ನ ಕಂಗಳ ಥಾಳವನ್ನು
ಅಂಗನೆಯರೆಲ್ಲ ನೋಡಿ ಹೆಂಗಿಸಿದ ಕಾರಣದಿಂ ೩

ಮಾರಸುಂದರ ಸುಕು ಮಾರವರ ರೂಪವನು
ಸಾರಸಾಕ್ಷಿಯರು ಕೂಡಿ ಮೀರಿಮಾತನಾಡಿದರಿಂ ೪

ಮಾನವ ವಂದಿತನೆ ಮೌನಿಕುಲ ಸೇವಿತನೆ
ಧೇನುಪುರ ವೆಂಕಟೇಶ ಶ್ರೀನಿವಾಸ ಪಾಲಿಸಲಿ ೫

## ೩೦೫

ನೀರೆಯರು ಸಾರುತ್ತ ಮುದದಿ ನೀರಜದಾರತಿ ಬೆಳಗಿದರು ಪ

ಸೇರಿ ಸೀತಾ ನಾರೀಮಣಿಯಿಂ ರಾರಾಜಿಪ ಶ್ರೀರಾಮಗೆ ಅ.ಪ.

ಕಂದರ್ಪಕೋಟಿ ಸುಂದರಾಂಗನಿಗೆ
ಕಂದರ್ಪಸತಿ ಸುಂದರಾಂಗಿಗೆ
ಇಂದು ಮಿತ್ರಕುಲ ನಂದನ ರಾಮಗೆ
ಇಂದುವಂಶ ನಂದಿನಿ ಸೀತೆಗೆ ೧

ವ್ಯಾಕಶಾಸನನಾದಿ ಲೋಕ ವಂದಿತೆಗೆ ಶ್ರೀ
ಕರಾಂಬಕಿ ಲೋಕ ವಂದ್ಯೆಗೆ
ಲೋಕನಾಥ ಶ್ರೀಕರ ರಾಮನಿಗೆ ಲೋಕ
ಮಾತೃ ಮಾತೆಗೆ ಸೀತೆಗೆ ೨

ಮಾನವೇಮದ್ರ ವಂಶ ಮಾನಿತ ರತ್ನಗೆ ಮೌನಿ
ಚಿತ್ತ ಮಿತ್ರೆ ಮೀನನೇತ್ರೆಗೆ
ದಾನವಾಂಧಕಾರ ಭಾನುರಾಮನಿಗೆ
ಧೇನುನಗರ ನಾಥೆಗೆ ಸೀತೆಗೆ ೩

## ೩೦೬

ಬಹು ವೈಭವಮಾದುದು ಇಂದಿರಾದೇವಿ
ಪರಿಣಯ ಮಹೋತ್ಸವವು ಪ

ಮಂಗಳ ಮಂಟಪವು ಚಪ್ಪರದಲ್ಲಿ .ಶೃಂಗಾರ ವರ ಪೀಠವು
ರಂಗುರಂಗಿನ ರಂಗವಲ್ಲಿಯು
ಕಂಗೊಳಿಪ ರುಚಿರಾಂಬರಾಳಿಯು
ಅಂಗಜನ ರಥದಂತೆ ತೋರ್ಪುದು
ಮಂಗಳ ಸುವಾದ್ಯಂಗಳಿಂದಲಿ ೧

ಸುತ್ತ ದೀಪಾವಳಿಯು ಸುವರ್ಣದ ಮುತ್ತಿನ ತೋರಣವು
ಕೆತ್ತಿಸಿದ ವರ ವಜ್ರ ಪದ್ಮವು ಸುತ್ತು ವೀಳೆಯ ಪುಷ್ಪ ನಿಚಯವು
ಸುತ್ತೆ ಜವ್ವಾಜಿಗಳ ಪರಿಮಳ ಸುತ್ತಿ ಸುಳಿವ ಸುಗಂಧ ಲಹರಿಯು ೨

ಬೀಗರು ಹಸೆಯೊಳಿರೆ ಆ ಮಧ್ಯದಿ ಬೀಗಿತ್ತಿಯರು ಕುಳ್ಳಿರೆ
ಆಗ ನಿಶ್ಚಿತ ಲಗ್ನದಲ್ಲಿ ವಧೂವರರ ಪೂಜೆಯನು ಗೈಯಲು
ಆಗಮನ ದೀಕ್ಷಿತರ ಮಂತ್ರ ಸರಾಗದಿಂ
ತುಂಬಿರಲು ಸಭೆಯೊಳು ೩

ದಾರಾ ಮಹೋತ್ಸವವು ಅಕ್ಷತೆಗಳ ಸೇರೆಯೊಳೆರೆಯುವುದು
ನಾರಿಯರ ವರದೇವತಾಸ್ತುತಿ ಸಾರೆ ಭೂಸುರರಾಶಿಷಂಗಳು
ಸೇರೆ ಸಂಗೀತಗಳ ವೈಖರಿ ಸಾರಿ ಸುರಗಣ ಜಯಜಯನ್ನಲು ೪

ಮಾನಿನಿಯರು ಮೋದದೆ ಆರತಿ
ಮಾಡೆ ದಾನದಕ್ಷಿಣೆಯಾಗಲು
ಬಾನುರಾಗದೆ ಸರ್ವರನ್ನು ವಿನೋದದಿಂದುಪಚರಿಸುತಿರಲು
ಧೇನುಪುರವರ ವೆಂಕಟೇಶನು ಶ್ರೀನಿವಾಸನು
ಹರಸೆ ಸಂತೋಷದಿ ೫

## ೩೦೭

ಬ್ರಹ್ಮನ ರಾಣಿ ಮಂಗಳಂ ಶಾರದೆ ಸಕಲಾರ್ಥದೆ ಪ

ನಿನ್ನನು ನಂಬಿದೆ ಸನ್ಮತಿಯಿತ್ತು ಜಿಹ್ವೆಯೊಳೀಗಲೆ ನಲಿಯೆ
ಶಾರದೆ ಸಕಲಾರ್ಥದೆ ೧

ವರ್ಣ ಸುಂದರಾಕೃತಿ ಪೂರ್ಣ ಫಲಪ್ರದೆ
ಪೂರ್ಣದಯದಿ ಪೊರೆಯೆ
ಶಾರದೆ ಸಕಲಾರ್ಥದೆ ೨

ಸುಂದರ ಶಾರದ ಚಂದ್ರ ಪ್ರಭಾನ್ವಿತೆ ಮಂದಹಾಸದಿ ನಟಿಸೆ
ಶಾರದೆ ಸಕಲಾರ್ಥದೆ ೩

ವೀಣಾ ಸಂಗೀತ ಶುಭೆ ವಾಣೀ ಸಂಪೂರ್ಣ ಕಲೆ
ಶೋಣಾಧರ ಪಲ್ಲವೆ ಶಾರದೆ ಸಕಲಾರ್ಥದೆ ೪

ಧೇನುನಗರಹಿತೆ ಮಾನಸ ಸಂಗತೆ ಮಾನಿನಿ ವಾಗ್ವಿಜೃಂಬಿಣಿ
ಶಾರದೆ ಸಕಲಾರ್ಥದೆ ೫

## ೩೦೮

ಬಾರೋ ನೀರದ ನೀಲ ಸುಂದರ ಲೀಲವಿಗ್ರಹನೆ ಪ

ವೀರ ದಾನವಶೂರ ಭಂಜನ ಬಾರೈ ಉರುಟಣೆಗೆ ಅ.ಪ.

ದಿವ್ಯ ಸಾರಸ ರೇಖರಂಜಿತ ಪಾದಪಂಕಜಕೆ
ನವ್ಯಮಾದ ಸುಗಂಧ ಚೂರ್ಣವ ನಿಂದು ಲೇಪಿಸುವೆ ೧

ಇಂದು ಸುಂದರ ಫಾಲ ನಿನ್ನಯ ಫಾಲ ದೇಶದಿ ನಾಂ
ಇಂದು ತಿಲಕವ ತಿದ್ದಿ ನಿಲವೆನು ಪ್ರಾಣ ನಾಯಕನೆ ೨

ಸಾಧು ರಕ್ಷಣ ದಕ್ಷ ರಾಕ್ಷಸ ಶಿಕ್ಷ ಭುಜಯುಗಕೆ
ಶ್ರೀಧರಿತ್ರೀಫಾಲ ಲೋಲನೆ ಗಂಧವ ಲೇಪಿಸುವೆ ೩

ಕಂಬುಕಂಠ ಶ್ರೀಕಂಠ ಮಿತ್ರನೆ ನಿನ್ನಯ ಕಂಠಕೆ ನಾಂ
ಅಂಬುಜೋಪಮ ಹಸ್ತದಿ ಗಂಧವ ನಿಂದು ಲೇಪಿಸುವೆ ೪

ಮೌನಿ ಹೃದಯ ಚಕೋರ ಚಂದ್ರನೆ ಮಾಲೆಯನರ್ಪಿಸುವೆ
ಧೇನುನಗರ ಶ್ರೀರಾಮಚಂದ್ರನೆ ವೀಟಿಯ ಸ್ವೀಕರಿಸೈ ೫

## ೩೦೯

ಬಾಳು ಸೌಖ್ಯದಿಂ ತನಯನೆ ಬಾಳು ಸೌಖ್ಯದಿಂ ಪ

ಲೀಲೆಯೊಳನುದಿನ ಸಂತಸವಾಂತು ನೀಂ ಅ.ಪ.

ಮುರಹರ ಪರಮಾಯುಷ್ಯವ ನೀಯಲಿ
ಪುರಹರ ನಾರೋಗ್ಯವ ಕೊಡಲಿ ಪರಿಪರಿ ವಿಭವವ
ಪೊಂದುತ ನಲಿಯುತ ೧

ಇಂದ್ರನಂತೆ ವರ ಭೋಗವ ಪೊಂದುತ
ಚಂದ್ರನಂತೆ ಲೀಲೆಯ ಪಡುತ ಸುಂದರ
ಮಂದಿರಕಾನಂದವನಿತ್ತು ೨

ಧರ್ಮ ಕಾರ್ಯವನ್ನಾಚರಿಸುತ ನೀಂ
ಕರ್ಮಮಾರ್ಗವಂ ಸೇವಿಸುತ ಶರ್ಮವ
ಪೊಂದುತ ಸುಜನರ ಸೇವಿಸಿ ೩

ಕೀರ್ತಿವಂತ ನೀನಾಗಿರು ಸರ್ವದ
ಧೂರ್ತರನ್ನು ವರ್ಜಿಸು ದೂರಂ
ಆರ್ತರನ್ನು ರಕ್ಷಣೆಯ ಗೈಯುತ ೪

ಶಾರದೆ ನಿನ್ನಯ ಸೇರಲಿ ಸತತಂ
ಶ್ರೀರಮಣಿಯು ನಿನ್ನ ಪೊಂದಿರಲಿ ಪಾರ್ವತಿ
ನಿತ್ಯವು ಸಲಹಲಿ ನಿನ್ನನು ೫

ಅನ್ನಧಾನ ಧೇನುದಾನವ ಗೈಯುತ
ಕನ್ಯಾದಾನವ ವಿರಚಿಸುತ ಮನ್ನಿಸಿ ಹಿರಿಯರ ಗುರುಗಳ ಸೇವಿಸಿ ೬

ಮಾನವಂತ ನೀನಾಗಿರು ಸರ್ವದ
ಜ್ಞಾನವಂತನಾಗಿರು ನಿರತಂ ಧೇನುಪುರೀಶನ ಶ್ರೀಶನ ಸ್ಮರಿಸುತ ೭

## ೩೧೦

ಬಾಳು ಸೌಖ್ಯದಿಂ ತನುಜೆಯೆ ಬಾಳು ಸೌಖ್ಯದಿಂ ಪ

ಲೀಲೆಯೊಳನು ದಿನ ಸಂತಸವಾಂತು ನೀಂ ಅ.ಪ.

ಸರಸಿಜ ತನಯೆ ತಾ ನಾಯುವ ನೀಯಲಿ ಗಿರಿಜೆಯು
ಸೌಭಾಗ್ಯವ ಕೊಡಲಿ ಸುರಪಿತ ರಮಣಿಯು ಸಲಹಲಿ ನಿನ್ನನು ೧

ಇಂದ್ರನ ಸತಿಯಂದದಿ ಸುಖದಿಂದಿರು
ಚಂದ್ರ ರಮಣಿಯಂದದಿ ಸುಖಿಸು ಸುಂದರ
ಮಂದಿರಕಾನಂದವನಿತ್ತು ೨

ಪುಟ್ಟಿದ ಮನೆಗೆ ನೀಂ ಕೀರ್ತಿಯ ತರುವುದು
ಕೊಟ್ಟ ಮನೆಯ ರಕ್ಷಿಸುತಿಹುದು ಇಷ್ಟಮಾದ
ಭೋಗ ಭಾಗ್ಯವ ಪೊಂದುತ ೩

ಸುಂದರ ಪತಿಯಿಂದ ನೀಂ ಕೂಡುತ
ನಂದನರನ ನೀಂ ಪಡೆಯುತಲೀ ಚಂದದಿಂದ
ಪತಿಸೇವೆಯ ಗೈಯುತ ೪

ಅತ್ತೆ ಮಾವಂದಿರ ಸೇವೆಯ ಗೈಯುತ
ಭೃತ್ಯರನ್ನು ನೀಂ ಪೋಷಿಸುತ ನಿತ್ಯ
ದಾನಧರ್ಮವ ನೀಂ ಗೈಯುತ ೫

ದೇವದ್ವಿಜರನು ಭಾವನೆ ಗೈಯುತ
ಭಾವಿಸುತಲಿ ಗೃಹ ಕಾರ್ಯವನು ಸೇವಿಸುತಲಿ
ಗುರುಹಿರಿಯರ ನಿತ್ಯವು ೬

ಮೌನಿಜನಂಗಳು ನಿನ್ನನು ಹರಸಲಿ
ಮಾನವತಿಯು ನೀನಾಗಿರುತ
ಧೇನುಪುರೀಶನ ಸೇವಿಸಿ ಸಂತತ ೭

## ೩೧೧

ಭೂಮಿ ನಂದಿನಿ ಬಾರೌ ಹಸೆಗೆ
ಕಾಮಿನೀಮಣಿ ರಾಮಭಾಮಿನಿ ಪ

ರಾಮಕಾಮಿನಿ ಕೋಟಿ ಕಾಂತಿಯುತೆ
ಸೋಮಬಿಂಬ ವದನೆಯೆ ಸೀತೆಯೆ ಅ.ಪ.

ರಾವಣಾದಿ ಸುರವೈರಿ ಸಂಹಾರಿಣಿ
ಪಾವಮಾನಿ ಮನೋವಾರಿಜಾಶ್ರಿತೆ
ದೇವತಾವಳೀ ದೇವಸನ್ನುತೆ ದೇವಬೃಂದ ವಂದಿತೆ ಸನ್ನುತೆ ೧

ಸತ್ಯ ಸಂಕಲ್ಪೆಯೆ ಸತ್ಯ ಸ್ವರೂಪೆಯೆ
ಭಕ್ತವತ್ಸಲೆಯೆ ಶಕ್ತಿರೂಪೆಯೆ
ನಿತ್ಯ ಕಲ್ಯಾಣಿಯೆ ತತ್ವಭಾವನೆಯೆ ಸತ್ಯ
ಮಾರ್ಗವಿಶದೆಯೆ ಮಾತೆಯೆ ೨

ವರಧೇನುಪುರಿ ಪರಮೇಶ್ವರಿ ವರದಾಯಿನಿ ವರಲೋಕಪಾಲೆ
ಕರುಣಾಕರೆ ವರರಾಮ ಜಾಯೆ ಪರಿಪಾಲಿತಾಶ್ರಿತೆ ಸುರನುತೆ ೩

## ೩೧೨

ಮಂಗಳಂ ದಯಾನಿಧೆ ಮಂಗಳಂ ಗುಣನಿಧೆ ಪ

ಶ್ರೀ ರಂಜಿತಾಂಗನೆ ಪಾರಂಗ ತಾಖಿಲ ಸುರೇಂದ್ರ ಸುನ್ನುತನೆ ೧

ಕಾಮಾರಿಚಿತ್ತದೊಳ್ ಪ್ರೇಮದಿ ನಿಂತಿಹೆ ರಾಮ
ನಿಖಿಲಸುರದಾಮ ಸುಗುಣನೆ ೨

ನಿತ್ಯ ನಿರಂಜನ ಭಕ್ತತಮೋಪಹ ಸತ್ವ
ನಿರ್ಜಿತ ಸುರವೈರಿಹರೆ ೩

ಧೇನುಪುರಾಧಿಪ ಸೂನಾಸ್ತ್ಯವಂದಿತ
ಗಾನವಿನೋದ ಶ್ರೀಹರಿಯೆ ೪

## ೩೧೩

ಮಂಗಳಂ ಮಾರುತಿಯೆ ಸತತಮಸ್ತು ಮಂಗಳಂ ಶ್ರೀಮತಿಯೆ
ಮಂಗಳಂ ದುರಿತನಾಶಕ ವಿರಾಜಿತ ಮಂಗಳಂ
ಶರಣರಕ್ಷಕ ರಾಮದೂತನೆ ಪ

ವಾರಿಧಿಲಂಘನ ಶೂರವಿದಾರಣ ವೀರ
ಲಂಕಾದಹನ ಭಾರ ನಿವೃತ ದೇವ ೧

ಜ್ಞಾನಜ್ಞೇಯ ರೂಪ ದಾನವವಿವರ್ಜಿತ
ಕಾನನಸಂಪ್ರಿಯ ಮಾನಿರಾಮದೂತ ೨

ದಶಶತಕಂಧರ ದಶನವಿದಾರಣ ಮಶಕರಾಕ್ಷಸ
ಮೃತ್ಯು ಪಶುಪತಿರೂಪನೆ ೩

ಧೇನುನಗರ ಪರಿಪಾಲ ಶ್ರೀನಿವಾಸ ಲೋಲ
ಶ್ರೀ ಹನುಮಂತ ಜ್ಞಾನಿ ಸುಗುಣವಂತ ೪

## ೩೧೪

ಮಂಗಳಾಂಬಿಕೇ ವರಲಕ್ಷ್ಮೀ ಮಂಗಳಂ ಜಯ ಪ

ಅಂಗಜಾದಿ ಪ್ರೇಮಜನನಿ ಭೃಂಗವೇಣಿಯೆ ಜಯ ಅ.ಪ.

ಬಿಂಬರದನವಸನ ಭೂಷೈ ಅಂಬುಜಾಂಬಕಿ
ಕುಂಭಸದೃಶ ಕುಚವಿಹಾರಿ ಅಂಬ ಪಾಹಿಮಾಂ ಜಯ ೧

ಕುಂಕುಮಾಕ್ತ ಫಾಲಶೋಭೆ ಕಿಂಕಿಣೀರವೆ
ಪಂಕಜಾತ ಶೋಭಮಾನ ಹಸ್ತಪಲ್ಲವೆ ಜಯ ೨

ರತ್ನನಿಚಯ ಭಾಸಮಾನ ರತ್ನಕಿಂಕಿಣೀ
ರತ್ನರಾಜಪುತ್ರಿ ಕಮಲೆ ಭಕ್ತವತ್ಸಲೆ ಜಯ ೩

ಚಿತ್ತದಲ್ಲಿ ಭಾವಿಸುವೆನೆ ನಿತ್ಯ ನಿನ್ನನು
ಯತ್ನದಿಂದ ಧೇನುನಗರ ವಾಸೆ ಪಾಲಿಸು ೪

## ೩೧೫

ಮಂಗಳಂ ಶ್ರೀರಾಮಚಂದ್ರ ಭಂಗಿತಾಸುರೇಂದ್ರನೆ ವೀರ ಪ

ರಾಜಕಾಂತಿ ಕೋಮಲಾಸ್ಯ ರಾಜರಾಜ ಪೂಜಿತ
ರಾಜವಂಶಜಾ ಸಮೇತ ರಾಜ ಹೃದಯ ಮಿತ್ರನೆ ೧

ಶಂಕರಾದಿ ಹೃದಯವಾಸ ಪಂಕಜಾನನ
ಲಂಕಾನಗರ ಸಂಕಟಾರ್ತಿ ಶಂಕರಾಯ ಮಾಣ ದೇವ ೨

ಧೇನುನಗರ ಪಾಲವೀರ ದಾನವಂತಕ
ಕಾನನಾ ವಿನೋದ ಶ್ರೀದ ವಾನರಾದಿ ಗೀಯಮಾನ ೩

## ೩೧೬

ಮಂಗಳಂ ಶ್ರೀರಾಮಚಂದ್ರಗೆ ಮಂಗಳಾಂಗಗೆ ಪ

ಭೃಂಗವೇಣಿ ಜನಕಜಾಂತರಂಗ ಲೋಲಗೆ ಅ.ಪ.

ರಾವಣಾದಿ ದನುಜಮಥನ ಕಾಲರೂಪಗೆ
ಪಾವಮಾನಿ ಹೃದಯ ಕಾಮುದ ಪೂರ್ಣ ಚಂದ್ರಗೆ ೧

ದೇವತಾಳಿ ಗೀಯಮಾನ ದಿವ್ಯ ಚರಿತೆಗೆ
ಭೂ ವಧೂ ಪರಿಪಾಲನೈಕ ದರ್ಮನಿರತಗೆ ೨

ಮೌನಿ ಹೃದಯದಿವ್ಯ ಕಮಲ ಹಂಸ ರೂಪಗೆ
ಧೇನುನಗರ ನಾಥ ವೇಂಕಟೇಶ ರೂಪಗೆ ೩

## ೩೧೭

ಮಂಗಳಂ ಸುಗುಣಾಭಿರಾಮಗೆ ಮಂಗಳಂ ಶ್ರೀರಾಮಗೆ ಪ

ಮಂಗಳಂ ಲೋಕಾಭಿರಾಮಗೆ ಮಂಗಳಂ ಗುಣಧಾಮಗೆ ಅ.ಪ.

ದಶರಥನ ಸುತನಾಗಿ ಮುನಿವರ ಕುಶಿಕಯಜ್ಞವ ಪಾಲಿಸಿ
ಶಶಿಮುಖಿಯ ಸೀತೆಯನು ಒಲಿಸಿದ ದಿಶಿಸುಭಾಸುರ ನಾಮಗೆ ೧

ತಂದೆಯಾಜ್ಞೆಯ ಪೊಂದುತಾಗಲೆ ಬಂದು ವನದಲಿ ನೆಲಸಿದ
ಛಂದದಿಂದಲಿ ಕಂದಭರತನಿಗಂದು ಪಾದುಕೆ ಇತ್ತಗೆ ೨

ದಂಡಕಾವನದಲ್ಲಿ ನೆಲಸುತ ಖಂಡಿಸುತ ರಾಕ್ಷಸರನು
ಭಂಡರಾವಣ ಹರಿಸೆ ಸೀತೆಯ ಚಂಡ ಹನುಮನ ಕಂಡಗೆ ೩

ವೀರ ವಾಲಿಯ ಕೊಂದು ರಾಜ್ಯವ ಸೂರ್ಯಸುತನಿಗೆ ಪಾಲಿಸಿ
ವಾರಿಜಾಕ್ಷಿಯ ಪುಡುಕಲೋಸುಗ ವೀರರನು ಕಳುಹಿಸಿದಗೆ ೪

ಮಾರುತಾತ್ಮಜನಿಂದ ಸೀತಾ ನೀರಜಾಕ್ಷಿಯ ವಾರ್ತೆಯಂ
ಸಾರಿ ಮದನು ಪೊಂದಿ ದಯದಿಂ ವೀರ ಕಪಿವರಗೊಲಿದಗೆ ೫

ಧೀರರಾವಣನನ್ನು ಕೊಂದು ನಾರಿ ಸೀತೆಯನೊಲಿಸುತ
ಸಾರಿ ಸಾಕೇತವನು ಮುದದಿಂ ವೀರ ಪಟ್ಟವನಾಳ್ದಗೆ ೬

ಜಾನಕೀ ಲಕ್ಷ್ಮೀ ಸಮೇತಗೆ ಮೌನಿವರಗಣ ಸೇವ್ಯಗೆ
ಮಾನವಾಂಬುಧಿ ಪೂರ್ಣ ಚಂದ್ರಗೆ ಧೇನುಪುರ ಶ್ರೀರಾಮಗೆ ೭

## ೩೧೮

ಮದಗಜಗಾಮಿನಿ ವಿಧುಮುಖಿ ಬಾ ಸೀತೆ
ಸದಮಲ ಸುಂದರ ಪೀಠಕೆ ಪ

ಇಂದು ಸುಂದರಮುಖಿ ಮಂದಗಮನೆ ಸಖಿ
ಚಂದ್ರ ಬಿಂಬಾಧರೆ ಸುಂದರಿ ವೈಯಾರಿ ಮಂದಾರ ಮಾಲೆಯೆ ೧

ನೀರಜನೇತ್ರೆಯೆ ಚಾರುದಸುಗಾತ್ರಿಯೆ
ಮಾರಹರನ ಸಖ ಮೋಹನ ಮಿತ್ರೆಯೆ ಕೀರವಾಣಿಯೆ ೨

ಸುರವರ ಪೂಜಿತೆ ನರವರ ವಂದಿತೆ
ಶರಣಾಗತ ಪರಿಪಾಲಿನಿ ಭಾಮಿನಿ ರಾಮ ವಲ್ಲಭೆ ೩

ದಿವ್ಯ ಮಂಗಳರೂಪೆ ಭವ್ಯ ಕಲಾಲಾಪೆ
ಸರ್ವ ಸುಗುಣಮಣಿ ಹಾರಿಣಿ ರಮಣಿ ಭೂಮಿ ನಂದಿನಿ ೪

ಧೇನುನಗರ ರಾಮ ಮಾನಿನಿ ಕಾಮಿನಿ
ಜ್ಞಾನ ಸಂವರ್ಧಿನಿ ಜಾನಕಿ ಜನನಿ ಮಾನವೇಶ್ವರಿ ೫

## ೩೧೯

ರಂಗ ಮಂಗಳಂ ಸದಾ ಬೃಂದಾವನ ವಿಹಾರಿ ಪ

ಸುಂದರಾಂಗನೆ ಕುಂದ ಕೋಮಲ
ದಂದದಂತಿಹ ದಂತ ಭಾಸಿತ ೧

ತುಳಸಿ ರೂಪದ ಅಲಕಭಾಸಿತಾಮಲಕ ಸನ್ನಿಭ ತಿಲಕ ಭಾಸುರ ೨

ಕುಂಡಲೋಜ್ವಲಾ ಖಂಡಸೋದರ ಜಂಡರಾಕ್ಷಸ ಖಂಡನಶೀಲ ೩

ಧೇನುನಾಮಕ ನಗರನಾಯಕ ಮಾನಿನೀ ಪ್ರಿಯ ಶ್ರೀನರಹರೆ ೪

## ೩೨೦

ರಘುನಂದನ ಬಾರೈ ಹಸೆಗೆ ನಿಗಮಾಗಮಾ ವಳಿಸನ್ನುತ ಪ

ಸುಗುಣಾಭಿರಾಮನೆ ರಾಮನೆ ಶ್ರೀ ಮೃಗಲೋಚನೆ
ಶ್ರೀ ಜಾನಕಿ ಸಹಿತ ಅ.ಪ.

ಸುರವೈರಿ ವೈರಿ ಕುಲಭಂಜನ ಪರಮೇಶವರ ಚಾಪಖಂಡನ
ಕರುಣಾಕರ ಖರದೂಷಣಾದಿ ಹರನಾಶ್ರಿತ ವರ ಲೋಕಪಾಲ ೧

ನವ ಕೋಟಿಕಾಮ ನವ ಮೋಹನಾಂಗ
ನವನೀರದಾಭ ನವಸುಂದರ
ನವಶಕ್ತಿಸಂಯುತ ಭಾವನೈಕ ನವಗೋಚರ
ನವಮೀ ಸಂಜಾತ ೨

ವರಧೇನುಪುರಿ ಪರಿಪಾಲ ಲೋಲ
ಶರಣಾಗತ ಭರಣಾಧೃತ
ಚರಣಾರವಿಂದ ಸುರಲೋಕಬೃಂದ ಪರಿವಾರಿತ
ವರ ರಾಮಚಂದ್ರ ೩

## ೩೨೧

ರಘುರಾಮಚಂದ್ರ ಬಾರೈ ಹರೆ ದಿವ್ಯ ರತ್ನಪೀಠಕೆ ಪ

ದೇವತಾಳಿ ನುತಿಯ ಕೇಳಿ ಭಾವದಲ್ಲಿ ಮುದವ ತಾಳಿ
ರಾವಣಾದಿ ದನುಜ ವೃಂದವ ಸೀಳಿ ಜಗವ ಪೊರೆದ ವಿಭುವೆ ೧

ಮಂದಹಾಸ ಮುಖವಿಲಾಸ ಇಂದು ಸುಂದರ ಫಾಲರಾಮ
ಇಂದು ವಂಶಜಲೋಲ ದಶರಥನಂದನಾಶ್ರಿತ ವತ್ಸಲ ವಿಭುವೆ ೨

ಪಲ್ಲವಾರುಣ ಪಾಣಿ ಪಂಕಜ ಮಲ್ಲಿಕಾಕುಸುಮಾಳಿ ಭಾಸುರ
ಪುಲ್ಲ ಚಂಪಕ ಮಾಲಕ ರಂಜಿತ ಉಲ್ಲಸನ್ಮೃದುವಾಣಿ ವಿಭುವೆ ೩

ಭಕ್ತ ಹೃದಯ ಕುಮುದ ಚಂದ್ರ ಶಕ್ತಿವಿಜಿತ ರಾಕ್ಷಸೇಂದ್ರ
ಭಕ್ತಿಯಿಂದ ಭಾವಿಸುವೆನು ಭುಕ್ತಿ ಮುಕ್ತಿದಾಯಕ ವಿಭುವೆ ೪

ಮಾನವೇಂದ್ರ ಸುರೇಂದ್ರ ವಂದಿತ ಸೂನ ಶರ ಸಹಸ್ರ ಸುಂದರ
ಮೌನಿ ಹೃದಯ ಚಕೋರ ಚಂದ್ರನೆ
ಧೇನುನಗರ ಶ್ರೀರಾಮ ವಿಭುವೆ ೫

## ೩೨೨

ರಜತಗಿರೀಶ್ವರ ಪಾಲಯದಂ ಪಾಲಯೇದಂ
ಶ್ರೀದಂಪತಿ ಯುಗಳು ಪ

ತನು ಮನೋವಾಕ್ಕರ್ಮ ಪರಮಪವಿತ್ರಂ
ಮನುರಘು ಜನಕ ಸಮಾನ ಚರಿತ್ರಂ
ಅನುಪಮ ಕೀರ್ತಿ ಸುಧಾಕರ ಮಿತ್ರಂ
ಮನಸಿಜ ಲೋಭ ಮೋಹಾದಿ ಲವಿತ್ರಂ ೧

ಇಂದ್ರ ಸಮಾನ ಸುವೈಭವ ಯುಕ್ತಂ
ಚಂದ್ರಶೇಖರ ಸ್ಮೃತಿದತ್ತ ಸುಚಿತ್ತಂ
ಇಂದಿರೇಶ ಶ್ರೀರಾಮ ಸುಭಕ್ತಂ ಸುಂದರ
ಮಂದಿರ ಕೌಸ್ತುಭರತ್ನಂ ೨

ಮಾನವ ಶುಭಕರ ಸದ್ಗುಣ ಸಹಿತಂ ಮಾನವ ಧರ್ಮ
ಸುಪಾಲನ ಮಾಹಿತಂ
ದಾನಧರ್ಮ ಗುರು ಸೇವನನಿರತಂ ಧೇನುಪುರೀಶ್ವರ
ಭಾವನ ಮುದಿತಂ ೩

## ೩೨೩

ರಾಮ ಪೀಠಮಾಶ್ರಯ ಕಾಮಕೋಟಿ ಮೋಹನಾಂಗಕ ಶ್ರೀ ಪ

ಸೂರ್ಯಕುಲ ಮಾಲಿಕಾಮಣಿ ಆರ್ಯವಂಶ ದಿವ್ಯ ಮೌಕ್ತಿಕ ಶ್ರೀ ೧

ಇಂದು ವಂಶ ನಂದಿನೀಯುತ ಇಂದು
ಸುಂದರಾಸ್ಯ ರಾಘವ ಶ್ರೀ ೨

ವೈರಿವನ ದಾವಪಾವಕ ವೀರ ವರರಘು ನಂದನ ಶ್ರೀ ೩

ಭೂಮಿಸುತ ಪ್ರಾಣನಾಯಕ, ಮಾಮಿತಾರ್ಥ ಫಲದಾಯಕ ೪

ಭಾನು ಶತಕೋಟಿಭಾಸುರ ಧೇನುಪುರನಾಥ ಶ್ರೀಕರ ೫

## ೩೨೪

ಲಾಲಿ ರವಿಕುಲಕಲಶಜಲಧಿವರ ಚಂದ್ರ ಲಾಲಿ ದಶರಥ
ತನಯ ರಘುರಾಮ ಚಂದ್ರ ಲಾಲಿ ಪ

ಕುಶಿಕಸುತವರ ಯಾಗರಕ್ಷಣ ಸುದೀಕ್ಷಾ ಪಶುಪತಿಸು
ಕೋದಂಡ ಖಂಡನ ಸುದೀಕ್ಷಾ
ಶಶಿವಂಶಜಾಹೃದಯ ಕಮಲ ಸುಮ ಮಿತ್ರಾ ಋಷಿ
ಪರಶುರಾಮ ಬಲವಿದಳನ ಚರಿತ್ರಾ ೧

ಸಾಕೇತನಗರಜನಸನ್ನುತ ಸುಮೂರ್ತೆ
ಕೈಕೆಯೀವರ ಯುಗಳ ಸಾರ್ಥಕ ಸುಕೀರ್ತೆ
ಲೋಕ ರಕ್ಷಣ ದಿವ್ಯ ಶರಚಾಪ ಸಾಕೇತ
ಮುಖ್ಯನುತವರ ಸುಪ್ರತಾಪ ಲಾಲಿ ೨

ದಂಡಕಾವನ ನಿವಹ ಸಂಚಾರಶೀಲ ಖಂಡಿತಾಮರ
ವೈರಿ ದುಷ್ಟ ಜನಜಾಲ
ಚಂಡಕಿರಣ ತನೂಜ ಮಂಗಳ ವಿನೋದ
ಪುಂಡರೀಕಾಕ್ಷ ಮುನಿ ಮಂಡಲಾ ಭಯದ ೩

ವಾತಾತ್ಮ ಜಾತ ಬಹು ವಿಕ್ರಮ ವಿಶೇಷ ಸೀತಾ
ಶಿರೋರತ್ನ ದರ್ಶನ ಸುತೋಷ
ಭೀತ ಸಾಗರ ಸೇತುಬಂಧನ ಸುಯತ್ನ ಧೂರ್ತ
ರಾಕ್ಷಸನಾಗ ಗಾರುಡ ಸುರತ್ನಾ ೪

ಧೃತ ವೈರಿ ದಶಕಂಠ ಕಂಠ ವಿಚ್ಛೇದ ಧೃತ
ಮೈಥಿಲೀನಯನ ವೀಕ್ಷಣ ವಿನೋದ
ವಿತತ ಶೌರ್ಯಾದಿ ಗುಣ ದಿವ್ಯ ಮಣಿ ಹಾರ
ನುತದೇವತಾ ನಿಚಯ ತಾಮರಸ ಮಿಹಿರ ೫

ಮೌನಿಗಣವಿನುತ ಶ್ರೀ ಪಟ್ಟಾಭಿರಾಮ ಜ್ಞಾನದಾಯಕ
ದೇವ ಲೋಕಾಭಿರಾಮ
ಜಾನಕೀ ಸಹಿತ ಜಯ ಜಯ ವೀರರಾಮ ಧೇನುಪುರ
ದೇವಮಾಂ ಪಾಹಿ ಶ್ರೀರಾಮ ೬

ಜಯ ಮಂಗಳಂ ರಾಮ ಸುಗುಣಾಭಿರಾಮ ಜಯ
ಮಂಗಳಂ ರಾಮ ಲೋಕಾಭಿರಾಮ
ಜಯ ಮಂಗಳಂ ರಾಮ ಶ್ರೀರಾಮ ರಾಮ ಜಯ
ಮಂಗಳಂ ರಾಮ ಧೇನುಪುರ ರಾಮ ೭

## ೩೨೫

ಶ್ರೀ ರಾಮಭಕ್ತಾಯ ಶುಭ ಮಂಗಳಂ
ವೀರಾಂಜನೇಯಾಯ ಜಯ ಮಂಗಳಂ ಪ

ಅಂಜನಾತನಯಾಯ ಕಂಜದಳನೇತ್ರಾಯ
ಮಂಜೀರ ಮಣಿ ಪುಂಜ ರಂಜಿತಾಯ
ಸಂಜೀವನಾಹರಣ ಸಂಜನಿತ ಹರ್ಷಾಯ ಮಂಜುಳ
ಶುಭಾಂಗಯ ಮಂಜುಳಾಯ ೧

ಅಕ್ಷಾದಿ ದೈತ್ಯಕುಲ ಶಿಕ್ಷಣ ಸುದಕ್ಷಾಯ
ಲಕ್ಷ್ಮಣ ಪ್ರಾಣ ಸಂರಕ್ಷಣಾಯ
ಋಕ್ಷವಾನರ ಪಕ್ಷರಕ್ಷಣ ಸುದೀಕ್ಷಾಯ ಪಕ್ಷೀಂದ್ರ
ಗಂಧವಹ ಗತಿ ಲಕ್ಷಿತಾಯ ೨

ಪಂಚ ಭೃಂಗಾವಳಿ ಪಂಚತಾಕರಣದ್ವೈತ
ಪಂಚಾನನಾದಿ ಮುಖ ಪಂಚಕಾಯ
ಪಂಚ ಪಂಚ ಭುಜಾಯ ಪಂಚಯುಗ ನಯನಾಯ
ಪಂಚತಾಪ ಹರಾಯ ಪಂಚಾಕ್ಷರಾಯ ೩

ನವಕೋಟಿ ಕಂದರ್ಪ ನವಮೋಹನಾಂಗಾಯ
ನವವರವ್ಯಾಕರಣ ನವಪಂಡಿತಾಯ
ನವಪಂಚ ಮಂತ್ರಗತ ನವಪಂಚವರ್ಣಾಯ
ನವಪಂಚಕೋಟಿ ಯೂಥಪ ಸೇವಿತಾಯ ೪

ಸುಂದರಾಕಾರಾಯ ಸುಂದರ ಸುಭಾಷಾಯ ಸುಂದರ
ಮಹಾಕಾಂಡ ಬೃಂದಾರಕಾಯ
ಗಂಧರ್ವ ಗರ್ವಹರ ಗಂಧರ್ವ ಗಾನಾಯ
ಗಂಧರ್ವವೇದೇಷು ಘನ ಪಂಡಿತಾಯ ೫

ಸರ್ವದೇವ ಮಯಾಯ ಸರ್ವಲೋಕ ಹಿತಾಯ
ಸರ್ವಮಂತ್ರಾವಳೀ ಸನ್ನುತಾಯ
ಸರ್ವಮಂತ್ರ ಗತಾಯ ಸರ್ವಜನ ಪೂಜ್ಯಾಯ
ಸರ್ವಭೀತಿ ಹರಾಯ ಸರ್ವಾತ್ಮಕಾಯ ೬

ಕೋಟಿ ರವಿ ಸಂಕಾಶವರ ಕೋಟೀರಹಾರಾಯ ಕೋಟಿ
ಶತಕೋಟಿ ಭಯವರ್ಜಿತಾಯ
ಪಾಟಿತಾಶ್ರಿತ ಕೋಟಿ ಕೋಟಿಸಂಕಷ್ಟಾಯ
ಬೇಟೆರಾಯಾಖ್ಯ ದೀಕ್ಷಿತ ರಕ್ಷರಾಯ ೭

ವರಧೇನುಪುರಮಧ್ಯ ವಿದ್ಯೋತಮಾನಾಯ ಸುರಧೇನು
ದ್ವಿಜವೃಂದ ಪಾಲನಾಯ
ಪರಮಾವತಾರಾಯ ಪರಶಕ್ತಿ ರೂಪಾಯ ಪರಮಂತ್ರ
ಪರಯಂತ್ರ ವಿಧ್ವಂಸಕಾಯ ೮

## ೩೨೬

ವಾಣಿ ಮಂಗಳಂ ದೇವಿ ಪ

ಗೀರ್ವಾಣಿ ಕಮಲಪಾಣಿ ಭ್ರಮರವೇಣಿ ಕೀರವಾಣಿ ಅ.ಪ.

ಇಂದುವದನೆ ದೇವಿ ಚಂದ್ರಧವಳ ಸುಂದರಾಂಗಿ
ಕುಂದರದನೆ ಮಂದಗಮನೆ ೧

ವೀಣಾ ಪಾಣಿ ದೇವಿ ಶೋಣ ಬಿಂದು ದಶನ ವಸನೆ
ಏಣನಯನೆ ಧವಳ ವಸನೆ ೨

ಅಂಬುಜಾಕ್ಷಿ ದೇವಿ ಕುಂಭ ಸಂಭವಾದಿ ವಿನುತೆ
ಕಂಬುಕಂಠಿ ಶಂಭು ಸೋದರಿ ೩

ಶಾರದಾಂಬೆ ದೇವಿ ಅಂಬರೋಪಮಾನ ಮಧ್ಯೆ
ಜಂಭವೈರಿ ಗೀಯಮಾನೆ ೪

ಜ್ಞಾನರೂಪೆ ದೇವಿ ಮೌನಿ ಹೃದಯ ಕಮಲಹಂಸೆ
ಧೇನುನಗರ ಸನ್ನಿವಾಸೆ ೫

## ೩೨೭

ಶ್ಯಾಮಸುಂದರಿ ಭೂಮಿನಂದಿನಿ ರಾಮಸುಂದರಿ ಸೀತೆಯೆ ಪ

ಪ್ರೇಮದಿಂದ ದಿವ್ಯ ಪೀಠಕೆ ಭಾಮಿನಿಯೆ ಬಾ ಪ್ರಿಯೆ ಅ.ಪ.

ದೇವ ಸುಂದರಿಯರು ಸೇರಿ ದೇವಿ ನಿನ್ನ ಕರೆವರು
ದೇವ ವೃಂದವು ನಿನ್ನ ಸ್ಮರಿಸಿ ಭಾವಿಸುತ್ತಲಿರುವರು ೧

ಮಂದಗಮನೆ ಸುಂದರಾಂಗಿ ಮಂದಹಾಸ ಶೋಭಿತೆ
ಚಂದ್ರಬಿಂಬ ಸದೃಶವದನೆ ಚಂದ್ರವಂಶ ನಂದಿನಿ ೨

ಕಮಲಪಾಣಿ ಭ್ರಮರ ವೇಣಿ ಸುಮ ಸುಮಾಲಿ ಕಾಯುತೆ
ವಿಮಲ ವಾಣಿ ರಮಣಿ ತರುಣಿ, ಸುಮನ ಕೀರವಾಣಿಯೆ ೩

ಮಾನಿನಿ ಶಿರೋಮಣಿಯೆ ಧೇನುನಗರ ವಲ್ಲಭೆ
ಜಾನಕಿಯೆ ಸನ್ನುತೆಯೆ ಮೌನಿ ಬೃಂದವಂದಿತೆ ೪

## ೩೨೮

ಸರಸೀರುಹಾಕ್ಷಿಯ ಕರೆದರಾ ಸೀತೆಯ ಪ

ಪರಶಕ್ತಿ ರೂಪೆಯ ಪರತತ್ವ ಮೂರ್ತಿಯ
ಪರಮಕಲ್ಯಾಣಿಯ ಕರೆದರಾ ಸೀತೆಯ ೧

ಭೂಮಿನಂದಿನಿಯ ರಾಮ ಸುಂದರಿಯ
ಭಾಮಿನಿ ದೇವಿಯ ಕರೆದರಾ ಸೀತೆಯ ೨

ಮೌನೀಶ ವಂದ್ಯೆಯ ಜ್ಞಾನ ಸುಂದರೀಯ
ಧೇನುಪುರೀಶೆಯ ಕರೆದರಾ ಸೀತೆಯ ೩

## ೩೨೯

ಸುಂದರಿಯರು ಅಂದದಾರತಿ ಬೆಳಗಿ
ಕುಂದರದನ ದಿವ್ಯ ಮಂದಸುಹಾಸಗೆ ಇಂದಿರಾಪತಿ ಹರಿಗೆ ಪ

ಅಂಗಜಪಿತಭವ ಭಂಗ ನಿರ್ಮಲ ಗುಣ ಸಂಗರಹಿತ ಹರಿಗೆ ೧

ವೇದಗೋಚರ ಬಹು ವಾದ ದುರ್ಲಭ
ಮಹಿಮ ನಾದ ವಿನೋದ ಹರಿಗೆ ೨

ಪೀತಾಂಬರಾಚ್ಯುತ ಧಾತೃಕಾರಣ ನಿಜ ವಾತ್ಸಲ್ಯ ಭಕ್ತ ಹರಿಗೆ ೩

ಜಂಭಾರಿ ಸೋದರ ಗಂಭೀರದಾಕಾರ ಸ್ತಂಭ ತನುಜ ಹರಿಗೆ ೪

ಮಾನವಿವರ್ಜಿತ ಮಾನವಪೂಜಿತ ಧೇನುನಗರ ಹರಿಗೆ ೫

## ೩೩೦

ಹಸಗೆ ಬಾ ಬಿಸಜಾಕ್ಷಿಯೆ ಕುಸುಮ ಗಂಧಿನಿ ಸೀತೆಯೆ ಪ

ಮಂಜೀರ ಭೂಷೆಯೆ ಮಂಜುಸುವಾಣಿಯೆ
ಕಂಜನಾಭ ರಾಮ ಭಾಮೆಯೆ ಮಂಜುಳಾಂಗಿಯೆ ೧

ಅಂಬುಜಪಾಣಿಯೆ ಅಂಬುಜನಾಭಿಯೆ
ಬಿಂಬಫಲ ಸದೃಶಾನನೆ ಕಂಬುಕಂಧರೆ ೧

ಕ್ಷೋಣೀಷ ಸನ್ನುತೆ ವಾಣೀಶ ವಂದಿತೆ
ಏಣ ನೇತ್ರೆ ಶ್ರೀರಾಮ ಸುಪ್ರಾಣನಾಯಕಿ ೩

ಸುರರಚಿರ ಕುಂತಲೆ ಪರಿಜನ ವತ್ಸಲೆ
ನಿರುಪಮ ವಾಣಿಸುನ್ನುತೆ ಪ್ರಣವಾಂಚಿತೆ ೪

ಮೌನೀಶ ವಂದ್ಯೆಯ ಮಾನವ ಸೇವ್ಯಯೆ
ಧೇನುಪುರಿಕಾಂತ ಸುಪ್ರಿಯೆ ರಾಮವಲ್ಲಭ ೫

## ದೇವತಾಗುರುಸ್ತುತಿ

### ೩೩೧

ಆಶೀರ್ವದಿಸು ಗುರುರಾಜ
ನಾ ಶೀರ್ಷವನೆ ಬಾಗುತ ನಮಿಸುವೆ

ಜ್ಞಾನದಾತ ಕರುಣಿಸು ತಾತಾ
ಆತ್ಮಾನುಭವಾ ಪಡೆವ ವರವಾ
ಜ್ಞಾನನಿಧಿಯ ಬೇಡುವೆ ನಿನ್ನೋಳ್
ಮನದಿ ಜ್ಞಾನವು ಹೊಳೆಯುವತೆರನಾ

ದೇವನಾನೆಂದರಿವತೆರದಿ
ಜೀವಭಾವ ಮರೆವತೆರದಿ
ಭಾವದಿ ನೀನೆ ನೆಲೆಸುವ ತೆರದಿ
ಸಾವಿನಂಜಿಕೆ ಸರಿಯುವತೆರನಾ

ಅನುಭವನಿಧಿಯೆ ಚಿನುಮಯರೂಪಾ
ಮನವು ನಿನ್ನೋಳ್ ಮುಳುಗುವ ತೆರದಿ
ಆ ನಾರಾಯಣ ಶಿಷ್ಯ ಶಿಖಾಮಣಿ
ಜ್ಞಾನಿಶಂಕರ ಗುರುರಾಜಾ

## ೩೩೨

ಗುರುಬೋಧ ಪರಮಸುಖಕಾರಿ
ಬಾರಿ ಬಾರಿಗೂ ಕೇಳ್ಕೈ ಭವರೋಗೀ ಪ

ಬಿಡು ಬಾಳಿನ ಭ್ರಮೆಯ ಸಂಸಾರಿ
ದುಃಖದ ಬಾಳಿದು ವಿನಾಶಕಾರಿ
ಇದರೊಳು ಸಿಗುತಿಹ ಸುಖವು ವಿಕಾರಿ
ತಿಳಿಯೈ ಮುಕ್ತನಾಗಲಿದು ದಾರಿ ೧

ಆರಿ ನಿನ್ನಯ ನಿಜವಾ ಸುವಿಚಾರಿ
ಅರಿವೇ ನಿನ್ನಯ ಈ ಭವತಾರಿ
ಬೇರಾವುದು ನಿನಗಾಗದು ದಾರಿ
ಈ ನುಡಿ ಪೇಳುತಿಹುದು ಶೃತಿಸಾರಿ ೨

ಜಾಗರಾ ಕನಸು ನಿದ್ರೆಯ ಮೀರಿ
ಅಮರವಾಗಿರುವ ಪದವನೆ ತೋರಿ
ಅದೆ ನೀನೆನ್ನುತ ಪರಿಪರಿ ಸಾರಿ
ಶಂಕರಭೋಧವಿದುವೆ ಭವಹಾರಿ ೩

## ೩೩೩

ಚಿರಶಾಂತಿ ಪ್ರದಾತಾ ಗುರುವರಾ
ಪರಮಾರ್ಥಪ್ರಬೋಧಾ ಸುಖಕರಾ

ಭವವಿತರಣಾ ದಿವ್ಯಚರಣಾ
ಅಮಿತ ಕರುಣಾ ಜ್ಞಾನಭರಣಾ

ಮೋಹಜಾಲದ ತಿಮಿರ ಮುಸುಕಿರೆ
ಸೋಹಮೆನಿಪ ಜ್ಞಾನಸೂರ್ಯ
ಉದಿಸಿ ನೀ ಘನಸ್ವಾತ್ಮರಂಜನಾ

ಶೃತಿಶಿರಗಳಿಗೂ ಪೇಳಲಾಗದೆ
ನೇತಿ ಎನ್ನುವ ಮೌನವ ಧರಿಸಿದ
ಆತ್ಮತತ್ವವ ಪೇಳ್ದೆ ಧೀರನೇ

ಭವಶರಧಿಯಲಿ ನಾವಿಕ ನೀನೇ
ಸಾವಕಾಶದಿ ದಾಂಟಿಸುತಿರುವೀ
ನಮಿಪೆ ನಾ ಗುರುದೇವ ಶಂಕರಾ

## ೩೩೪

ದತ್ತ ದಿಗಂಬರನೇ ವಂದಿಪೆ ನಾ ಕಾಯ್ದೈ ನೀ
ಕರುಣಾ ಸಾಗರ ವಲ್ಲಭರಾಮಾ

ಪಾಡುವೆನಾ ಹೇ ಜಗದೀಶಾ
ನೀಗುಸು ಆಶಾ ಬೇಡುವೆ ಶ್ರೀಶಾ
ಚೈತನ್ಯಾಂಬುಧಿ ಆತ್ಮಸ್ವರೂಪಾ

ವಿಷಯದೊಳಿರುವಾ ಈ ಘನಪ್ರೇಮಾ
ನಿನ್ನೊಳಗಿರಲೈ ನಿರ್ಗುಣಧಾಮಾ
ಸದ್ಗುರುನಾಥಾ ಹೇ ಅವದೂತಾ

ಸತ್ಯ ಸ್ವರೂಪಾ ನಿತ್ಯಾನಂದಾ
ಮಿಥ್ಯಾಕಲ್ಪನೇ ಈ ಜಗ ನಿನ್ನೊಳ್
ಬ್ರಹ್ಮಾನಂದಾ ಶಂಕರಾರೂಪ

## ೩೩೫

ದೇವನಾ ದರುಶನಾ ಜೀವನಾ ಪಾವನಾ
ಗುರುವಿನಾ ಪ್ರವಚನಾ ಸಾವಿನಾ ನಾಶನಾ ಪ

ಸ್ವಾತ್ಮದ ಜ್ಞಾನೋದಯ ಜಗದಿ ಪೂರ್ಣ ನಿರ್ಭಯ
ಬ್ರಹ್ಮಪದದ ತನುಮಯ ತಾನೇ ಶುದ್ಧ ಚಿನುಮಯ ೧

ಜ್ಞಾನದ ಪೂರ್ಣಾನುಭವ ನಿರ್ವಿಕಲ್ಪ ಸ್ಥಿತಿಯೆ ಶಿವಾ
ನೀಗಿತು ಈ ದುರುಳ ಭವ ಗುರುವಿತ್ತಾತ್ಮಾನುಭವ ೨

ಜೀವನ್ಮುಕುತಿ ಆನಂದ ತಿಳಿಯೆ ನೀನೆ ಮುಕುಂದ
ಅರಿತು ನೋಡು ಇದನೆಂದ ಗುರುಶಂಕರನಾ ಕಂದಾ ೩

## ೩೩೬

ನಂಬಿ ಕೆಟ್ಟವರಿಲ್ಲವೊ ಸದ್ಗುರುವಿನ
ನಂಬಿ ಕೆಟ್ಟವರಿಲ್ಲವೊ
ನಂಬದೆ ಗುರುವಿನ ಜ್ಞಾನದ ಬೋಧವ
ಹುಂಬತನವ ಮಾಡಿ ಕೆಟ್ಟರೆ ಕೆಡಲಯ್ಯ ಪ

ಬಾಳು ದುಃಖದ ಆಗರ ಸ್ವರೂಪದಿ
ಕೇಳಬೇಡೆಲೊ ದುಃಖವಾ
ಏಳು ಎಚ್ಚರಗೊಳ್ಳು ಕೀಳುತನವ ಬಿಡು
ಹೇಳಿಕೊಡುವೆನೆಂಬ ಗುರುವಿನ ನುಡಿಯನು ೧

ದೇಹಬುದ್ಧಿಯ ಬಿಡಿಸಿ ವಿವೇಕದಿ ದೇವಬುದ್ಧಿಯನಿರಿಸಿ
ಸೋಹವೆಂಬುವ ಮಹಾಮಂತ್ರವ ಬೋಧಿಸಿ
ಮೋಹವನೋಡಿಸಿ ಕಾಯುವ ಗುರುವಿನ ೨

ಪಂಚಕೋಶವ ಕಳಿಸಿ ಸಂಚಿತ ಮೊದಲಾದ ಕರ್ಮವ ನೀಗಿಸಿ
ಹಂಚಿಕೆಯಿಂದಲಿ ಮುಕ್ತನ ಮಾಡುವ
ಪಂಚಕಸಾಕ್ಷಿ ಶ್ರೀಗುರುವಿನ ಬೋಧವ ೩

ತಾನೆ ದೇವನು ಎನ್ನುವಾ ಪಾವನವಾದ
ಸ್ವಾನುಭವನೀಡುವಾ
ಏನೊಂದು ಬಯಸದೆ ಜ್ಞಾನದಾನವ ಮಾಳ್ಪ
ಜ್ಞಾನಿ ಶಂಕರಗುರುರಾಯನ ನುಡಿಯನು ೪

## ೩೩೭

ಸಮಿಪ ಸದ್ಗುರುರಾಯಾ
ಆ ನಿನ್ನ ದಯದಿ ಪುನೀತವಾದುದು ಕಾಯಾ
ಅರಿವಾಯ್ತು ಎನ್ನ ಸ್ವರೂಪದನುಭವ ಜೀಯಾ
ದೂರಾಯ್ತು ಮಾಯಾ

ಘೋರಕರ್ಮವ ನೀಗಿದೆನು ನಾ
ಪಾರಮಾರ್ಥಿಕ ಸತ್ಯವರಿಯುತ
ಮೀರಿದಾನಂದದಲಿ ಮುಳುಗುತ
ಸೇರಿ ಒಂದಗಿಹೆನು ನಿನ್ನೊಳು

ಸರಸ ನಿನ್ನಯ ಬೋಧಾ
ಈ ಮರುಳು ಮಾನವರೇನು ಬಲ್ಲರು ಮೋದ
ಮಾತೆನಲುಬೇಗನೇ ಸಚ್ಚಿದಾತ್ಮನ ಶೋಧಾ
ತೋರುವರು ಕ್ರೋಧಾ

ಮರುಳುಮತಿಗಳು ಅರಿದರೆಂತೋ
ಪರಮತತ್ವವ ಪರವಿಚಾರದಿ
ದುರುಳರಾ ಮಾತೇಕೆ ನಿನ್ನಯ
ಕರುಣೆಯಿಂದಲಿ ಪಾರುಗಂಡೆನು

## ೩೩೮

ನಮಿಪೇ ನಮಿಪೇ ನಮಿಪೇ ಶ್ರೀ ಗುರುದೇವಾ
ನಮಿಪೇ ನಾ ಅಮಿತನಾದ ಜ್ಞಾನಭೋಧಾ ನೀತಿದಾ ವಿಬುಧಾ

ಜ್ಞಾನಬೋಧಾ ನೀಡಿ ಮನದಾ ದೀನತನ ಬಿಡಿಸಿ
ನೀನೆ ಆ ಪರಮಾತ್ಮನೆನುವಾ ಸ್ವಾನುಭವ ಹಿಡಿಸಿ
ಹೀನವಿಷಯಾಸಕ್ತಿಯಾ ನೀಗಿಸಿ ಎನಗಾಗಿ
ಅಮಿತವಾದಾ ಜ್ಞಾನಬೋಧಾ ನೀಡಿದಾ ವಿಬುಧಾ

ಜಗದಸುಖದ ಮರುಳು ಬಿಡಿಸಿ ಸೊಗಸ ತೋರಿಸಿದಿ
ಅಘವನಳಿದು ಸೊಗಸಿನೊಳಗೆ ಖಗೆಯ ನಿಲಸಿದಿ ನೀ
ಬಗೆಯ ರೋಗವೆಲ್ಲವ ನೀಗಿಸಿ ಎನಗಾಗಿ
ಬಗೆಬಗೆಯಲಿ ಬೋಧಿಸಿದ ಶ್ರೀ ಶಂಕರಾರ್ಯನೇ ನಾ

## ೩೩೯

ನಮಿಸುವೆ ನಿನ್ನ ಶ್ರೀಗುರುವೆ ಅಮಿತಾನಂದಾತ್ಮಸ್ವರೂಪನೇ
ಶಮನ ಮಾತು ಈ ಭವಭಾಧೆಯ ನೀ
ಚಿನುಮಯ ಮೂರುತಿಯೇ ಪ

ಬೆಂದೆನು ಸುಖದುಃಖಗಳಲಿ ನಾ
ಬಹು ನೊಂದೆನು ಜನಿಮೃತಿ ಹೊಂದುತಾ
ಎಂದಿಗೆ ಪರಮಾನಂದವ ಪಡೆವೇ
ಬಂದೆನು ಶರಣಾಗಿ ೧

ಭೋಗದಿ ಸುಖಿಸುವೆನೆಂಬುವಾ ಅನು
ರಾಗದಿ ವಿಷಯಗಳಲಿ ಸಿಲುಕಿ
ಭೋಗಿಸಿದಂತೆಯೆ ವಾಸನಾ ಬಲ
ವಾಗಂತ ಬಂದಿತು ಮನದಲ್ಲಿ ೨

ಈ ಗತಿಯಲಿ ಸುಖಕಾಣದೆ ಭವ
ರೋಗದಿ ಬಳಲುವೆನೀಗಲೇ
ತ್ಯಾಗದಿ ನಿಜಸುಖ ದೊರಕುವ ರೀತಿಯ
ತಿಳುಹಿಸು ಗುರುವರನೆ ೩

ವಿಶ್ವದ ತೊಡಕನು ಹಾಕಿಕೊಂತು
ಈಶ್ವರನನ್ನೇ ಮರೆತಿರುವೆ
ನಶ್ವರವಾಗಿಹ ಈ ಜಗವನು
ಶಾಶ್ವತವೆಂದೇ ತಿಳಿದಿರುವೇ ೪

## ೩೪೦

ನಮೋ ಸಚ್ಚಿದಾನಂದಾ
ಪರಾತ್ಮಾ ಶ್ರೀಶಿವಾನಂದಾ ಪ

ನಮಿಸುವೇ ಪುಣ್ಯ ವಿಚಿತಾತ್ಮಾ
ಮಹಾತ್ಮಾ ಸತ್ಯ ಸರ್ವಾತ್ಮಾ
ಸ್ವರೂಪಾನಂದವಾ ಪಡೆವಾ
ಸನ್ಮತಿಯಾ ನೀಡು ಗುರುದೇವಾ
ಚರಣಕೆ ಎರಗುವೆನು ದೇವಾ ೧

ಸದಾನಂದಾ ಮನೋಹರಾ
ಹೃದಯದಾವಾಸ ನಿಜಸಾರಾ
ಗುರುವರಾ ಶಂಕರಸ್ವರೂಪಾ
ಕರುಣಿಸೈ ಬೋಧದಾನಂದಾ
ಪರಾತ್ಮಾ ಶ್ರೀಶಿವಾನಂದಾ ೨

## ೩೪೧

ನೀನೇ ಭವಾಬ್ಧಿ ದಾಂಟಿಸಿದಿ ಸದ್ಗುರುನಾಥಾ
ನೀನೇ ಸ್ವರೂಪಾವಬೋಧ ನೀಡಿದಿ ತಾತಾ

ಜ್ಞಾನಾಸಿಯಿಂದ ಕಡಿದ್ಯೆ ಸಂಸಾರಪಾಶವ
ನಾನಾತ್ಮವಳಿದು ಕಳೆದ್ಯೆ ಅಜ್ಞಾನದೋಷವಾ
ನಾನೆನ್ನ ರೂಪ ತಿಳಿದೆ ಪ್ರಭೋ ಶ್ರೀಗುರುದೇವಾ
ನಾನೇಂ ಪೇಳ್ವೆ ನಿನ್ನ ದಿವ್ಯ ಬೋಧಪ್ರಭಾವಾ

ಈ ವಿಶ್ವವೆಲ್ಲ ಕನಸಿನಂತೆ ಎನಗೆ ತೋರ್ಪುದ್ಯೆ
ಆವಾಗ ಬೋಧವಾಯ್ತು ನಾನರಿತೆ ಸತ್ಯವಾ
ನಾವೀರ್ವರೆಂಬ ಭಾವವಡಗಿ ಸೇರಿದೆ ನಿನ್ನೊಳ್
ಈ ವಾಣಿಯಿತ್ತು ಸಲುಹಿದ ಶ್ರೀ ಶಂಕರ ಗುರುವೆ

## ೩೪೨

ಪರಮಾತ್ಮ ದಿವ್ಯಚರಣಾ ಭಜಿಸುವೆವು ಜ್ಞಾನ ಪೂರ್ಣ
ನೀ ತೋರ್ಪುದಯ್ಯ ಕರುಣಾ

ಸಂಸಾರ ತಾಪ ಹರಣಾ
ಆನಂದ ರೂಪ ತಾಣಾ ನಾರಾಯಣಾತ್ಮಪೂರ್ಣ

ನಿನ್ನಿರವೇ ಜಗವಿದೆಲ್ಲ ನಿನ್ನರಿವೇ ಜೀವರೆಲ್ಲಾ
ನಿನ್ನಿಂದೆ ಸುಖವಿದೆಲ್ಲಾ ನೀನೆ ಇದೆಲ್ಲಾ ದೇವಾ

ನೀ ಸತ್ಯ ನಿರ್ವಿಕಾರ ನೀನಾತ್ಮರೂಪಸಾರಾ
ನೀ ಪರಮ ಮೋಕ್ಷತಾಣಾ

ಮರೆತಿರಲು ಜೀವ ನಿನ್ನ ದೊರೆಯುವುದೆ ಶಾಂತಿ ನಿನ್ನ
ಪರಿತಾಪಬಿಡುತ ಮುನ್ನಾ ತಿರುಗುವನೋ ಜನ್ಮ ಜನ್ಮ

ಗುರು ಶಂಕರಾರ್ಯ ನಿನ್ನ ಶರಣುಹುದೆ ಶಾಂತಿತಾಣ
ನೀ ಸರ್ವರಾತ್ಮಪೂರ್ಣ

೩೪೩

ಪರಮಾನಂದ ಪರಿಪೂರ್ಣಾ ನೀ
ಗುರುವರಾ ಜ್ಞಾನಾದಾತಾ
ಮಾನಿತಾ ನೀ

ದೇಹಾದಿಸಂಘಾತವಾ ಮೀರಿರ್ದ ಸ್ವರೂಪವಾ
ಮಹಾಗೂಢವಾ ಬೋಧಿಸೀ
ಮುಕುತಿ ನೀಡುತಿರುವಾ ನೀ

ಸ್ವರೂಪಾಜ್ಞಾನಾ ಮಹಾಸಾಧನಾ
ಪೇಳಿದ ನೀನೇ ದಯಾಘನಾ ಮಾನಿತನೇ

ಪರಾತ್ಪರಾ ನಿರಾಮಯಾ
ನೀನೇ ಸ್ವರೂಪಾತ್ಮನೈ
ನೀನೇ ನಾನಾದೆ ದೇವಾ
ಗುರುವೇ ಶಂಕರಾರ್ಯ

## ೩೪೪

ಬನ್ನವನಾ ನೀಗಿದೆ ಜವದಿ
ಧನ್ಯನಾದೆ ಶ್ರೀ ಗುರುವೆ ಧನ್ಯನಾದೆ
ಸದ್ಗುರುವೇ ಧನ್ಯನಾದೆ ಪ

ಭವಸಾಗರವಾ ದಾಟಿದೆ
ಜವನ ಬಾಧೆಯ ನೀಗಿದೆ
ಜೀವಭಾವವು ಸಟಿಯೆಂದೆನಿಸಿ
ದೇವನಾದೆ ಪಾವನನೆ ಧನ್ಯನಾದೆ ೧

ಅರಿತೆನೆನ್ನಯ ನಿಜರೂಪವನಾ
ದುರಿತವ ನೀಗಿದೆ ಅರಿವಿನ ಬಲದಿ
ದೊರಕಿತು ಮುಕುತಿ ಧನ್ಯನಹುದು ನಾ
ನೀನೆ ನಾನ್ಯೆ ಶಂಕರನೇ ಧನ್ಯನಾದೆ ೨

## ೩೪೫

ಬಾ ಬಾ ಬಾ ಗುರು ದತ್ತಾತ್ರೇಯ ನೀ ಕರುಣಾಮಯಾ
ನೀ ತೋರೈದಯಾ ಬಾ ಬಾ ಬಾ ಗುರುವತ್ತಾ

ಅನುಸೂಯಾಸತಿತನಯಾ ಪರಿ ಹರಿಸೆನ್ನಯ ಮಯಾ
ಎರಗುವೆ ಚರಣಕ್ಕೆ ಜೀಯಾ ಕರುಣಿಸುನೀ ಗುರು ರಾಯಾ
ಈ ಭವಾ ಈ ಭವಾಬ್ಧಿದಾಂಟಿಸು
ಕೈವಲ್ಯ ತೋರಿಸು ದತ್ತಾತ್ರೇಯ

ಬಾಳಿನ ಭ್ರಮಯನು ಬಿಡಿಸಿ ಪಾಲಿಸು ಹೃದಯ ನಿವಾಸಿ
ನಿನ್ನ ಸ್ವರೂಪವ ತಿಳಿಸಿ ಬೋಧಿಸು ಕುರುಪುರವಾಸಿ
ಶ್ರೀ ಗುರೋ ಶ್ರೀ ಗುರೋ ನಮಿಸುವೆನು
ಪ್ರಭೋ ದಯಾಮಯ ದತ್ತಾತ್ರೇಯಾ

ಚಿನು ಮಯರೂಪನು ನೀನು ಚಿರನದ್ವೈತನುನೀನು
ನೀಡೈ ಚಿತ್ತಕೆ ಶಾಂತಿ ನೀಗಿಸು ಎನ್ನಯ ಭ್ರಾಂತಿ
ನೀ ಗುರೋ ನೀ ಗುರೋ ಶ್ರೀ ಶಂಕರ
ಆನಂದ ಸಾಗರ ದತ್ತಾತ್ರಯ

## ೩೪೬

ಬಾಗಿ ನಾ ನಮಿಪೆ ಗುರುದೇವ
ಯೋಗಿರಾಜಾ ಪಾಲಿಸು ಮತಿಯಾ
ಶ್ರೀಗುರುವೆ ಪರಮಾತ್ಮರೂಪ

ಜ್ಞಾನ ಬೋಧಕಾ ಮುಕುತಿ ಪ್ರದಾತಾ
ಸ್ವಾನುಭವನಂದಾಮೃತದಾತಾ
ಮಾನವಾಕೃತಿ ತಳೆದಬಿಳಾತ್ಮಾ
ಹೀನಭವದ ಭಯ ಬಿಡಿಸಿರುವಾತಾ

ನಿತ್ಯ ನಿರಂಜನ ಸತ್ಯಸ್ವರೂಪ
ಭೃತ್ಯರ ಬೋಧಿಸಿ ಮುಕ್ತಿಯ ನೀವಾ
ಶ್ರೋತ್ರಿಯ ನೀಘನ ಬ್ರಹ್ಮನಿಷ್ಠಗುರು
ಮತಿಯನೆ ಪ್ರೇರಿಸು ಶ್ರೀಗುರುಶಂಕರ

## ೩೪೭

ಬಾಗುವೇ ಶ್ರೀಗುರೋ ಸತ್ಯಸ್ವರೂಪಾ
ಓ ಜ್ಞಾನಿಯೇ ಪರಾತ್ಮರೂಪನೇ
ನೀ ಬೋದಿಸ್ಯೆ ನಮೋ ಮಹಾತ್ಮನೇ
ಶರಣಾದೆ ಕರುಣಿಸು ನೀ ಭವದಬಾಧೆ ನೀಗಿಸ್ಯೆ

ಈ ದರುಶನಾ ಪಾದಾಭಿವಂದನಾ
ಈ ಸ್ಪರ್ಶನಾ ಪುನೀತವೀಮನಾ
ಭಾಗ್ಯವಿದೇ ಜೀವನದೀ ನಿನ್ನಂಥ ಗುರು ದೊರಕಿದಿ

ಆನಂದದಾ ಸುಬೋಧ ನೀಡುವಾ
ಈ ಬುಧವಾ ನಿವಾರಿಸುವ ಮಹಾ
ಬೋಧಾತ್ಮ ಶಂಕರಗುರು

## ೩೪೮

ಬೇಡುವೆ ನಾ ಯಾದವಾ ಬೋತಿ ಮನದ ಮೋಹವಾ
ಓಡಿಸುತಲಿ ಮಾಧವಾ ನಿನ್ನ ಸೇರಿಕೊಂಬುವಾ
ನೀಡು ಇನಿತು ಭಾಗ್ಯವಾ

ನಾನು ಇದುವೆ ನನ್ನದು ಮಾನವಗಿದು ಪಾಶವು
ದೀನಬಂಧು ಇವನು ನೀ ಮಾಣದೆ ಬಿತಿಸ್ಯೆ ಪ್ರಭೋ
ಬೇಡಿಕೊಂಬೆ ಹೇ ವಿಭೋ ನೀನೆ ಪರಮಸದ್ಗುರು

ಹೃದಯದಲ್ಲಿ ನೆಲೆಸಿದಾ ಆತ್ಮರೂಪವನು ಸದಾ
ಮುದದಿ ತಿಳಿಯುವಂತೆ ನೀ ಸನ್ಮತಿ ದಯಪಾಲಿಸ್ಯೆ
ಸದಮಲಾತ್ಮಶಂಕರಾ ಬೇಡುವೆ ನಿನಗೀಶ್ವರಾ

## ೩೪೯

ಬೋಧಿಸು ಗುರುವರನೇ ಆತ್ಮರೂಪನೇ
ಬಾಧೆಯ ನೀಗುಸು ಬೋಧಾತ್ಮನೇ

ಶಾಂತಿಯನೀವಾ ಭ್ರಾಂತಿಯ ಕಳೆವಾ
ಏಕಾಂತಪೂರ್ಣ ನಿರಾತಂಕವಾದ

ಚಿಂತೆದೂರಮಾಡುವಾ ಅಂತರಾತ್ಮಜ್ಞಾನವಾ
ಸಂತೋಷದಿಂದ ತಿಳಿಸೈ ಮಹಾತ್ಮನೆ

ಸದ್ಗುರುರಾಯಾ ಕರುಣಿಸು ಜೀಯಾ
ಓತಿಸು ಮಾಯಾ ಮಹಾಮೋಹನಿಧಿಯಾ
ಜ್ಞಾನಬೋಧ ನೀಡುವಾ ಸ್ವಾನುಭಾವ ತೋರುವಾ
ಗುರುಶಂಕರಾರ್ಯ ಕೃಪೆಮಾಡು ಜೀಯಾ

## ೩೫೦

ಭಾಗ್ಯ ಬೇಕೈ ಗುರುವೇ ಬೋಧವ ಕೇಳೆ
ಭಾಗ್ಯ ಬೇಕೈ ಜೀವಿಗೆ ಭಾಗ್ಯದ ಹೊರತಾಗಿ
ಯೋಗ್ಯವಾಗಿಹ ಬೋಧ ಭೋಗಲಂಪಟ ಭವ
ರೋಗಿಗೆ ದೊರಕೀತೆ ಪ

ಮಾನವಜನ್ಮವ ತಾಳೆ ಬೇಕೆಲೋ ಭಾಗ್ಯ
ಹೀನಬಾಳುವೆ ಬೇಸರಾಗೆ ಬೇಕೆಲೋ ಭಾಗ್ಯ
ಜ್ಞಾನಿಯ ದರುಶನವಾಗೆ ಬೇಕೆಲೋ ಭಾಗ್ಯ
ತಾನು ತನ್ನಯ ನಿಜವ ತಿಳಿಯೆ ಪರಮ ಭಾಗ್ಯ ೧

ಬಾಳಿನ ಸುಖಕಾಗಿ ಆಳಾಗಿ ದುಡಿವಂಗೆ
ಕೀಳುತನದಿ ಜ್ಞಾನವಲ್ಲಗಳೆಯುವಗೆ
ಮೇಲು ತಾನೆಂದು ತಿಳಿದೋಡಾಡುವವನಿಗೆ
ಕಾಲನಂಜಿಕೆ ಕಳೆವ ಬೋಧವು ತಿಳಿವೊಡೆ ೨

ಏನಾದೊಡೇನಯ್ಯ ಎನ್ನ ಪೂರ್ವದಭಾಗ್ಯ
ನಾನಾದೆ ದೇವನು ಗುರು ನೀನೇ ಯೋಗ್ಯ
ಹೀನರ ಕೊಂಡೇನು ನಾನೊಂದು ಪಾರಾದೆ
ಜ್ಞಾನಿಶಂಕರನೆ ನಾನಾದೆ ಎನ್ನಯ ಭಾಗ್ಯ ೩

## ೩೫೧

ಮೂರ್ಖ ತಿಳಿವನೆ ಗುರುವೆ ನಿನ್ನ ಬೋಧದ ಸವಿಯ
ಅರ್ಕನಾ ತೇಜವನು ಗೂಗೆಯರಿದಪುದೇ ಪ

ನೀನೆ ಪರಮಾತ್ಮನಿಹೆ ಎಂದು ನೀ ಬೋಧಿಸಲು
ಹೀನ ಮಾನವ ನಾನು ಪರಮಾತ್ಮನೆ
ಏನಾದರೂ ಪೇಳಿ ಮೋಸಮಾಳ್ಪನು ಎಂದು
ಸ್ವಾನುಭವ ಪಡೆಯದಲೆ ನಿನ್ನ ನಿಂದಿಸುವಾ ೧

ಕರ್ಮದಾ ಸಂಕಲೆಯ ಕಟ್ಟಿಕೊಂಡಿಹ ಜೀವ
ಕರ್ಮ ಕಳೆಯುವ ದಿವ್ಯ ಜ್ಞಾನವರಿಯುವನೇ
ದುರ್ಮತಿಯು ದ್ವೇಷಿಸುತ ಬೋಧದಲಿ ಮನವಿಡದೆ
ಧರ್ಮವಂತನು ಎಂಬ ಒಣ ಹೆಮ್ಮೆ ಪಡುತಿರುವ ೨

ಈ ನಿಂದೆ ಸ್ತೋತ್ರಗಳಿಗೊಳಗಾಗುವವನೆ ನೀ
ಸ್ವಾನುಭವಸಂವೇದ್ಯ ಕೇವಲಾನಂದಾ
ನೀನೆ ಸರ್ವವ್ಯಾಪಿ ನಿನ್ನ ನಿಂದಿಸಿದೊಡೆ
ತಾನು ತನ್ನನು ಬೈದು ದೂರಿಕೊಂಡಂತೆ ೩

ಜಗದ ಸುಖಕಾಗಿ ಬಲು ಕಾತರಿಪ ಮನುಜನಿವ
ಜಗದಾಚೆಗಿಹ ಪರಮಶಾಂತಿಯರಿಯುವನೇ
ಸೊಗಸಾಗಿ ತಿಳಿಯುವೊಡೆ ಜಿಜ್ಞಾಸುವಲ್ಲದೆ
ಅಘನಾಶಶಂಕರನೆ ಅನ್ಯರರಿಯುವರೇ ೪

## ೩೫೭

ಶ್ರೀ ಗುರುವೇ ಮಹಾಮಹಿಮಾ ಪೂರ್ಣಾತ್ಮಸುಖಧಾಮಾ
ಬಾಗಿ ನಮಿಪೆ ಪ್ರಶಾಂತಕಾಮಾ ಬೇಗ ನೀ ಬೋಧಿಸೈ

ಅನುಭಾವಪೂರ್ಣ ಜ್ಞಾನದಾ ದಾರಿಯಾ ತೋರು ನೀ
ದಯೆದೋರು ಜ್ಞಾನ ನಿಧಿಯೇ ವಂದಿಪೆ ಬೋಧಿಸೈ

ಸಂಸಾರ ಘೋರವಾರಿಧಿ ದಾಂಟಿಪಾ ಧೀರ ನೀ
ನಿಜರೂಪನಿಷ್ಠ ವಿಭುವೇ ವಂದಿಪೆ ಬೋಧಿಸೈ

ಗುರುಸಾರ್ವಭೌಮ ನಿನ್ನ ಈ ಪಾದವಾ ನಂಬಿದೆ
ಗುರು ಶಂಕರಾರ್ಯ ದೇವಾ ವಂದಿಪೆ ಬೋಧಿಸೈ

## ೩೫೩

ಶ್ರೀ ಪಾದವಲ್ಲಭಾ ದೇವಾ ಗುರುನಾಥಾ ದತ್ತರಾಜಾ
ವರಗಾಣ ಪುರಾಧೀಶಾ ಅವದೂತಾ ದತ್ತರಾಜಾ
ನರಸೋಬವಾಡಿವಾಸಾ ಶ್ರೀ ಗುರುನಾಥಾ ದತ್ತರಾಜಾ

ತ್ರಿಗುಣಾತ್ಮಕಾ ಘನಮಹಿಮಾ ತ್ರಿಗುಣಾತೀತ ಭೂಮಾ
ಅಘನಾಶ ಪೂರ್ಣಕಾಮಾ ಜಗದೀಶ ಸೌಖ್ಯಧಾಮಾ
ಬಗೆಹರಿಸೈ ಮೋಹಮಾಯಾ ಭಗವಂತ ನೀ ಗುರುರಾಯಾ

ವೈರಾಗ್ಯ ಶಾಂತಿ ಸುಖವಾ ಪರಮಾರ್ಥಜ್ಞಾನದರಿವಾ
ಗುರುಪಾದಸೇವೆ ಗೈವಾ ವರಭಾಗ್ಯ ನೀಡು ದೇವಾ
ಪರಿಹರಿಸೈ ವಿಷಯಚಿಂತಾ ಪರಮಾತ್ಮ ಸದ್ಗುರುನಾಥಾ

ಘನ ನಿರ್ವಿಕಲ್ಪರೂಪಾ ನೀನೆನ್ನ ಸ್ವಾತ್ಮರೂಪಾ
ಮನವಾಣಿ ಮೀರ್ದ ರೂಪಾ ಆನಂದ ಬ್ರಹ್ಮರೂಪಾ
ಕನಸ್ಸೈ ಈ ಜಗವು ನಿನ್ನೋಳ್ ಗುರುರಾಜ ಶಂಕರಾರೂಪಾ

೩೫೪

ವಂದಿಪೆ ಗುರುವೆ ನೀ ಕಲ್ಪತರುವೇ
ಬಂಧನ ಕಳೆಯುವ ಭೋಧಾತ್ಮ ಗುರುವೆ

ಅಗಣಿತ ಮಹಿಮಾ ಜಗದಾಧಾರ
ಬಗೆಗೆ ನಿಲುಕದಿಹ ಘನನಿರ್ವಿಕಲ್ಪ

ಜ್ಞಾನ ಬೋಧನೆಗಾಗಿ ಮಾನವ ರೂಪದಿ
ಸ್ವಾನುಭವವ ತೋರ್ದ ಮುಕುತಿದಾಯಕನೇ

ಪರಮಾತ್ಮ ನೀನೆಂದು ಪರಶೃತಿ ಪೇಳೆ
ಸರಿಯಾಗಿ ಬೋಧಿಸಿ ಕರುಣೆದೋರುವನೇ

ಜಗವೆಲ್ಲ ಪುಸಿಯೆಂದು ಜಗಕೆಲ್ಲ ಪೇಳುವ
ಭಗವಂತ ದಯದೋರಿ ಪೊರೆವುದು ದೇವಾ

ಚಿನುಮಯರೂಪನೆ ಸ್ವಾನಂದರೂಪಾ
ಮನವು ನಿನ್ನೊಳಗಿರಲಿ ಶಂಕರರೂಪಾ

೩೫೫

ವಂದೇ ವಂದೇ ವಂದೇ ನಾರಾಯಣ ಗುರುದೇವಾ
ವಂದೇ ವಂದೇ ವಂದೇ

ಪರಿಪೂರ್ಣ ಬ್ರಹ್ಮರೂಪ ಪರಮಾತ್ಮ ಜ್ಞಾನದೀಪ
ನೀಬೆಳಗಿ ಭವದ ತಾಪ ಪರಿಹರಿಪ ಜ್ಞಾನಿ ಭೂಪ

ಶಿರವಿಡುವೆ ಚರಣಯುಗದೀ ಗುರುದೇವ ಎನ್ನಮನದಿ
ಪರತತ್ವ ತಿಳಿವ ತೆರದಿ ಕರುಣಿಪುದು ನೀನೇ ಮುದದಿ

ಜಾಗರಣ ಕನಸು ನಿದ್ರಾ ಆಗುಗಳನರಿಯುತಿರ್ದಾ
ಈ ಗತಿಗಳೆಲ್ಲ ಮೀರ್ದಾ ಆ ಘನವೆ ನಿರ್ವಿಕಲ್ಪ
ಅದೇ ನೀನು ಎಂದು ಪೇಳ್ದೀ ಇದು ಎಲ್ಲ ಮಿಥ್ಯವೆಂದಿ
ಇದೊ ಮರಣಭಯವ ಕಳೆದಿ ನಿಜಬೋಧವಚನ ಬಲದಿ

ಮರೆದಿರ್ದ ತತ್ವವಿದನು ಪರತತ್ವ ಶೋಧಕರನು
ಬೊಧಿಸುತ ನೀ ನಿಜವನು ತೋರಿಸುತ ಕಾಯುವವನು
ವರಜ್ಞಾನ ಜಗದಲೆಲ್ಲಾ ಮರೆದಾಡಿ ತಮವನೆಲ್ಲಾ
ಪರಿಹರಿಸಲೆಂದು ನೀನೇ ಗುರುಶಂಕರನಿಗೆ ಪೇಳ್ದೀ

ವಂದೇ ಶಂಕರಾ ಗುರುದೇವಾ
ವಂದೇ ಶಂಕರ ಗುರುದೇವಾ

ಪಾವನಚರಣಾ ತೋರ್ಯೆ ಕರುಣಾ
ಜ್ಞಾನಾಂಬುಧಿ ಪೂರ್ಣಾ ವಂದೇ

## ೨೫೬

ವಂದೇ ಶಂಕರ ಗುರುದೇವಾ
ವಂದೇ ಶಂಕರ ಗುರುದೇವಾ
ಪಾವನ ಚರಣಾ ತೋರ್ಯೆ ಕರುಣಾ
ಜ್ಞಾನಾಂಬುಧಿ ಪೂರ್ಣಾ ವಂದೇ

ನಿತ್ಯ ನಿರಂಜನ ಸತ್ಯ ಸ್ವರೂಪಾ
ಪ್ರತ್ಯಗಾತ್ಮನೇ ಆನಂದರೂಪಾ
ನೀಡ್ಯೆ ಘನಜ್ಞಾನಾ ಬೋಧಾ
ಬೇಡುವೆ ನಿನ್ನೊಳ್ ಗುರುವೇ ವಂದೇ

ಆತ್ಮಸ್ವರೂಪವ ಬೋಧಿಸಿ ಎನ್ನ
ಮುಕ್ತ ಮಾಡುನೀ ಶ್ರೀ ಗುರುದೇವಾ
ನಾರಾಯಣಪದದಾ ಜ್ಞಾನಾ
ಸಾರಿದ ಶಂಕರ ಗುರುವೇ ವಂದೇ

## ೩೫೭

ಹಾಸ್ಯದ ಮಾತಿದು ಮಾನವಗೆ
ವಿಷಯೇಚ್ಛೆಯ ಜೀವನವೆಂಬುದು
ಶಾಶ್ವತ ಶಾಂತಿಯ ನೀಡುವ ನಿನ್ನಯ
ಪದವನೆ ಮರೆತಿಹದು

ಗುರುವೇ ಈಶ್ವರನೀತನೆಂದು
ಸಾರಿತು ಶ್ರುತಿ ಇದ ಕೇಳುತ ನಾ
ಕರುಣಾ ನಿಧಿಯೇ ನಿನ್ನ ಹೊರತಿ
ನ್ನನ್ಯರು ಗತಿಯಿಲ್ಲೆನ್ನುತ ನಾ

ಚರಣಕಮಲಕೆ ಮೊರೆಹೊಕ್ಕೆ
ಪರಮಾನಂದಾತ್ಮ ಸ್ವರೂಪದಾ
ಅರಿವನು ನೀಡಿ ಪೊರೆವುದು ಎನ್ನ
ಶಂಕರ ಗುರುದೇವಾ

## ತಾತ್ವಿಕ ವಿಚಾರದ ಹಾಡುಗಳು

## ೩೫೮

ಅಜ್ಞಾನಹೋಮದಾ ಅಗ್ನಿ ಹೋತ್ರಿಯು ತಾನು
ಸುಜ್ಞಾನಸ್ವರ್ಗವನು ಸೇರಿ ಸುಖಿಸಿಹನು ಪ

ತನುವು ಯಜ್ಞದ ಶಾಲೆ ಮನವು ಬ್ರಹ್ಮನು ಅಲ್ಲಿ
ಅನಿಸಿಕೆಗಳುದ್ಗಾತೃಋತ್ವಿಜರು

ಘನತರದ ಶ್ರದ್ಧೆಯಂಬಿನಿಯಳೊಡಗೂಡಿದಾ
ಚಿನುಮಯಾತ್ಮಾರಾಮ ದೀಕ್ಷಿತನು ಮರೆವ ೧

ಎದೆಯೆ ಯಜ್ಞದ ಕುಂಡ ಅದರಲ್ಲಿ ಜ್ಞಾನಾಗ್ನಿ
ಮುದದಿಂದ ಹೊತ್ತಿಸುತ ಕರ್ಮಕಾಷ್ಠಗಳಾ
ಒದಗಿಸಿ ಶಮಾದಿಗಳೆ ಸಾಮಗ್ರಿಯಾಗಿರಲು
ಸದಸದ್ವಿವೇಕಸಾಮವನು ಘೋಷಿಸುವಾ ೨

ಅನಿಸಿಕೆಯು ಸತ್ಯವೆನ್ನುವ ಹವಿಯ ಹಾಕುತಲಿ
ಕನಸಿದೆಲ್ಲವು ಎಂಬ ಸ್ಮೃತಿರೂಪ ಶಿಖಿಯ
ಘನವಾಗಿ ಹೊತ್ತಿಸುತ ದೇಹಬುದ್ಧಿಯ ದಹಿಸಿ
ಜನನಮರಣದ ಭಸ್ಮಮಾಡಿ ಪೂಸುವನು ೩

ವಾಸನಾಪಾಶವೆನ್ನುವ ಪಶುವ ವಧಿಸುತಲಿ
ಮೀಸಲಾಗಿಹ ಜ್ಞಾನಸೋಮವನು ಕುಡಿದು
ಆ ಸಕಲಯಾಗಗಳ ಭೋಕ್ತೃ ತಾನಾಗುತಲಿ
ನಾಶವಿಲ್ಲದ ಸ್ಥಿತಿಯನಾಕ್ಷಣದಿ ಪಡೆವ ೪

ಚಿನುಮಯನೆ ತಾನೆಂಬ ಜ್ಞಾನಗಂಗಾಜಲದಿ
ಅನುಭವದ ಅವಭೃತಸ್ನಾನವನು ಮಾಡಿ
ತನುವಿದಿರುವಾಗಲೇ ಆನಂದಧಾಮದಲಿ
ಅನವರತ ನೆಲೆಸಿರುವ ಶಂಕರಾನಂದಾ ೫

## ೩೫೯

ಅಜ್ಞಾನಿ ಜೀವನಿಗೆ ಅಭಿಮಾನ ಬಹಳ
ಸುಜ್ಞಾನಿಯಾ ನುಡಿಯ ಲಕ್ಷಿಸನು ಕೇಳಾ ಪ

ಬುದ್ಧಿ ಮನದೇಹಗಳು ತಾನೆಂದು ತಿಳಿಯುತಲಿ
ಇದ್ದುದನು ಮರೆತು ತಾ ಜಾಣನೆನಿಸುವನು

ಒದ್ದಾಡುತಿದ್ದರೂ ಅಭಿಮಾನವನೆ ಹೊತ್ತು
ಗುದ್ದಾಡುತಲಿ ತಾನು ಸುಖವ ಹುಡುಕುವನು ೧

ಸಟೆಯಾದ ಸಂಸಾರ ದಿಟವೆಂದು ನಂಬುತಲಿ
ಸೆಟೆದಾಡುತಿರುವೆಯೋ ತಿಳಿದು ನೋಡಾ
ಹಟವ ಹಿಡಿಯಲು ಬೇಡ ತೋರ್ಪುದೇ ದಿಟವೆಂದು
ನಟನೆಯಾ ಮಾತಲ್ಲವೆನೆ ಕೇಳನವನು ೨

ಬರಿಯ ಜಂಭವು ಬೇಡ ಅರಿ ನೀನು ನಿನ್ನ
ಅರಿವಿನಾ ಹೊರತು ನೀ ಸುಖ ಪೊಂದಲಾರೆ
ಆರು ಸುಖಪಡೆದಿಲ್ಲ ಅಜ್ಞಾನದಿಂದೆನಲು
ಇರಲಿ ಹೋಗೆಂದೆನುತ ಮೋರೆ ಹೊರಳಿಸುವಾ ೩

ಬಾಳುವೆಯು ನಿಜವೆಂದು ನಂಬಲಿವನಾ ಗೋಳು
ಗಾಳಿಯನೆ ಗುದ್ದಿ ಮೈ ನೊಯ್ಸಿಕೊಂಡಂತೆ
ಕೇಳು ಚಿತ್ರದೊಳಿರುವ ಬೆಂಕಿ ತಾ ದಿಟವೆಂದು
ಮೇಲೆ ನೀರೆರೆದಂತೆ ಎನೆ ಕೇಳನವನು ೪

ಗೊಡ್ಡು ಮಾತೆಂದು ತಾ ಜ್ಞಾನಕೆರವಾಗುತಲಿ
ದಡ್ಡತನವನೆ ತೋರಿ ದುಃಖಿಯಾಗುವನು
ಶುದ್ಧಜ್ಞಾನವನಂಬಿ ತನ್ನ ತಾ ತಿಳಿಯದಲೆ
ಬುದ್ಧ ಶಂಕರನುಕ್ತಿಗೆರವಾಗುತಿಹನು ೫

## ೩೬೦

ಅರಿ ನಿನ್ನಯ ನಿಜವನು ಜೀವಾ
ಅರಿವಿಂದೆ ನೀನೆ ಆ ದೇವಾ ಪ

ಸಾರಿ ಪೇಳಿತು ಈ ನುಡಿ ಶಾಸ್ತ್ರ
ಅರಿತು ನೋಡಲು ನೀನೆ ಕೃತಾರ್ಥ

ದೇಹಮನಗಳ ತ್ಯಾಗದಿಂದೆ
ಉಳಿವುದಾ ನಿಜವೊಂದೇ ೧

ಈ ಬೋಧಾದಾ ಅನುಭವ ಪಡೆಯೈ
ನಾಶಮಾಡು ಈ ಮನವಾ
ಈಶಜೀವರಾ ಐಕ್ಯದ ನಿಜವಾ
ಪೇಳ್ದ ಶಂಕರದೇವಾ ೨

## ೩೬೧

ಅರಿವಿನ ಅರಿವಾ ತಿಳಿ ಜೀವಾ ಆನಂದರೂಪದ ಸಿರಿಯಾ
ಅದೇ ನೀನು ಜೀವಾ ಜೀವಾ ಅದೇ ನೀನು ಜೀವಾ ಪ

ಅನಿಸಿಕೆಯಡಗಲು ಉಳಿಯುವ ಸತ್ಯವೆ ನೀನಿಹೆ ನೀನಿಹೆ
ಮನಸಿನ ತೋರಿಕೆಅಡಗುವಿಕೆಗಳಿಂ ಬೇರಿಹೆ ಬೇರಿಹೆ
ಈ ನಾನೆಂಬುದು ಮನಸಿನದು
ಆನಾನೆ ನೀನಾಗಿರುವಿ ಅದೇ ನಿಜವು ಜೀವಾ ೧

ಕನಸಿನ ಪರಿ ಈ ತೋರುವ ಜಗವೈ
ನೋಡು ನೀ ನೋಡು ನೀ
ನಾನಾವಿಧಗಳು ಪುಸಿಯಾಗಿಹವೈ ದೂಡು ನೀ ದೂಡು ನೀ
ಆನಂದಾತ್ಮನೆ ನೀನಿರುವೀ ಆನಂದದಿಂದಲಿ ತಿಳಿಯೈ
ಶಂಕರಾನಂದಬೋಧಾ ತಿಳೀನೀನೆ ನಿನ್ನೊಳ್ ೨

## ೩೬೨

ಅರಿ ನಿನ್ನ ನಿಜವಾ ಆನಂದಘನವಾ
ಚೈತನ್ಯದಿರವಾ ಮರಣರಹಿತವಾ ಆತ್ಮಾನುಭವ ಪ

ಮನವಾಣಿ ಮೀರಿ ತನು ಮೂರ ಮೀರಿ
ಕಲ್ಪನ ತೀರೀ ತಾ ನಿರ್ವಿಕಾರಿ
ಅದೇ ನೀನು ತಿಳಿಯೈ ಇದು ನೀನಲ್ಲ ೧

ಜಗವಿದು ಕನಸೋ ಪುಸಿಯೆಂದೆಣಿಸೋ
ಮನದಿ ವಿವೇಕವ ಮಾಡಿ ನಿಶ್ಚಯಿಸೋ
ಶಂಕರಬೋಧಾ ಇದುವೇ ಮೋದಾ ೨

## ೩೬೩

ಅರಿ ಬೇಗನೇ ಪರಮಾತ್ಮ ನೀನ್ನೈ
ಪರತತ್ವನಾ ತ್ವರಿತದಲಿ ತಿಳಿಯೊ ಪ

ಮೂರು ತಾಣಗಳ ಮೀರಿ ಗೋಚರಿಪ
ತೋರುತಿಹ ಈ ದೇಹಾದಿಗಳಿಗೆ
ಬೇರೆಯಾಗಿಪುದೆ ಪರಮಪದವು
ಧೀರ ನೀನರಿಯೊ ಅದೆ ನಾನು ಎಂದು ೧

ಕೋಶಪಂಚಕವ ಲೇಸಾಗಿ ಕಳೆದು
ವಾಸನೆಯ ಪಾಶವನೆ ಹರಿದೊಗೆದು
ಕ್ಲೇಶ ಪಡುವದನು ತ್ಯಜಿಸಿ ಮುದದಿ
ನಾಶರಹಿತಾದ ಪದವು ತಾನೆಂದು ೨

ಜನನಮರಣಗಳಿಗಾಚೆಗಿರುವಂಥ
ಮನವಾಣಿಗಳಿಗೆ ನಿಲುಕದಿರುವಂಥ
ಘನಪದವು ಇದುವೆ ಪರಮಾತ್ಮನ್ನೈ
ಅನುನಯದಿ ಪೇಳ್ವ ಗುರುಶಂಕರಾರ್ಯ ೩

## ೩೬೪

ಆನಂದವಾ ನೋಡು ನೀ ವಿಚಾರಿಸಿ
ಏನೊಂದುಮಿಲ್ಲಾಗಿ ತಾನೆ ತಾನಾಗಿಹ ಪ

ಅನಿಸಿಕೆ ತೋರಿಕೆ ಅಡಗುತಲಿರುತಿರೆ
ತನಿನಿದ್ರೆಯೆನಿಸದ ಘನಪದವಾಗಿಹ
ಮನಸಿನಿಂದಾಚೆಗೆ ನಿಜವಾಗಿ ನೆಲಗೊಂಡ ೧

ಇದೇ ಬ್ರಹ್ಮಾನಂದವು ನೋಡೈ ಸದಾ
ನಿರ್ವಿಕಲ್ಪವಾಗಿರುವಾ ಆ ಸ್ಥಿತಿಯನೆ ಗುರುತಿಸಿ
ಅನುಭವಿಸುತದನಾ
ಮರಳಿ ಜಾಗರದಲಿ ನೆನೆಸಿ ಆ ಸ್ಥಿತಿಯನು
ಮರಣರಹಿತವದು ಅದೇ ಪರಮಾತ್ಮನು
ಗುರುಶಂಕರನು ಪೇಳ್ದ ಅದೇ ತಾನು ಎನ್ನುತ ೨

## ೩೬೫

ಆಲಿಸು ಮನುಜಾ ಮಾಯಾಕಾರ್ಯಕೆ
ಮೋಸಹೋಗಲು ಬೇಡಾ ವಿಚಾರಿಸು
ತೋರಿಕೆಯು ಪುಸಿಯಹುದು ಈ ಪ

ಜಗದೊಳು ತೋರುವ ಅಘಟಿತಘಟನೆ
ಮಿಗಿಲೆನಿಸುತಲಿಹುದೋ ಗಡಾ
ಅಘಟಿತಘಟನೆಯೆ ಜ್ಞಾನವದೆಂದು
ಬಗೆಯುತ ನೀ ಕೆಡಬೇಡ ೧

ಸಿದ್ಧಿಯ ಫಲವದು ಅಘಟಿತಘಟನೆ
ಬುದ್ಧಿವಂತನೆ ತಿಳಿ ನೀ

ಶುದ್ಧ ಚೈತನ್ಯದಿ ಮಾಯೆಯದಿಲ್ಲೈ
ಸಿದ್ಧಿ ಮಾಯೆಯ ಮಗಳು ೨

ಜ್ಞಾನಸಿದ್ಧಿಗಳ ಭೇದವನರಿಯುತ
ಜ್ಞಾನಿಯಾಗೆಲೊ ಮನುಜಾ
ನಾನಾಪರಿಯಿಂ ಪೇಳಿದನಿದನಾ
ಜ್ಞಾನಿ ಶಂಕರಗುರುರಾಯಾ ೩

## ೩೬೬

ಅಳಿವ ಬಾಳ ನಂಬುತಲೀಗ ತಿಳಿ ತಿಳಿಯೊ ಧೀರನಾಗಿ
ಪರಾಶಾಂತಿಯ ಬೇಗ ಪರಾಶಾಂತಿಯಬೇಗ ಪ

ದೊರಕುವದೆ ಶಾಂತಿ ಜೀವನೆ ಹೊರಹೊರಗೆ ನೋಡಲು
ಅರಿ ನಿನ್ನ ಹೃದಯದೋಳ್ ಸಲೆನಾಸಿಪುದು ತಿಳಿಯಲು
ಸಲೆ ಮರೆತಿರುವಿ ನೆನೆಸಿ ನೋಡು ನಿನ್ನ
ಮೂಲಸ್ವರೂಪ ನಿನ್ನ ೧

ಈ ದೇಹ ನಾನು ಎಂಬ ಭ್ರಾಂತಿ ಬೇಗ ತ್ಯಜಿಸುತ
ಬಾಧಿಸುತ ಬುದ್ಧಿಯನ್ನು ಬೇರೆಯಾಗಿ ತಿಳಿಯುತ
ಬಾಧಾರಹಿತ ನಾ ವಾದ ಪದವೆ ನಾನಿಹೆನೆನುತ ೨

ಈ ನಿರ್ವಿಕಲ್ಪವಾದ ಸ್ಥಿತಿಯೇ ತಾನಿಹೆನೆಂದು
ಅನುಭವದಿ ತಿಳಿದುಕೊಳ್ಳು ಪರಾಶಾಂತಿಯದೆಂದು
ನೀನೇ ಪ್ರಶಾಂತರೂಪನಿರಲು ಶೋಕಿಸಬೇಡ ೩

## ೩೬೭

ಇದೇ ಕೇಳು ಜ್ಞಾನ ಇದೇ ಸ್ವಾತ್ಮಭಾವ
ಇದೇ ಸೌಖ್ಯ ತಾಣ ತಿಳೀ ನೀನೆ ಜಾಣಾ ಪ

ಶರೀರಾದಿ ಸಂಘಾತವೆಲ್ಲ ವಿಕಾರಿ
ಬರೀ ತೋರಿಕೆ ಸ್ವಪ್ನವೇ ಕೇಳ್ ವಿಚಾರಿ
ಅರೀ ನೀ ಸ್ವರೂಪಾ ಶರೀರಾದಿ ಭಿನ್ನ ೧

ಸದಾ ನಿರ್ವಿಕಾರ ಪರಾನಂದಸಾರ
ಈ ಜಾಗರ ಸ್ವಪ್ನ ನಿದ್ರಾದಿ ದೂರ
ಅದೇ ನೀ ಇದೇ ಕೇಳ್ ಸ್ವರೂಪಾತ್ಮಜ್ಞಾನ ೨

ತಿಳೀ ನಿನ್ನ ನೀ ಈ ವಿಚಾರಾಕ್ಷಿಯಿಂದೆ
ಇದೇ ಮೋಕ್ಷವೆಂದ ಸ್ವರೂಪಾನಂದ
ಇದೇ ಶಂಕರಾರ್ಯಾ ನಿಜಾನಂದವೆಂದ ೩

## ೩೬೮

ಇದೇ ಕೇಳ್ ಭಾಗವತಧರ್ಮ ಸ್ವರೂಪಾನಂದದಾಮರ್ಮ
ತಿಳಿಯದಾಮೂಢಮನುಜರಿಗೂ ತಿಳಿಸುವಾ ಸುಲಭದಾಧರ್ಮ

ಸದಾ ತನ್ನಂತರಂಗದಲಿ ಮನನವಾಮಾಡಿ ಬೋಧೆಯನು
ಸದಮಲಾತ್ಮಾನುಭವವ ಪಡೆವುದಿದುವೇ
ಭಾಗವತಧರ್ಮ ಸ್ವರೂಪಾನಂದದಾ ಮರ್ಮ

ಅಳೀ ನೀ ಭೇದಭಾವನೆಯಾನಿಕಾಯಾ ಅಳೀ ನೀ ತಿಳೀ ನೀ
ನಿರ್ವಿಕಲ್ಪಾನಂದವಿಭುವೆ ನಾನೆ ಇದೆನೆಂದು ಸ್ವರೂಪಾ

ಇದೋ ಮಿಥ್ಯಾ ಜಗವಿದೆಲ್ಲ ತಿಳೀ ನೀನೆ ಕನಸಿನಂತೆ
ಅದೊಂದೇ ಬ್ರಹ್ಮಸತ್ಯ ಇದುವೆ ಶ್ರೀಗುರು ಶಂಕರನ
ಬೋಧಾ ಸ್ವರೂಪಾ

## ೩೬೯

ಇದೇ ಸೀತಾ ಮಹಾಮಂತ್ರ ಭವಾಬ್ಧಿ ದಾಂಟುವಾ ಮಂತ್ರಾ
ಮನುಜ ತಾ ನಿತ್ಯ ಈ ಗೀತಾ
ಅನುದಿನಾ ಪಠಿಸುತಿರುವಾತಾ
ಮುಕುತಿಪಂಥ ಪಡೆವ ನಿರುತಾ
ಇದೇ ದೇಹದಲಿ ತಾನಿರುತಾ ೧

ವಿರಾಗಿಯಾಗಿ ಮನದಲ್ಲಿ
ಪರಾನಂದಾತ್ಮರೂಪವನು
ತಿಳಿಯುವಾ ಚೈತನ್ಯರೂಪವನು
ಇದೇ ಗೀತಾಪಠಣಫಲ ತಾ
ಪ್ರಶಾಂತಾಕಾಮನಾಗಿರುತಾ ೨

ನಿಧಾನಾ ನೊಂದಮನನಿಗಿದೆ
ಪ್ರಧಾನಾ ಶಾಸ್ತ್ರ ಸಂಚಯ ದೇ
ಪ್ರಧಾನಾ ಷಟ್‌ಶಾಸ್ತ್ರ ಸಂಚಯದೇ
ಸದಾ ಧ್ಯಾನಾ ಇದೇ ಮನನಾ
ಮನುಜನೇ ಇದುವೆ ಸುಖತಾಣಾ ೩

ತಿಳಿ ನೀ ಗೀತೆಯಾ ಬೋಧಾ
ಅಳಿ ನೀ ಜೀವಪರ ಬೇಧಾ
ತಿಳಿ ನೀ ಪರಮಾತ್ಮಪದ ಬೋಧಾ
ಪಡೆವ ಮೋದಾ ಶ್ರವಣದಿಂದಾ
ಇದೇ ಶ್ರೀ ಶಂಕರನ ಬೋಧಾ ೪

## ೩೭೦

ಇದೇ ನೋಡು ನಿನ್ನ ನಿಜವಾದ ಸ್ವರೂಪ ಜೀವ
ಇದೇ ಸಕಲ ಜಗದ ಕಾರಣಾ ಬ್ರಹ್ಮ ಪೂರಣ ಪ

ಅನಿಸುವಿಕೆಯು ಇಲ್ಲದಿರುವಾ ತೋರಿಕಿಲ್ಲದಾ ಬರಿ ಇರವಿದೇ
ಮನಸಿಲ್ಲದೆ ಬೆಳಗುತಿರುವ ನಿದ್ರೆಹೊದ್ದದಾ ಬರಿ ಅರಿವಿದೆ
ಅನುಭವದ ರೂಪನಾಗಿ ಉಳಿಯುವಾ ಎರಡನೆಯದಿಲ್ಲದ
ಘನ ನಿರಾಕಾರವೇ ೧

ವಿಷಯಜನಿತ ದುಃಖಸುಖದ ಸುಳಿವು ತೋರದ
ಘನಾನಂದವೇ ಶೇಷ ಮಾತ್ರನಾಗಿ ಸದಾ ಶಾಂತಿರೂಪದ
ನಿರ್ವಿಕಾರ ನೀ ಹಸನಾಗಿ ತಿಳಿದುಕೊಳ್ಳು ಬೋಧವಾ
ನೀನದೆ ಎಂಬುದ ಈ ಸತ್ಯಸ್ವರೂಪವೇ ೨

ಸ್ವರೂಪಾತ್ಮ ಮಾತ್ರ ಪರಮಸತ್ಯನಾಗಿಹ ನಿತ್ಯನಾಗಿಹ
ಬರೀ ತೋರಿ ಅಡಗುತಿರುವ ಜಗವು ಭ್ರಾಮಕಾ
ಮಿಥ್ಯಾಭಾಸಕ ಗುರುವರ್ಯ ಶಂಕರಾತ್ಮಬೋಧನಾ
ವೇದಾಂತಸಾರವಾ ಪರಮಾತ್ಮ ಜ್ಞಾನವಾ ೩

## ೩೭೧

ಇದೇ ಪರಮಾರ್ಥ ಪ್ರಾಪ್ತಿಗೆ ಸೋಪಾನ
ತಿಳಿ ಇದರಲ್ಲಿ ಬೇಡಿನ್ನು ಅನುಮಾನ
ಇದೇ ಬಕುತಿಮಾರ್ಗವೇ ಸುಲಭ ಸೋಪಾನ
ತಿಳಿ ವೈರಾಗ್ಯಜ್ಞಾನಾದಿಗಳ ತಾಣಾ ಪ

ಸಂಸಾರದೊಳಗಿರ್ದ ಜೀವಂಗೆ
ಸುಖದುಃಖದಿ ಬಳಲುವ ಮನುಜಂಗೆ

ಕಂಸಾರಿ ಶ್ರೀ ಕೃಷ್ಣನಾಮವೊಂದೇ
ಪಾಪ ಸಂಹಾರಿ ಪರಶಿವನಾಮವೊಂದೇ
ಈ ಸಂಸಾರ ದಾಂಟುವಾ ನಿಜತಾಣಾ ೧

ನಿಷ್ಕಾಮ ಮನದಿಂದ ಭಜಿಸಲ್ಕೆ
ಬಹು ದುಷ್ಕರ್ಮ ಫಲವೆಲ್ಲ ತೊಲಗಲ್ಕೆ
ಶ್ರೇಷ್ಠ ವೈರಾಗ್ಯವು ನೆಲೆಸಲ್ಕೆ
ಬಲು ಜಿಜ್ಞಾಸೆ ಮನದಲ್ಲಿ ಜನಿಸಲ್ಕೆ
ಈ ಪರಮಾತ್ಮಧ್ಯಾನ ಮಹಾಸಾಧನಾ ೨

ಆತ್ಮಜ್ಞಾನದ ಬೋಧನೆಗೊಂಡು
ಪರಮಾತ್ಮನ ರೂಪವೆ ತಾನೆಂದೂ
ಬರಿ ತೋರ್ಕೆ ಜಗವೆಲ್ಲ ಪುಸಿ ಎಂದೂ
ಪರಮಾತ್ಮನೆ ನಿತ್ಯನು ನಿಜವೆಂದೂ
ಪರಜ್ಞಾನವ ನೀಡಲ್ಕೆ ಈ ಸಾಧನ ೩

ಪರಮಾರ್ಥನುಭವಿಗಳ ಸಂಗ
ನೆರೆದೊರಕುತಲಿರುತಿರೆ ಭವಭಂಗ
ವರ ಭಕ್ತಿ ಮಾರ್ಗದಿ ದೊರಕುವದೆಂದ
ಇದೆ ಪರಮಾರ್ಥ ಪ್ರಾಪ್ತಿಗೆ ಮೂಲವೆಂದ
ಇದೆ ಗುರುಶಂಕರಾನಂದಕೃಪೆಯಿಂದ ೪

## ೩೭೨

ಇದೇ ಪುರುಷಾರ್ಥ ಮನಜ ಪರಮಾತ್ಮ
ಪಡೆವುದಿದು ವೇದಾರ್ಥ
ಇದನ್ನು ಬಿಸುಟಿನ್ನು ಬಾಳುವೆ ಬದುಕನ್ನು
ಮಾಡುವುದಿದುದೇ ವ್ಯರ್ಥ

ದೇಹವಿರುವಾಗಲೇ ಪೂರ್ಣಪದನಾ ದೊರಕಿಪನೆ ಜಾಣ
ಮೋಹಮಾಯಾವಿಕಾರವ ದಾಂಟಿ ಪೋಗುವನೆ ಜಾಣ
ಸಾಹಸದಿ ಈ ಸಾವನು ನೀಗೀ ಮೋದಿಸುವ ಜಾಣ
ಉಳಿದ ನರ ಕೋಣ ಅವನಿಯುಳು ಪ್ರಾಣ
ತಳೆದಿರುವುದೇ ವ್ಯರ್ಥ

ತನ್ನ ಒಳಗಿರ್ವ ಸಂಪೂರ್ಣ ಸುಖತಾ ಅರಿಯುವನೆ ಜಾಣ
ಭಿನ್ನವಾಗಿರ್ಧ ತೋರಿಕೆ ಇದನಾ ಭಾದಿಸುವ ಜಾಣ
ಮುನ್ನ ಸುಖದುಃಖಗಳನ್ನು ನೀಗಿ ನಿಲ್ಲುವನೆ ಜಾಣ
ಇವನೇ ಗುರುನಾಥಾ ಶಂಕರ ಭಗವಂತಾ
ಪೇಳಿದ ನುಡಿ ವೇಧಾರ್ಥ

## ೩೭೩

ಇದೇ ಪೂರ್ಣಪದಾ ತಿಳಿ ಜೀವಾ
ಆತ್ಮಸ್ವರೂಪಾ ನೋಡು ನೀ
ಈ ಜಗಕೆಲ್ಲ ಆಧಾರಾ ಪರಮಪದವದೇ ನೊಡು ನೀ ಪ

ತೋರುವೀ ಜೀವರಾಧಾರ
ತೋರದಾ ಪೂರ್ಣಾಜ್ಞಾನರೂಪ
ಅದೇ ಕಲ್ಪನೆರಹಿತ ಅದ್ವೈತ
ಪರಮಪದವದೇ ನೋಡು ನೀ ೧

ಮನವಾಣಿಗೆ ಸಿಗದ ಆ ಸ್ಥಿತಿ ಪೂರ್ಣಾ ಪರಮಾತ್ಮನೈ
ಅದೇ ನೀನಿಹೆ ಜೀವಾ ತಿಳಿಯಿದನಾ
ಗುರು ಶಂಕರನಾ ಬೋಧನಾ ೨

## ೩೭೪

ಇದೇ ಭಕ್ತವರ್ಯನ ಲಕ್ಷಣ ಪಾವನವಿದು ಕಾಣಾ
ಕಾಣುವನಿವ ಪರಮಾತ್ಮ ಸರ್ವಾತ್ಮಾ ಕಾಣುವನಿವ
ಪರಮಾತ್ಮನ ರೂಪ ಚರಾಚರದ ಜಗದಲ್ಲಿ ೧

ಇದೇ ಪರಿಯಲಿ ಸ್ವರೂಪದಲ್ಲಿ ಜಗವೆಲ್ಲಾ ಕಾಂಬಾ
ಆತ್ಮರೂಪ ಭಗವಂತನೆ ಸತ್ಯ ಮಿಕ್ಕವೆಲ್ಲಾ ಮಿಥ್ಯ
ಲಕ್ಷ್ಯವೆಲ್ಲಾ ತನ್ನೊಳ ತಿರುಗಿಸಿ ಆನಂದವ ಪಡೆವ
ಕಾಣುವನಿವ ಪರಮಾತ್ಮ ಸರ್ವಾತ್ಮ ೨

ಸಂಸಾರದಲಿ ವಿಷಯದ ಭೋಗ ಪ್ರಾರಬುಧದಲಿಪಡೆ
ಮಾಯೆಮಾತ್ರವಿದು ಎನ್ನುತ ತಿಳಿವಾ ೩

ನಿಜಾಸಕ್ತಿ ಪಡೆಯದಲೇ ನಿರುತ ತನ್ನಯ ಹೃದಯಾಂತ
ಪರಮಾತ್ಮನ ನೆನೆವ ದೇಹಾದಿಗಳ ಈ ಪರಿಣಾಮಗಳಿಗೇ
ಮೋಹಗೊಳಲಾರ ಕಾಮನೆಯಾ ಬೀಜಾಂಕುರವೆಂದೂ
ನಾಟದು ಇವನಲ್ಲೀ ಕಾಣುವನಿವ ಪರಮಾತ್ಮ ಸರ್ವಾತ್ಮ
ಕಾಣುವನಿವ ಪರಮಾತ್ಮನ ರೂಪಾ
ಪ್ರಭೂಶಂಕರನ ರೂಪಾ ೪

## ೩೭೫

ಈ ದೇಹಾಭಿಮಾನವೇ ಸಂಸಾರಮೂಲ
ಈ ದೇಹಾಭಿಮಾನವೇ
ಸಂಸಾರಮೂಲವಯ್ಯ ಕೇಳೀಗಲೇ ಜ್ಞಾನದಿಂದಾ
ಈ ಜ್ಞಾನದಿಂದ ಈ ದೇಹಭಿಮಾನ ದೂಡ
ನೀ ದೂಡನಿನ್ನಭಿಮಾನ

ವಿಷಯಾಭಿಲಾಷಾ ಮನದಲ್ಲಿ ಮೂಡಿ
ಜೀವಂಗೆ ಗುಣದಲ್ಲಿ ಅನುರಾಗ ಕೂಡಿ
ಇದೇ ಭೋಗನೇ ಮುಂದೆ ಸುಖದುಃಖವಾಗಿ
ಜನುಮಕ್ಕೆ ಮೂಲಾದಿದೇ ವಾಸನಾಳಿ ಇದೇ ವಾಸನಾಳಿ
ಇದೇ ಬಾಳುವೆ ಇದೇ ಬಾಳುನೆ
ಇದೇ ಬಾಳು ದೇಹಾಭಿಮಾನಾಸ್ಪದಾ
ಮೂಲ ಕೇಳಿಗಲೇ ಜ್ಞಾನದಿಂದ ೧

ಮನದೇಹಗಳು ನಿನ್ನ ನಿಜರೂಪವಲ್ಲ
ಇವುತೋರಿ ಬಯಲಾಗುತಿಹವಾಗಿವೆಲ್ಲ ನಿಜರೂಪವಲ್ಲ
ಇದರಾಚೆಗಿಹ ಶುದ್ಧ ಚೈತನ್ಯ ನಾನೇ
ಮನಬುಧ್ಧಿಗಾಧಾರ ಚಿನ್ಮಾತ್ರನಾನೇ ಸತ್ಯಾತ್ಮನಾನೇ
ಅದೇನಾನಿಹೆ ಅದೇ ನಾನಿಹೆ ಅದೇ ಸತ್ಯನೆಂದಾಗ
ಹರಿವುದು ದೇಹಾಭಿಮಾನ ನೋಡುನೀ ಜ್ಞಾನದಿಂದ ೨

ಈ ರೀತಿ ಸುವಿಚಾರವನು ಮಾಡಿಕೊಂಡು ನಿಜನನ್ನು ಕಂಡು
ಸ್ವರೂಪಾತ್ಮನೋಳು ನಾನು ನೆಲೆ ನಿಂತು ಕೊಂಡು
ಇದೆಲ್ಲ ಈ ಸಂಸಾರ ಕನಸೆಂದು ಕಂಡು
ಪರಮಾತ್ಮನನೆ ವೃತ್ತಿಯೊಳು ತುಂಬಿಕೊಡು
ಆನಂದ ಉಂಡು ಬಿಡೋ ಚಿಂತೆಯ ಬಿಡೋ ಚಿಂತೆಯಾ
ಬಿಡೋ ಬಾಳ ಚಿಂತೆಯಾ ಶ್ರೀ ಶಂಕರಾಚಾರ್ಯರಿ
ಬೋಧದ ಜ್ಞಾನದಿಂದ ೩

## ೩೭೬

ಈ ವಿಬುಧರ ಸಂಗವೆ ಮಹಾಪ್ರಮೋದ
ದುರ್ಲಭ ಜ್ಞಾನಿಯ ನಿಜಾತ್ಮಬೋಧ
ಭಾಗ್ಯವಿದೇ ಬಹುಜನ್ಮದ ಪುಣ್ಯ
ಯೋಗ್ಯರಬೋಧಾ ದೊರಕುವುದಣ್ಣ

ಬೋಗ್ಯದಿ ಲಂಪಟನಾದವಗಿನ
ಅಗ್ಗದಿ ಸಿಗುವದೆ ಸಜ್ಜನರನ್ನಾ
ಸ್ವರ್ಗದಿ ಸಿಗದಿಹ ಸಂತರ ಬೋಧ
ದುರ್ಲಭ ಜ್ಞಾನಿಯ ನಿಜಾತ್ಮಬೋಧ ೧

ಉಪದೇಶದಿ ಈ ಭವವನು ಕಡಿವಾ
ಬಾಧೆಯ ಸುಡುವಾ ಮುಕುತಿಯ ಕೊಡುವಾ
ಹೃದಯದೊಳಿರುವಾ ಆತ್ಮಸ್ವರೂಪ
ಜ್ಞಾನದಿ ತಿಳುಹಿನಿ ಮೋದವ ಕೊಡುವಾ
ಸ್ವಾನು ಭವಾನಂದಾನ್ವಿತರೂಪ
ಸನ್ನುತ ಶಂಕರಗುರುಸ್ವರೂಪ ೨

## ೩೭೭

ಈ ಸಾಧನೆಯ ಈ ಧರ್ಮಗಳ ಗುರಿಯೊಂದೆ ಕೇಳಿರಿ ಇಂದೇ
ಪರಮಾತ್ಮಪ್ರಾಪ್ತಿ ಇದರಿಂದೇ ಪ

ನಿಷ್ಕಾಮ ಕರ್ಮವ ಮಾಡುವನು
ನಿಷ್ಕಾಮ ಬಕುತಿಯ ಮಾಡುವದು
ಆ ವೈರಾಗ್ಯ ಆ ಸುವಿವೇಕ
ಮನದಲ್ಲಿ ಮೂಡುವದಿಂದೇ ಪರಮಾತ್ಮಪ್ರಾಪ್ತಿ ೧

ವಿಷಯಾಭಿಲಾಷಾ ಬಿಡುವುದಕೆ
ಮನದಲ್ಲಿ ಸ್ಥಿರತೆಯು ನಿಲುವುದಕೆ
ಗುರು ಬೋಧೆಯಲಿ ಮನ ರಮಿಸುತಲಿ
ಜಿಜ್ಞಾಸೆ ಮೂಡುವದಿಂದೇ ಪರಮಾತ್ಮಪ್ರಾಪ್ತಿ ೨

ಹಗುರಾದ ಸಾಧನವಿದಕೆಲ್ಲ
ಜಗದಲ್ಲಿ ಇರುವ ಜನಕೆಲ್ಲ
ಅಘನಾಶಕ ಶ್ರೀಶಿವಶಂಕರನೋಳ್
ಘನಪ್ರೇಮ ಬಕುತಿಯಿದೋಂದೇ ಪರಮಾತ್ಮಪ್ರಾಪ್ತಿ ೩

## ೩೭೮

ಎಂತು ಪೊಗಳಲಿ ನಿನ್ನಾ
ಮನವಾಣಿಗಳಿಗೆ ಅನಂತನಾಗಿಹೆ ಘನ್ನ ಪ

ಪದ ಪರಮಪಾವನ ನಿನ್ನ ನೆನೆದೊಡೆ ಬನ್ನಾ
ದೂರಾದುದೆನ್ನ ೧

ನಿತ್ಯನಿರ್ಮಲ ನಿರವಯವ ನೀಗ
ಸತ್ಯವಸ್ತುವು ಜಗವಿದೆಲ್ಲವು ೨

ಮಿಥ್ಯವಿದು ಪರಮಾತ್ಮ ನೀನೇ
ಸತ್ಯ ನಾನೇ ನೀನು ಶಂಕರ ೩

## ೩೭೯

ಎಂದೂ ಬಂಧವಿಲ್ಲ ಆತ್ಮಗೆ
ಬಂಧವ ಕಲ್ಪನೆ ಮಿಥ್ಯವಿದೆಲ್ಲ
ಮಂದರ ನುಡಿಯಿದು ಈ ಸಂಸಾರ ಪ

ನಿತ್ಯಮುಕ್ತನೇ ತಾನಾದವಗೆ
ಮಿಥ್ಯವ ಕಲ್ಪನೆ ಬರುವದೆಂತೋ
ತಥ್ಯವಿಲ್ಲದ ಮಾತಿನ ಮಾಲೆ
ಮತ್ತೆ ಬಂಜೆಯಾ ಮಗನೆಂಬುವವೋಲ್ ೧

ಆತ್ಮನೆ ತಾನೆಂಬನುಭವ ಪಡೆಯದೆ
ಮತ್ತೆ ಶಬ್ದ ಮಾತ್ರವನರಿತವಗೆ
ಸುತ್ತಿಕೊಳ್ಳುವುದು ಸಂಶಯ ವಿದುವೆ
ಅನುಭವದೊಳಗೇನಿಲ್ಲ ವಿಕಲ್ಪ ೨

ಭಾನುವಿಗುಂಟೇ ಉದಯಾಸ್ತಗಳು
ಮಾನವಕಲ್ಪನೆಗಳು ತಾನೆಲ್ಲ
ತಾನೇ ತಾನಾದವಗಿನ್ನು
ಹೀನಭವದ ಭಾಧೆಯುತಾನುಂಟೇ ೩

ಅನುಭವರೂಪನು ತಾನಾದಾಗ
ಅನುಭವ ಬರುವದು ಈ ನುಡಿ ಕೇಳೈ
ಮನವಾಣಿಗೆ ಮೀರಿದ ಸ್ವಾತ್ಮನುನೀ
ಚಿನುಮಯ ಶಂಕರತಾನಾದವಗೇ ೪

## ೩೮೦

ಎಲೆ ಮಾನವಾ ಅಭಿಮಾನವಾ ಅವಿವೇಕವಾ ದೂಡೈ
ಸುಖದುಃಖದಾ ಘನ ಮೂಲವಾ ಸುವಿವೇಕದೀ ನೋಡೈ ಪ

ಪರರಿಂದ ಈ ಪರಿತಾಪವು ಬರುತಿರ್ಪುದೆಂಬುದಿದೋ
ಬರಿ ಬ್ರಾಂತಿಯೋ ನಿಜವಲ್ಲವೋ ಅಲೋಚಿಸಿ ನೋಡೈ ೧

ಗ್ರಹಕಾಲಗಳ್ ಘನ ಕರ್ಮಗಳ್ ಇವು ಕಾರಣಲ್ಲವಿದೋ
ಮನವೇ ಇದೇ ಪರಿತಾಪದ ಘನಮೂಲವೈ ನೋಡೋ ೨

ಸಟೆಯಾಗಿಹ ಸಂಸಾರವ ದಿಟವೆಂದು ತೋರ್ಪುದಿದೋ
ಮನದಿಂದಲೇ ಇದು ಕಾಂಬುದೋ ಮನವಿಲ್ಲದಾಗಿಲ್ಲ ೩

ಪರಮಾತ್ಮನ ಪರಿಪೂರ್ಣನ ಮರೆಮಾಡುತೀಮನವು
ಹರಿದಾಡುತಾ ಸುಖದುಃಖವಾ ಗುಣಿಸುತ್ತ ತಾನಿಹುದೋ ೪

ವನದಾಟಕೇ ಮರುಳಾಗದೇ ಗುರುಶಂಕರಾರ್ಯನಲಿ
ಮನ ನಿಲ್ಲಿಸಿ ಈ ಮೋಹವಾ ಬಿಡು ಬೇಗ ನೀನೀಗ ೫

## ೩೮೧

ಏಕ ಚಿಂತಿಸಲಯ್ಯ ಈ ಜಗದ ಸುಖಕಾಗಿ
ಸಾಕು ಇದರೊಳು ಸುಖದ ಲೇಶವನು ಕಾಣೆ ಪ

ಒಂದು ಸುಖ ಬಯಸಿದೊಡೆ ಹಿಂದೆ ನೂರೆಂಟಾಗಿ
ಸಂದಣಿಪ ದುಃಖಗಳು ಬಂದು ಒದಗುವವಿದಕೆ
ಎಂದಿಗೂ ಬಯಸೆನಾ ಈ ತೆರೆದ ಸುಖವನ್ನು
ಹಿಂದಿನಾ ಕರ್ಮದಂತಾಗುತಿರುವುದಕೆ ೧

ಮೊದಲು ಸವಿಯಾಗಿಹುದು ತುದಿಯಲಿದು ವಿಷವಹುದು
ಬದಲಾಗುತಿಹ ಇಂಥ ಸುಖ ಬೇಡವೆನಗೆ
ಮೊದಲುಕೊನೆ ಇಲ್ಲದಿಹ ಸದಮಲಾನಂದವಹ
ಪದವ ಮರೆಯಿಸುತಿರುವದಿದು ಬೇಡವೆನಗೆ ೨

ಅನಿಸಿಕೆಯೆ ಕೂಡಿರುವ ಈ ಸುಖವು ನಿಜವಲ್ಲ
ಮನವಾಣಿಗಳಿಗಾಚೆಗಿಹ ಸುಖವು ನಿಜವು
ತಾನೆ ಸುಖರೂಪನೆಂದನಿತರೊಳು ನಿಶ್ಚಯಿಸಿ
ಜ್ಞಾನಿಶಂಕರನೆ ನಾನಾದ ಮೇಲಿನ್ನು ೩

## ೩೮೨

ಏಳೇಳು ಬಾಲಕನೆ ಅಜ್ಞಾನನಿದ್ರೆಯಿಂ
ಏಳು ತಿಳಿವಿಕೆ ಎಂಬ ಎಚ್ಚರವ ಹೊಂದುತಲಿ ಪ

ಹಾಳು ಮಾಯೆಯು ಎಂಬ ಮೇಲುಮುಸುಕನು ತೆಗೆದು
ಕೀಳು ಬಾಳುವೆಯೆಂಬ ಹಾಸಿಗೆಯ ಸುತ್ತುತಲಿ
ಕೇಳು ಕಿವಿದೆರದೇಕಚಿತ್ತದಿಂ ಶ್ರುತಿಯೆಂಬ
ಕೋಳಿ ಕೂಗುತಲಿಹುದು 'ತತ್ವಮಸಿ' ಎಂದು ೧

ಬಿತ್ತರಿಸಿಹುದು ಮುಮುಕ್ಷುತ್ವ ಮುಂಬೆಳಗಾಗೆ
ಚಿತ್ತವೆನ್ನುವ ಕಮಲವರಳಿಹುದು ನೋಡೀಗ
ಸುತ್ತಲಡಿಗಿದ ಸುವಾಸನೆಯ ಮೂಸುತಲಿ ನೀ
ಉತ್ತು ಮೋತ್ತುಮ ನಿಜಾನಂದವನು ಪಡೆವುದಕೆ ೨

ಜ್ಞಾನನಿಂದಕರೆಂಬ ಗೂಗೆಗಳು ಅಡಗಿದವು
ಕಾಣದಾದವು ಕುತರ್ಕಗಳೆಂಬ ತಾರೆಗಳು
ಸ್ವಾನುಭವಸುಜ್ಞಾನಭಾನುವುದಯಿಸುತಿಹನು
ಜ್ಞಾನಿಶಂಕರನ ಸದ್ಬೋಧವನೆ ಸ್ಮರಿಸುತಲಿ ೩

## ೩೮೩

ಕೇಳು ಇದು ನಿಜಸಾಧನಾ
ಮಾಡು ಕೈವಲ್ಯಪ್ರಾಪ್ತಿಯಿದೋ
ಮಾಡು ನೀ ಮಾಡು ಆನಂದಪ್ರಾಪ್ತಿಯಿದೋ ಪ

ಭಕ್ತಿಭಾವದಿ ಭಜಿಸುತ ನಿನ್ನ
ಚಿತ್ತವನು ಪರಮಾತ್ಮನೊಳಿನ್ನು ನಿಜಾತ್ಮದೊಳಿನ್ನು
ನಲೆಸುತಲಿ ಭವಬಂಧವಾ ನೀಗಿ
ಆನಂದಪ್ರಾಪ್ತಿಗಿದೊ ೧

ವಿಷಯಚಿಂತನೆ ಮನದೊಳಗಿಹುದೇ
ನಾನು ನನ್ನದಿದೆಂಬುದು ಬೆಳೆಯೆ ಇದೇ ಕೇಳ್ ಮಾಯೆ
ನಾಶವಹುದೀ ಮಾಯೆ ನೀ ನೋಡು ಈ ಭಕ್ತಿಯೋಗದಲಿ
ಮಾಡು ನೀ ಮಾಡು ಸನ್ಮಾರ್ಗಸಾಧನೆಯಾ ೨

ಭಕ್ತಿಯೊಂದೇ ಸುಲಭದ ಸಾಧನೆ ಚಿತ್ತಶುದ್ಧಿಯನೀವುದು ನಿಜದಿ
ಮನುಜಗಿದು ಜಗದಿ ತತ್ವದಿ ತಿಳಿವಾ ಮಾರ್ಗವತೋರಿ
ಕೈವಲ್ಯವೀವುದಿದೋ ಕೇಳು ನೀ ಕೇಳು
ಶ್ರೀ ಶಂಕರನ ಬೋಧಾ ೩

## ೩೮೪

ಕೇಳ್ಕೈ ಈಗಾ ಈ ಕರ್ಮಯೋಗಾ ಕಳೆವುದು ಸಂಸಾರರೋಗಾ
ಬಂಧಕ್ಕೆ ಈ ಕರ್ಮವೇ ಕಾರಣಾಗಿ
ಬಂದಿತು ಜನುಮಾ ಅನಿವಾರ್ಯವಾಗಿ
ಈ ಬಂಧವ ನೀಗಿ ಚಿರಶಾಂತಿಗಾಗಿ
ಈ ಯೋಗ ಬೆರಸಿ ಇದೆ ಕರ್ಮವೆಸಗಿ
ಅರ್ಪಿನಿ ಫಲವಾ ಪರಮಾತ್ಮಭಾವಾ
ತಳೆಯುವದೆ ಈ ಕರ್ಮಯೋಗಾ ಕಳೆವುದು ೧

ವಿಷಯಾಭಿಲಾಷಾ ನೀಗಿಸಿ ಆಶಾ
ಹರಿಸುವದಿದುವೇ ನಿಷ್ಕಾಮ ಕರ್ಮ
ಮನಸಿನ ಮಲಿನಾ ಕಳೆದೆಲ್ಲ ಹಸನಾ
ಮಾಳ್ಪುದು ಇಹುವೇ ಜಿಜ್ಞಾಸೆಯೆನ್ನಾ
ಹುಟ್ಟಿಸಿ ಜ್ಞಾನಾ ಕೇಳ್ವ ಭಾನಾ
ಉದಿಸುವುದು ವೈರಾಗ್ಯಭಾಗ್ಯ ಕಳೆವುದು ೨

ವಿಷಧಾತುಗಳ ತಂದು ಪುಟಹಾಕಿಕೊಂಡು
ಹೆಸರಾದ ಸಿದ್ಧೌಷಧಿ ಮಾಡಿಕೊಂಡು
ಉಪಯೋಗ ಕಂಡು
ಜಡದೇಹಗಳ ಬೇನೆ ನೀಗಿಪತೆರದಿ
ಈ ಕರ್ಮವಿಷವಾ ಪುಟಹಾಕುತಿಹುದೀ
ನಿಷ್ಕಾಮತನದೀ
ಈ ಸೂಕ್ಷ್ಮದೇಹಾ ರೋಗ ಕಳೆವಾ
ಘನವಾದ ಪರಮೋಪಾಯಾ
ಇದೇ ಪೇಳ್ದ ಗುರುಶಂಕರಾರ್ಯ ೩

## ೩೮೫

ಗಂಟೆ ಹೊಡೆಯುತಿದೆ ಕೇಳೆಲೋ ಮೂಢಾ
ಪಂಟು ಬಡಿಯುತ ಕೊಡಲುಬೇಡಾ ಪ

ಶ್ರುತಿಶಿರಗಳ ಬೋಧದ ಈ ಗಂಟೆ
ಮತಿವಿಭ್ರಮೆಯ ಬಿಡಿಸುವ ಗಂಟೆ
ಅತಿಮಾನವಸ್ಥಿತಿ ಸಾರುವ ಗಂಟೆ
ಕ್ಷಿತಿಯೊಳಗಿದುವೆ ಸಾರ್ಥಕ ಗಂಟೆ ೧

ಜೀವೇಶ್ವರರೈಕ್ಯದ ಘನ ಗಂಟೆ
ದೇವನೆ ನೀನೆಂದರುಹುವ ಗಂಟೆ
ಸಾವಿನ ಸಂಕಟ ಕಳೆಯುವ ಗಂಟೆ
ಕಿವಿಯಿದ್ದು ಕೇಳದೆ ಬಿಡುವವರುಂಟೇ ೨

ತೋರಿಕೆ ಅನಿಸಿಕೆ ಪುಸಿ ಎಂಬ ಗಂಟೆ
ಪಾರಮಾರ್ಥ ಸತ್ಯದ ಸವಿ ಗಂಟೆ
ಘೋರನಿದ್ರೆಯಿಂದೆಚ್ಚರಿಸುವ ಗಂಟೆ
ಗುರುಶಂಕರನಾ ಪ್ರವಚನ ಗಂಟೆ ೩

## ೩೮೬

ಚರಣ ಕಮಲಕರ್ಪಿಸುವೆ
ಗುರುನಾಥಾ ಈ ಸೇವೆಯು
ಕರುಣನಿಧಿಯೆ ಜ್ಞಾನರೂಪ
ಪರಮಾತುಮ ಪರಮಪುರುಷ ಪ

ರಾಜವಿದ್ಯೆ ರಾಜಗುಹ್ಯ
ಆತ್ಮತತ್ವ ಬೋಧಿಸಿ ನೀ
ಮೂಢತನದ ತಮವ ಕಳೆದು
ತೇಜದಿಂದ ಮೆರೆವ ನಿನ್ನ ೧

ಬಾಲನ ತೊದಲಾದ ನುಡಿಯ
ಕೇಳಿ ಜನನಿ ನಲಿವ ತೆರದಿ
ಲೀಲೆಯಿಂದ ಆಲಿಸುತಲಿ
ಪಾಲಿಸು ಗುರುಶಂಕರನೆ ೨

## ೩೮೭

ಚಿರಶಾಂತಿಯ ಪಡೆವುದಕೆ ಮನ ತ್ಯಾಗಮಾಡು ಜೀವಾ
ಮನವೇ ಭವಬಂಧನಕೆ ಘನಕಾರಣವೈ ಜೀವಾ ಪ

ತಿಳಿ ಈ ಮನದಾ ನಾಶಾ ಆದಾಗಲೆ ನಿಜಮುಕುತಿ
ಮನ ಮೋಕ್ಷದ ಸಾಧನವೈ ಅನುಮಾನಿಸದಿರು ಜೀವಾ ೧

ಮನವಿಲ್ಲದ ಆ ಸ್ವರೂಪ ಅದು ತಾನೆ ನಿರ್ವಿಕಲ್ಪ
ಅದೆ ನಾನಿಹೆನೆಂದರಿಯೈ ಇದೆ ಮನದ ತ್ಯಾಗ ಜೀವಾ ೨

ಇದು ಪರಮ ಪದ ಆನಂದ ವೇದಾಂತದ ಘನಬೋಧಾ
ಗುರುಪುಂಗವ ಶಂಕರನಾ ಪರಮಾರ್ಥ ಬೋಧಸಾರ ೩

## ೩೮೮

ಚೈತನ್ಯವೊಂದೆ ಸತ್ಯ ಈ ಜಗವೆಲ್ಲ ಭ್ರಾಂತಿ ಮಿಥ್ಯ
ಅನಿಸುವಿಕೆ ಇಲ್ಲದಿರುವಾ ಮನವಾಣಿ ಮೀರುತಿರುವಾ
ಘನವಾದ ಸ್ವಪ್ರಭಾವ ಅದೆ ನೋಡು ಆತ್ಮಭಾವಾ ೧

ನಿಜವಾದ ಚೇತನವದು ಅಜರಾಮರಾಗಿರುವದು
ಅದೆ ನೀನು ಎಂದು ತಿಳಿಯೈ ಇದು ಎಲ್ಲ ಕನಸುಮಿಥ್ಯ ೨

ಇದು ನೋಡು ಶಾಸ್ತ್ರಸಾರಾ ಇದನರಿತ ಮನುಜ ಧೀರ
ಇದನೊಂದೆ ತಿಳಿದುಕೊಳ್ಳೈ ಇದು ಶಂಕರಾರ್ಯಬೋಧ ೩

## ೩೮೯

ಜಗವಿದು ಪುಸಿಯೈ ಬಗೆವೊಡೆ ಮನುಜಾ
ತೋರುತಿಹ ಕನಸಿನಂತೆ ಇರುವೆ ಪ

ನನಸಿನ ಅರಿವದು ದೊರಕುವ ತನಕ
ಕನಸಿದು ಎನ್ನುವ ಕಲ್ಪನೆ ಇಹುದೆ ?
ನನಸಿನ ನನಸಾಗಿಹ ಪರವಸ್ತುವೆ
ತಾನೆ ನಿಜವು ಎಂಬರಿವಾಗುತಲಿರೆ ೧

ನಿರುತದಿ ಸಮನಾಗಿರಲರಿಯದ ಈ
ತೋರಿಕೆ ಅನಿಸಿಕೆಗಳು ನಿಜವಲ್ಲವು
ಪರಿಕಿಸೆ ಸತತದಿ ಸಮನಾಗಿರುತಿಹ
ಪರಮ ಪದವೆ ತಾನೆಂದರಿಯುತಲಿರೆ ೨

ಅಳಿಯುವ ಜಗವಿದು ಬೆದರುವಿ ಏತಕೆ
ತಿಳಿಯುತಲೀಪರಿ ನಿಜವಸ್ತುವನು
ಗಳಿಸಿಕೊಂಡು ನೀ ನಿನ್ನಯ ಮುಕುತಿಯ
ಕಲುಷರಹಿತಶಂಕರನಡಿಯರಿಯಲು ೩

## ೩೯೦

ಜ್ಞಾನಸುಧೆಯ ಪಾನಮಾಡಿ ಸ್ವಾನುಭವದಿ ಲೀನನಾದೆ
ಹೀನ ಭವದ ತಾಪವೆನಗೆ ಬಾಧಿಸುತಿರೆ ಗುರು ನೀಡಿದ ಪ

ಜೀವನ ಸುಖದುಃಖದಾ
ಭಾವ ಜೋಲಿಗಳನು ಮರೆದು
ದೇವ ನಾನೆ ಎಂದು ತಿಳಿದು
ಪಾವನಾತ್ಮನೊಳಗೆ ಬೆರೆದು ೧

ನಾನು ನೀನು ಎಂಬ ಭೇದ
ಏನು ಮೋಜು ಮಾಯವಾಯ್ತು
ಕಾಣದಾಯ್ತು ಜೀವಭಾವ
ಜ್ಞಾನಬೋಧದಾ ಪ್ರಭಾವ ೨

ಭಾನ ಮರೆದು ದೇಹಮನದ
ಜ್ಞಾನಗೀತೆಗಳನು ಪಾಡಿ
ತಾನೆ ತಾನಾಗಿರುವ
ಜ್ಞಾನಿ ಗುರುವಿನೊಳಗೆ ಕೂಡಿ ೩

ಕಲ್ಪನಾವಿಲಾಸ ಪೋಗಿ
ಅಲ್ಪನೆಂಬ ಮತಿಯ ನೀಗಿ
ಅಲ್ಪನಾತೀತನಾದನಲ್ಪನಾದ ಶಂಕರನಾ ೪

## ೩೯೧

ಜಿಜ್ಞಾಸುವಿನ ಲಕ್ಷಣಾ ಕೇಳು ನೀಕ್ಷಣಾ
ಪರಮಸುಖಾಕಾಂಕ್ಷಕನಾ

ಬಾಳಿನ ವಿಷಯದಿ ಬೇಸರಗೊಳು ತಾ ವಿರತಿಯಿಂದರುವಾ
ತಾಳುತ ಪ್ರೇಮವ ಜ್ಞಾನಿಗಳು ತಾ ಬೋಧ ಕೇಳ್ವನಿವಾ
ಚಿತ್ತದಿ ಭಕ್ತಿಭಾವನಾ ತಾಳುತ ಸಾಧನಾ
ಮಾಡುತಲಿಹನಿವ ಕಾಣಾ

ಆತ್ಮಾನಾತ್ಮವಿವೇಕ ವಿಚಾರ ಕೇಳುತ ತನ್ನೊಳಗೇ
ಮಿಥ್ಯಾರೋಪಿತ ಜೀವಭಾವನಾ
ಜರೆಯುತ ಮನದೊಳಗೇ ಮಾಡುವ ಸುವಿಚಾರಾ
ಇವನೆ ಧೀರ ಪರಮಸುಖಕಾಂಕ್ಷಕನಾ

ವಿಷಯದಿ ಹರಿಯುವ ಮನವನೆಳೆದು ಬೋಧದೊಳಗಿರುವಾ
ಆ ಶಮೆದಮೆಗಳ ಸಾಧಿಸಿಕೊಳುತಾ ಮೋದ ಹೊಂದುವ ತಾ
ಶ್ರೀ ಗುರುಶಂಕರನಾ ಆನಂದರೂಪನಾ
ಬೆರೆತು ನಾ ಸುಖಿಸುವನಾ

## ೩೯೨

ಜೀವಾ ತಿಳಿ ತಿಳಿ ನಿಜದರಿವಾ ಪ

ಶಾಂತಮಯಾ ಆನಂದನಿಕಾಯ
ಮನಸಿನ ಮೂಲದಾ ಘನಪದವಾ ಅ.ಪ.

ಕಲ್ಪನಾಜಾಲದಾ ನಾಶದ ಸ್ಥಿತಿಯೇ
ಪರಮಸೌಖ್ಯದಾ ನಿಧಿಯನು ನೀನೇ
ಮನದಲಿ ಯೋಚಿಸಿ ತಿಳಿನಿನ್ನಾ ೧

ಜನನಮರಣದಾ ಸಂಕಲೆ ಹರಿಯೋ
ಘನವಿವೇಕದಾ ಬಲದಲಿ ತಿಳಿಯೋ
ಸನ್ನುತ ಶಂಕರಗುರುಬೋಧಾ ೨

## ೩೯೩

ಜ್ಞಾನಾಮೃತ ಭುಜಿಸು ಜೀವ
ಮಾನವಜನುಮದ ಗುರಿಯಿದು ಪ

ಶುದ್ಧಮನದ ಪಾತ್ರೆಯಲ್ಲಿ
ಸದ್ಗುರುವಿನ ಬೋಧದನ್ನ
ಶುದ್ಧ ಚೈತನ್ಯಾತ್ಮ ನೀನೆ
ಬದ್ಧಜೀವನಲ್ಲವೆಂಬ ೧

ಶಿವರೂಪನು ಸಚ್ಚಿದಾತ್ಮ
ಭವಬಂಧನವೆನ್ನೊಳಿಲ್ಲ
ಅವಿನಾಶಿಯೆ ನಾನು ಎಂಬ
ಸುವಿಚಾರದ ಬಾಯಿಯಿಂದ ೨

ಸದ್ ರೂಪದ ಆರೋಗ್ಯ
ಚಿದ್ ರೂಪದ ಪರಮ ಭಾಗ್ಯ
ಆನಂದದ ನಿಧಿಯಾಗುವಿ
ಸದ್ಗುರುಶಂಕರನ ಬೋಧ ೩

## ೩೯೪

ತಿಳಿ ಆತ್ಮರೂಪವಾ ನಿಜಾನಂದವಾ ನೀ
ತಿಳಿ ಬ್ರಹ್ಮರೂಪವಾ ನಿಜಾಧಾರವಾ ನೀ
ಬಿಡು ಗರುವದ ಭಾವಾ ಇದೇ ಜ್ಞಾನವಾ
ಇದೇ ಬೋಧವಾ ಪ

ಕಲ್ಪನೆರಹಿತಾ ಚೈತನ್ಯಾತ್ಮಾ
ಜಗದಾಧಾರನು ತಾ
ಆನಂದಾತ್ಮನ ತಿಳಿವಿದು ನಿನಗೆ
ಶಾಂತಿಗೆ ಸಾಧನವೈ ೧

ಶ್ರವಣಮನನವಾ ಸುವಿಚಾರವನ
ಗುರುಮುಖದಲಿ ನಿಜವಾ
ತಿಳಿದನುಭವದಲಿ ನೀ ನಿಶ್ಚಯಿಸೈ
ಶಂಕರ ಬೋಧವನಾ ೨

## ೩೯೫

ತಿಳೀ ತಿಳೀ ಅನುಭವದಾಳಾ
ಪೇಳ್ವೆ ಸ್ವಾನಂದವ ನೀ ಕೇಳಾ ಪ

ತನುಮನಕರಣಕೆ ಮೀರಿರುವಾ
ಸನಾತನಾ ಸಂಪೂರ್ಣಘನಾ
ನೀನೆ ಆನಂದಾತ್ಮನದೆಂದು ೧

ದೇಹಾದಿಗಳೇ ನಾನೆಂಬ
ಮಹಾದೃಢದ ಈ ಮತಿಯಂತೆ
ನೀನೆ ಆತ್ಮಸ್ವರೂಪನು ಎಂದು ೨

ಗಟ್ಟಿಗೊಳಿಸು ಈ ವಿಷಯಾ ಮನದೋಳ್
ಎಟ್ಟಿ ಮನಸಿನಾ ನಷ್ಟವ ಮಾಡಿ
ಕೆಟ್ಟಾ ಬಾಳಿದು ಪುಸಿ ಎಂಬುದನು ೩

ಜೀವನ್ಮುಕುತಿ ಆನಂದ
ದೇವನೆ ತಾನೆನ್ನುವದೇ ಚೆಂದ
ಭವಹಾರಿ ಶಂಕರನ ಜ್ಞಾನಾ ೪

## ೩೯೬

ತಿಳಿ ತಿಳಿ ನೀ ತಿಳಿ ತಿಳಿ ನೀ
ಅಳಿಯದಾಗಿಹ ಸ್ಥಿರಪದವಾ ಪ

ತೋರಿ ಅಡಗುವ ಜಗಕಾಧಾರ
ತೋರಿಕೆ ಅಡಗಲು ತಾನುಳಿವಾ
ಪಾರಮಾರ್ಥವೆ ತಾನೆನುತಾ ೧

ಅನಿಸಿಕೆಯೆಲ್ಲವು ಪುಸಿಯಿಹುದೆಂದು
ಘನಾನುಭವವಾ ನೀ ಪಡೆಯುತಲಿ
ಅನುದಿನ ಮನನವ ಮಾಳ್ಪುದು ನಿನ್ನೊಳು
ಅನುಭವವಾ ದೃಢಪಡಿಸ್ಯೆ
ವಿನುತ ಶಂಕರಗುರುನುಡಿಯಾ ೨

## ೩೯೭

ತಿಳಿ ನಿನ್ನಯ ನಿಜವಾ ಎಲೆ ಜೀವಾ ಅಳಿ
ದೇಹದ ಭಾವಾ
ಮೋಹವಾ ಕಳೆ ನಾನೀನೆನ್ನುವ ಭೇದವಾ ಪ

ತನು ಮೂರರ ಸಾಕ್ಷೀ ನೀನಿಹೆ
ಘನ ಚಿನ್ಮಯರೂಪಾ ನೀನಿಹೆ
ಅನುಮಾನಿಸದೀಪರಿ ಯೋಚಿಸು ನೀ
ಮನವಾರೆ ಇದೇ ನಿಜವೆಂದೆನುತಾ
ಅನುದಿನದಲಿ ನಿಶ್ಚಯಗೊಳಿಸುತಲಿ
ಅನುಭವದಲಿ ತಿಳಿ ಈ ಬೋಧವಾ
ಕಳೆ ನಾನೀನೆನ್ನುವ ಭೇದವಾ ೧

ಇದು ತೋರಿ ಅಡಗುವಾ ಕಲ್ಪನೆ
ಅದು ತೋರಿಕೆಯಳಿದ ಆತ್ಮನೇ
ಇದು ಕನಸಿನ ಪರಿ ಈ ಜಗವೆಲ್ಲ
ಅದು ನೀನಿರುವಿ ಇದು ನೀನಲ್ಲ
ಇದೆ ತಿಳಿವಿಕೆಯಿಂದಲಿ ಮುಕುತಿ ಕಣಾ
ಇದೆ ಶಂಕರಗುರುವಿನ ಬೋಧವಾ
ತಿಳಿದಾನಂದಿಸು ನೀನೇ ಶಿವಾ ೨

## ೩೯೮

ತಿಳಿ ನೀನೆ ಪರಬ್ರಹ್ಮ ರೂಪ ಏ ಜೀವಾ ತಿಳಿ ನೀನೆ ಪ

ಪ್ರಾಣಕ್ಕೂ ಪ್ರಾಣ ಇದೆ ನೋಡು ಜಾಣ
ಈ ವಿಶ್ವದಲ್ಲೇಕ ತಾಣಾ
ಒಳ ಹೊರಗೂ ತುಂಬಿರ್ದ ಘನವೇ
ನಿರಾಕಾರ ವಿಭುವೇ ಈ ಬ್ರಹ್ಮ ತಿಳಿ ನೀನೆ ೧

ಕಲ್ಪನಾ ನೀಗಿ ತಾನೊಂದೆ ಆಗಿ ಅಲ್ಪತ್ವವೆಲ್ಲವು ಪೋಗಿ
ಅದೇ ನೋಡು ಸುಖರೂಪಬ್ರಹ್ಮ ಅದೇ ಪೂರ್ಣಬ್ರಹ್ಮ
ಆ ಬ್ರಹ್ಮ ತಿಳಿ ನೀನೆ ಪರಬ್ರಹ್ಮರೂಪಾ ೨

ಸರ್ವಾಧಾರಾ ನಭದಂತೆ ಪೂರಾ
ನಿರ್ವಿಕಲ್ಪ ಸುಖಸಾರಾ
ಅದೇ ನೋಡು ಘನಾನಂದರೂಪ ಶಂಕರರೂಪ
ಈ ರೂಪಾ ತಿಳಿ ನೀನೆ ಪರಬ್ರಹ್ಮರೂಪಾ ೩

## ೩೯೯

ತಿಳಿ ಮನದಾಚೆಯ ಪದವನು ನೀ
ತಿಳಿ ಅದೆ ದೇವನು ಇರುತಿಹೆ ನೀ ಪ

ಅದು ಕೊನೆಯಾಚೆಗೆ ಬೇರಿಲ್ಲ
ಅದು ಮನಸಿಗೆ ನಿಲುಕುವದಲ್ಲ
ಅದನನು ಭವದಲಿ ತಿಳಿಯಲ್ಲ
ಬಿಡು ಮನಸಿನ ಗೊಡವೆಯನೆಲ್ಲ
ಇದೆ ಜ್ಞಾನಾಗ್ನಿಯು ಸುಡುತಿಹುದೋ
ಒದಗಿದ ಕರ್ಮದ ಕಾಷ್ಠಗಳ ೧

ಮನವಡಗಿದ ಪದ ಪರಿಚಯವ
ತನಿನಿದ್ರೆಯ ಮೀರಿದ ಸ್ಥಿತಿಯ
ಅನುಭವದಲಿ ತರುವುದೆ ಯೋಗ
ಅದನೇ ಯತ್ನದಿ ಸಾಧಿಸು ತಾ
ನನಸಿನಲೇ ಗುರು ಮುಖದಿಂದ
ಕೇಳಿ ನಿವೇಕದಿ ತಿಳಿ ಬೇಗಾ ೨

ಎಚ್ಚರವಿದು ತಿಳಿ ಕನಸೆಂದು
ಅಚ್ಚಳಿಯದ ಸ್ಥಿತಿ ನಾನೆಂದು
ನಿಚ್ಚಳದಲಿ ನಿಶ್ಚಯಿಸುವದು
ತುಚ್ಛದ ತೋರಿಕೆ ಎಂದು ತಿಳಿ
ಸಚ್ಚಿತ್‌ಶಂಕರ ಬೋಧವನಾ ೩

## ೪೦೦

ತಿಳಿ ಸತ್ಯರೂಪವ ಪರಮಾನುಭವವ
ಸುವಿಚಾರದಿಂದ ಯೋಚಿಸು ಜೀವಾ ಪ

ನಾ ನೀನು ಎನುವಾ ಇದು ಅದು ಎನುವ
ನಾನಾತ್ಮಭಾವಾ ಪುಸಿಯಿದು ಜೀವಾ
ಏನೊಂದು ಮಿಲ್ಲದೆ ತಾನುಳಿದಿರುವ
ಸ್ವಾನುಭವಾತ್ಮಾ ಸತ್ಯನಾಗಿರುವ ೧

ಕರ್ತೃವೆನಿಸದ ಭೋಕ್ತೃವೆನಿಸದ
ಅನಿಸಿಕೆಯಳಿದಾ ನಿತ್ಯನಿರಂಜನ
ಮಾಯಾವಿಲಾಸದಿ ತೋರುವನೀಪರಿ
ಕನಸಿನೊಲಿದುವೇ ಪುಸಿ ಈ ಜಗವು ೨

ಅವಿಚಾರಗಳಿಗೆ ಬೇರಾಗಿ ತೋರೇ
ಸುವಿಚಾರದಿಂ ನೋಡೇ ತಿಳಿವುದು ಇದುವೇ
ಅದೇ ಪರಮಾತ್ಮನೇ ನೀನಿರುವಿಯಿದೋ
ಗುರು ಶಂಕರರಾರ್ಯನ ವರಬೋಧವಿದೋ ೩

## ೪೦೧

ತಿಳಿ ಸುಖಕರವೀ ಬೋಧ ಅಹ ಅಹ
ಗೆಳೆಯನೆ ಮುಕುತಿಪ್ರದಾ ಘನಮೋದ
ಬಲು ಆನಂದವೀವ ಪದ ಪ

ಪರಮಾನಂದಾ ನೀಡಿ ತೋರಿಕೆ ಪುಸಿಮಾಡಿ
ನಿಜತೋರಿ ನಿಜ ಸಾಯುಜ್ಯವೀಯುವದೈ ೧

ಮರುಳರ ಮಾತೆಂದು ಮದದಲಿ ಗಳಹದಿರ್ರೈ
ಇಂತೆಂದು ಮದದಲಿ ಗಳಹದಿರ್ರೈ
ಗುರುಶಂಕರ ಬೋಧವಿದು ೨

## ४೦೨

ತಿಳೀಮನವೇ ತಿಳೀಮನವೇ ತಿಳೀಮನವೇ
ತಿಳಿ ಸಂಪೂರ್ಣ ಸುಖತಾಣಾ ತಿಳಿ ಸಂಪೂರ್ಣ ಸುಖತಾಣಾ
ಸಾವಿನ ಬಾಧೆಯ ನೀಗುವಿ ನಿಜವಾಗೀ ಸಾವಿನ ಬಾಧಾ
ಭಾವಾತೀತನ ನೀ ತಿಳೀಮನವೇ ಪ

ನೋಡು ನೀನೇ ಆತ್ಮಸ್ವರೂಪಾ ಪೇಳಿದ ಗುರುಭೂಪಾ
ಪೇಳ್ದ ಗುರುಭೂಪಾ ದೂಡು ದೇಹಾದಿಗಳ ತಾಪಾ
ನೋಡುನಿಜರೂಪಾ ನೀ ನುಡಿಮನಗಳಿಗೂ ಕಡೆಯಾಗಿರುವ
ಅಡಗಿದ ಗೂಢವಿದು ತಿಳೀಮನವೇ ೧

ಕರ್ಮ ಪಾಶಕೆ ಕಠಾರಿಯಿದು ಜ್ಞಾನಾ
ಮರ್ಮವಿದು ಘನಶಾಂತಿಯಾ ಸ್ಥಾನಾ
ಧರ್ಮಾಧರ್ಮವ ಮೀರಿಹ ತಾಣ
ದುರ್ಮತಿಯಾ ಬಿಡು ಜಾಣಾ
ಘೋರತರದ ಸಂಸಾರದ ನಾಶಾ
ಪೂರಣಗೊಂಬುದು ಆಶಾ
ಪರಾಶಾಂತಿಗಿನ್ನೊಂದನು ಕಾಣೆ
ಗುರುಶಂಕರನಾಣೇ ಗುರುಶಂಕರನಾಣೇ ತಿಳೀಮನವೇ ೨

## ೪೦೩

ದೂಡು ಧನಮಾನಗರ್ವವ
ಅಭಿಮಾನವೆಲ್ಲವ ತರವಲ್ಲವೋ ಪ

ಶಮೆದಮೆವೈರಾಗ್ಯ ದೃಢವಾಗಿಹ
ಶೃತಿವಿದಿತಾಗಿಹ ಘನ ವಿನಯಾದಿ ಸಾಧನೆ
ಪರಮಾರ್ಥಕೆ ಬೇಕು ತಿಳಿ ಜೀವನೇ ೧

ಅನುಭಾವಕುಚಿತಾದ ಪರಿ ಪ್ರಶ್ನೆಯಾ
ಮಾಡು ನಿಜ ಶೋಧವಾ ನೀಡು ಶಿರವನ್ನು
ಗುರು ಶಂಕರನ ಪಾದಕೆ ೨

## ೪೦೪

ನಾ ಪೊಗಳಲು ನಿನ್ನಾಗಾನಾ ಪರಿಪೂರ್ಣಾ ಸತ್ಯಜ್ಞಾನಾ
ಗುರುಮೂರ್ತಿ ಎನಗೆ ದಾನಾ ನೀಡಿದೆ ನೀ ದಿವ್ಯಜ್ಞಾನಾ

ಅವಿಚಾರದಿಂದ ತೊಳಲಿ ಭವಭಾಧೆಯಿಂದ ಬಳಲಿ
ಕಿವಿಗೊಡದೆ ನಿನ್ನನುಡಿಗೆ ಭುವನದಲಿ ದುಃಖಿಯಾದೆ
ಶಿವ ನೀನೆ ಎಂದು ಪೇಳಿ ಸವನಿಸಿದೆ ಮೋಕ್ಷಪದವಾ

ಏನೆಂದು ಪಾಡಲಯ್ಯಾ ನಾನೆಂಬ ಭಾವವಡಗಿ
ನೀ ನಾನೆ ಎಂಬ ತಿಳಿವು ಘನವಾಗಿನೆಲಿಸಿತೀಗ
ಏನೊಂದು ತೋರದಯ್ಯಾ ನಾನಾತ್ವವೆಂಬ ಭಾವ

ಈ ಸೋಹವೆಂಬ ಪದವ ಲೇಸಾಗಿ ಬೋಧಿಸಿದ ನೀ
ಆಶಾನಿವಾಸೆ ನೀಗಿ ನಾ ಶಾಂತನಾದೆ ಮನದಿ
ನೀ ಸಚ್ಚಿದಾತ್ಮಗುರುವೇ ಶಂಕರನೆ ಕಲ್ಪತರುವೆ

## ೪೦೫

ನಿನ್ನ ಸ್ವರೂಪ ಚೈತನ್ಯರೂಪ ಆನಂದರೂಪ ನೀ ನಿರ್ವಿಕಲ್ಪ ಪ

ಬುದ್ಧಿ ಮನಸುಗಳುಹೊದ್ದದ ತಾಣ
ನಿದ್ರಾದ್ಯವಸ್ಥಾ ಮೀರಿರ್ದ ಸ್ಥಿತಿಯೇ ನಿನ್ನ ಸ್ವರೂಪ ೧

ನಾನಾತ್ವವೆಲ್ಲವಮುಸಿ ಎಂದು ಪೇಳ್ದ
ನೀನೇ ಪರಮ ಶ್ರೀ ಶಂಕರರೂಪ ೨

## ೪೦೬

ನಿನ್ನೊಳು ನೀ ತಿಳಿಯೋ ಮನುಜ ಪ

ಪರಮಾತ್ಮನೆ ನೀನಿರುವಿಯೊ ಮನುಜಾ
ಅರಿತು ನೋಡು ನಿನ್ನಯ ನಿಜವಾ
ಮರೆತಿರುವಿಯೊ ನೀ ನಿನ್ನಿರುವಿಕೆಯಾ
ತೋರುವ ದೇಹವು ನಾನಲ್ಲೆಂದು ೧

ನನಸಿನ ದೇಹವು ಕನಸಿನೊಳುಂಟೆ
ನೆನಸಿ ನೋಡು ನಿನ್ನಿರುವಿಕೆ ಸಮವು
ಮನಸಿನಿಂದ ನೀ ತಿಳಿಯೀ ವಿಷಯವ
ನನಸಿನ ದೇಹವು ನಾನಲ್ಲೆಂದು ೨

ಗಾಢನಿದ್ರೆಯಲಿ ಅಡಗಿತು ಬುದ್ಧಿಯು
ಗಡನೆ ನೋಡು ನಿನ್ನಿರುವಿಕೆಯಾ
ಜಡದೇಹವು ಮನಬುದ್ಧ್ಯಾದಿಗಳಿಂ
ಬಿಡಿಯಾದಿರುವಿಕೆಯುಳಿವುದು ನೀನೇ ೩

ಮೂರು ಜಾಗೆಯಲಿ ನಿರುತದೊಳಿರುತಿಹ
ಇರವರಿವಾನಂದವೆ ನೀನ್ನೈ
ಮರೆತು ಇದನು ನೀ ಬರಿದೇ ಮಿಡುಕುವಿ
ದೊರಕುವದೇ ಸುಖ ಹೊರಗೆ ಹುಡುಕಲು ೪

ತೋರಿಕೆ ಅನಿಸಿಕೆಗಳು ಕ್ಷಣಭಂಗುರ
ಮರಣರಹಿತ ಪರವಸ್ತುವು ನೀನೆ
ಅರಿವೇ ಪರಬ್ರಹ್ಮವು ತಾನೆಂದು
ವರಶ್ರುತಿ ಸಾರಿತು ಬ್ರಹ್ಮನೆ ನೀನ್ನೈ ೫

ಗುರುವಿನ ಕರುಣದಿ ತಿಳಿಯೇ ವಿಷಯವ
ಮರುಳಾಗದಿರ್ರೈ ಮಾಯಾಕಾರ್ಯಕೆ
ಮರಣಜನನಗಳ ನೀಗುತಲಿ ವರ
ಗುರುಶಂಕರನಾ ಪದವಿಯ ಪಡೆಯುವಿ ೬

## ೪೦೭

ನಿರ್ವಿಕಲ್ಪರೂಪವೇ ಆನಂದರುಪವೇ
ಸರ್ವಾಧಾರ ಚಿನ್ನಭಾ ನೀನೆ ಆ ಸ್ವಯಂಪ್ರಭಾ ಪ

ನೀ...... ಅನುಭವದಿ ಮನಗಾಣುವಧೀ
ಭಾವಾತೀತ ಬೋಧವಾ ನಿತ್ಯಾನಂದದಾತ್ಮವಾ
ಕಲ್ಪನೆ ಎರಡರ ಮಧ್ಯದೊಳಿರುವ ಕಲ್ಪನೆ ಸಾಕ್ಷಿರೂಪವೇ
ಪೂರ್ಣಾನಂದ ನೀನಿಹೆ ೧

ಈ........... ತೋರಿಕೆ ಎಲ್ಲಾ ಕಲ್ಪಿತಾ
ಮನಸಿನದೆಲ್ಲ ಜೀವಿತಾ
ಮನವೇ ಚಿತ್ತಾಕಾಶ ತಾ
ಕನಸಿನ ಪರಿ ಈ ತೋರಿಕೆ ಮಿಥ್ಯಾ
ಚಿನುಮಯ ಮಾತ್ರ ನೀನಿಹೆ
ಶಂಕರಗುರುವಿನ ಬೋಧವೇ ೨

## ೪೦೮

ನೀ ನೀಡು ವರವ ದೇವಾ ಭವಚಾಲಕಾರಣಾದ
ಈ ವಾಸನಾಪಿಶಾಚಾ ಬಿಡುವಂತೆ ಕರುಣಿಸೀಗ

ವಿಷಯೇಚ್ಛೆಯಿಂದ ಬಳಲಿ ವಿಷಯಗಳ ಭೋಗಪಡೆದೆ
ಪುಸಿಯಾದ ವಿಷಯಸುಖದ ವ್ಯಸನದಲ್ಲಿ ಬೆಂದು ಹೋದೆ
ವಿಷಯೇಚ್ಛೆ ಹೋಗಲಿಲ್ಲ ಕಸವಿಸಿಯ ಬಿಡುತಲಿರುವೆ
ಹಸನಾಗಿ ಬೋಧಮಾಡೈ

ಘೋರಾದ ಭವಜಲಧಿಯಾ ಪಾರಾಗುವುದೆ ಯುಕುತಿಯಾ
ಚಿರಶಾಂತಿ ಪಡೆವ ಪರಿಯಾ ಪರಮಾತ್ಮಜ್ಞಾನಸಿರಿಯಾ
ಕರುಣಿಪುದು ಶಂಕರಾರ್ಯ ಶರಣಾದೆ ಜ್ಞಾನಿವರ್ಯಾ

## ೪೦೯

ನಿ................ ನೇ ಪರಮಾತ್ಮನು ನೋಡೈ
ವಿಚಾರಿಸಿ ನಡೆ ಬೇಗ
ಸ್ವಮಾನಸದಿ ತಿಳಿಯೆಂದಾ
ತಿಳಿಯೇ ದೇವನಾಗುವಿ ಎಂದಾ
ಗುರು ಶಂಕರನಾ ಕಂದಾ

## ೪೧೦

ನೀವೆಲ್ಲ ಪರಮಾತ್ಮನೆ ಏಳಿ
ಸಾರುವೆ ಈ ನುಡಿ ಕೇಳಿ ಪ

ತುಂಬಿಹ ಜಗವನು ನಿಮ್ಮೊಳಗಿರನೇ
ಅಲೋಚಿಸಿರೀನುಡಿಯಾ
ನಂಬಿರಿ ಶ್ರುತಿಶಿರ ಸಾರಿತು ಪರಮನು
ಹೃದಯದ ಗುಹೆಯೊಳಗಿರುವಾ
ಕಾಂಬನು ಗುಹೆಗಳ ಕಳೆದುಳಿದಾ ನಿಜ
ಸಂಪೂರ್ಣಪದವೇ ಪರಾನಂದಾ ೧

ಸ್ಥೂಲದೇಹಮೊದಲಾಗಿಹ ಗುಹೆಗಳ
ನೈದನು ಕಳೆಯಲು ಉಳಿವಾ
ಮೂಲರೂಪ ಪರಮಾತ್ಮನೆ ತಾನೆಂ
ದರಿಯುತ ತಿಳಿಯಿರಿ ನಿಜವಾ
ತಿಳಿಯಿರಿ ನಿರುತದಿ ನೀವೇ ಆ ಪದ
ಕಳೆದು ಪೇಳ್ದ ಮಾಯಾ ಶಂಕರಾರ್ಯ ೨

## ೪೧೧

ನೀನೆ ನಿರಂಜನ ಪರಮಾತ್ಮ
ಸ್ವಾನುಭವವ ಪಡೆದು ನೋಡು ಪ

ಬಿಡು ದೇಹದಿ ಆತ್ಮಭಾನ
ಪಡೆ ಗುರುವಿನ ದಿವ್ಯ ಜ್ಞಾನ
ನುಡಿ ಮನಸಿಗೆ ನಿಲುಕದಿರುವ
ಕಡೆ ಇಲ್ಲದ ಸ್ಥಿತಿಯ ನೋಡು
ಒಡಲುಪ್ರಾಣಮನಾದಿಗಳು

ಜಡವಾದವು ಎಂದು ತಿಳಿದು
ದೃಢನಿಶ್ಚಯದಿಂದ ಕಳೆಯೆ
ಕಡೆಗುಳಿಯುವ ಮೂಲರೂಪ ೧

ಪರಮಾತ್ಮನ ನೋಡುವುದಕೆ
ಹೊರಗೆಲ್ಲಿಯು ಹೋಗಬೇಡ
ಭರಿತನವನು ವಿಶ್ವದಲ್ಲಿ
ಇರನೆ ನಿನ್ನ ಹೃದಯದಲ್ಲಿ
ಮರೆಯದೆ ಈ ನುಡಿಯ ಬೇಗ
ಅರಿತುಕೊಳ್ಳು ನಿನ್ನ ರೂಪ
ಪರಮಪದವ ಪೊಂದುವಿ ನೀ
ಗುರುಶಂಕರನುಕ್ತಿಯಂತೆ ೨

## ೪೧೨

ನೋಡು ನೋಡು ಜೀವನೆ ನೀ ನಿನ್ನಯ ನಿಜರೂಪವಾ
ತಿಳಿದು ನಲಿದು ಜ್ಞಾನಪಥದಿ ಆನಂದವ ಹೊಂದು ನೀ ಪ

ಅಮರನಾದ ಆತ್ಮ ನೀನು ಆನಂದದ ನಿಧಿಯೇ ನೀ
ಅರಿತು ಇದನು ನಿನ್ನ ಮನದಿ ಶಾಂತರೂಪನಾಗು ನೀ ೧

ನಾನೆನ್ನುವ ಅನಿಸಿಕೆಯದು ಅಡಗಲು ತಾನುಳಿಯುವಾ
ತೋರಿಕೆಯನು ಮೀರಿದಾ ನಿರ್ವಿಕಲ್ಪ ನೋಡು ನೀ
ಶ್ರವಣ ಮನನ ನಿದಿಧ್ಯಾಸ ಸಾಧನೆಗಳ ಮಾಡುತಾ
ತಿಳಿವುದಾತ್ಮರೂಪ ನಾನೆ ಎಂದು ನಿನ್ನ ಮನದಲಿ ೨

ಮನದೊಳಗೀಪರಿಯಾ ದೃಢತರದಲಿ ನಿಶ್ಚಿತಮಾಡೀ
ದೇಹ ಮನಸು ಬುದ್ಧಿಗಳಿವು ನಾನಲ್ಲೆಂದರಿಯುತ

ತೋರಿ ಅಡಗುತಿರುವ ಜಗವು ಕನಸೇ ಎಂದರಿತು ನೀ
ಪರಮಸತ್ಯ ಆತ್ಮರೂಪ ನಾನಿಹೆನೆಂದರಿತುಕೋ ೩

ಪ್ರೇಮರೂಪ ನೀನೆ ಎಂದು ಸಾರಿ ಪೇಳ್ದ ಜ್ಞಾನವ
ಆ ಮಹಾತ್ಮಶಂಕರಗುರುರಾಜನ ನುಡಿ ತಿಳಿಯೋ ನೀ ೪

## ೪೧೩

ಪರಮಾತ್ಮನ ನೆನೆಯಲು ಬೇಕು
ಪರತರಸುಖವನು ಪಡೆಯುವನಿದರಿಂ
ದುರಿತಗಳೆಲ್ಲವ ನೀಗಲು ತಾ ಪ

ಮೊದಲನೆ ಕಾರ್ಯವು ಜೀವರೆಲ್ಲರಿಗೆ
ಇದು ಬಲು ಸುಲಭವು ಸಾಧನಗಳಲೀ
ಪದುಮನಾಭನನು ನೆನೆಯದಿರುವವ
ಅಧಮನು ಜಗದಿ ವ್ಯರ್ಥ ಜೀವಿಸುವ ೧

ಎಲ್ಲ ವೇದಗಳು ಎಲ್ಲ ಶಾಸ್ತ್ರಗಳು
ಎಲ್ಲ ಸಾಧನೆಗಳು ಆತನ ಪ್ರಾಪ್ತಿಗೆ
ಬಲ್ಲವರಿಂದಲಿ ತಿಳಿದು ವಿಚಾರಿಸಿ
ನಿಲ್ಲದೆ ಸಾಧನೆ ಕೈಕೊಳ್ಳುವುದು ೨

ಕೇಳುವದೈ ಪರಮಾತ್ಮನ ತತ್ವವ
ತಿಳಿವುದು ತನ್ನೊಳು ತಾನೇ ನಿರುತಾ
ಪೇಳಲೇನು ಧ್ಯಾನಿಸುವುದಾತನ
ಮೇಳವಿಸುವದೈ ಜೀವನ್ಮುಕುತಿ ೩

ನಾರಾಯಣನೇ ಪರಮಗತಿಯು ಈ
ನರಜನ್ಮಕೆ ಬಂದಿರೆ ಲಾಭವಿದೇ
ಅರಿತು ಇದನು ತಾ ಸಾಧನೆ ಮಾಳ್ಪುದು
ಗುರುಶಂಕರನಾ ಬೋಧಸಾರವಿದು ೪

## ೪೧೪

ಪರಸುಖಕರಾ ಗುರುಬೋಧಸಾರಾ
ಮರಣಾ ಜರಾ ದುರಿತಾದಿ ದೂರಾ ಪ

ಜೀವಭಾವವಾ ಸಟೆಯಾಗಿ ಗೈವ
ದೇವಭಾವನಾ ಬಗೆಸಿನಿಲಿಸುವಾ
ಸಾವಿನಂಜಿಕೆ ದೂರಾಗಿ ಮಾಳ್ಪ
ಜೀವಂತಮುಕುತಿ ಕರದೀಯುವಾ ೧

ದೃಶ್ಯವೆಂದು ತೋರ್ಪ ವಿಶ್ವತ್ಯಾಗ ಮಾಡಿ
ದೃಶ್ಯವಸ್ತುವಿಂದ ಬೇರೆನಿಸುವಾ
ಶಾಶ್ವತಾದ ಆ ಪದ ತೋರಿ ಮನದ
ಕಶ್ಮಲವನು ಕಳೆವ ಭವತಾರಕಾ ೨

ಭೇದಭಾವವಾ ಛೇದಿಸುತ ಮನದಿ
ಬೋಧನಾರಾಯಣನ ಕೃಪೆ ಪೊಂದಿದಾ
ಬೋಧರೂಪ ಗುರುವು ಪೇಳಿರ್ದ ಬೋಧ
ಸಾಧು ಶಂಕರಾರ್ಯ ತಾನೆನ್ನುವಾ ೩

## ೪೧೫

ಬಿಡು ಬಿಡು ಮನುಜಾ ಜಡದಭಿಮಾನ
ಪಡೆ ಗುರುವಿನಲಿ ಸ್ವಾತ್ಮದ ಜ್ಞಾನಾ ಪ

ಈ ಸುಖದುಃಖದ ಬಡಿದಾಟದಲಿ
ಗಾಸಿಯಾಗುತಲಿ ಸಾಯುವದೇ ದಿಟ
ಲೇಸಾದರು ಸುಖ ಕಾಣೆಯಿದರೊಳು
ಕ್ಲೇಶವ ನೀಗುವಿ ನಿನ್ನ ನೀ ತಿಳಿವೊಡೆ ೧

ಮರಳಿ ದೇಹ ಪಡೆಯದ ದಿವ್ಯ ಬೋಧ
ಪರಮಶಾಂತಿ ದೊರಕಿಸುವ ಪ್ರಮೋದ
ದುರುಳಸಂಸ್ಕೃತಿಯ ಪಾಶದ ಛೇದ
ಮರೆಯದೆ ಮಾಳ್ಪುದು ಸ್ವಾತ್ಮದ ಶೋಧ ೨

ಈ ಘಟ ಮರಣಕೆ ಶಿಲುಕಿದಾದರೂ
ಈ ಘಟದಲಿ ನೀ ಅಮರನೆ ಇರುವೀ
ಬೇಗನೆ ಜೀವನ್ಮುಕುತಿಯ ಪಡೆಯೈ
ಯೋಗಿ ಶಂಕರನ ಸದ್ಬೋಧದಲಿ ೩

## ೪೧೬

ಬಿಡೋ ಭ್ರಾಂತಿ ಜೀವಾ ಬಿಡೋ ಕಾಮ್ಯಸೇವಾ
ಅಹಂತಾ ಮಮತ್ವ ಮಹಾಮೂಢಭಾವಾ ಪ

ಜಗವನೆಲ್ಲ ಈಶ್ವರನೆ ಸೃಷ್ಟಿಸಿದ ಕೇಳೋ
ಇದೋ ನಿನ್ನದೆಂಬುವದು ಏನಿಲ್ಲ ತಾಳೋ
ಜಗವ ಸೃಷ್ಟಿಸಿದನಾತ ಪಾಲಿಸುವನಾತ
ಇಗೋ ನಾನೆ ಪಾಲಿಸುವೆನೆನ್ನುವದು ವ್ಯರ್ಥ
ಇದೇ ಭ್ರಮೆಯು ಮಮಕಾರ ಸಂಸಾರ ಭಾರ ೧

ನೀ ಧರಿಸಿರ್ದ ದೇಹವಿದ ನೀ ಸೃಷ್ಟಿಸಿದೆಯಾ
ಇದೇ ರೀತಿ ಹೆರವರದು ಬಿಡು ನಿನ್ನ ಮಾಯಾ
ಇದನು ಪಾಲಿಸುವನಾತನೀಶ್ವರನು ನೋಡಾ
ಇದೇ ರೀತಿ ಪಾಲಿಸುವನೆಲ್ಲವನು ನೋಡಾ
ಮಹಾ ವಿಶ್ವವೆಲ್ಲ ತಿಳೀ ಈಶಲೀಲಾ ೨

ಜಗವ ನಾಶಗೊಳಿಸುವನು ಪ್ರಳಯದಲಿ ಈಶಾ
ಮಗುಳೆ ಜಗ ಜೀವರನು ಸೃಷ್ಟಿಸುವ ತಾನೆ
ಜಗದಿ ವರ್ಣವಾಶ್ರಮದ ಬಲುಕಾರ್ಯ ಪಾಶಾ
ಬಗೆಯಲೀಗ ಪಶುವಿನೊಳು ತಿರುಗಿಸುವನೀಶ
ಮಹಾಯೋಗಿ ಶಂಕರನ ಶರಣಾಗೋ ಜೀವಾ ೩

## ೪೧೭

ಬೇಗೆ ತಿಳಿಯೈ ಶುದ್ಧ ಮನದಿ
ಶ್ರೀಗುರು ಪೇಳ್ದ ಬೋಧಾ
ನೀಗುವಿ ಭವದಾ ಬಾಧಾ
ಸ್ವರೂಪಾ ನಂದ ಪಡೆಯುವಿ ನೀ ಸ್ವರೂಪಾ ಪ

ಪರಮಸತ್ಯದ ತತ್ವವರಿಯಲು
ಮರಣಭಯವಾ ನೀಗುವೀ
ಕರುಣಿ ಗುರುವಿನ ಚರಣಕಮಲದಿ
ಬೆರೆತು ಸುಖಿಸುವಿ ನೀ ಸ್ವರೂಪಾ ೧

ಅರಿಯೊನೀ ಪರಮಾತ್ಮನೆಂಬುದ
ಪರಮ ಶಾಂತಿಯ ದೊರಕಿಸೀ
ಗುರುಶಂಕರನಾ ಬೋಧದಾ
ಸವಿಯುಂಡು ತಣಿಯುವಿ ನೀ ೨

## ೪೧೮

ಬೋಧದ ಘನಮಳೆಯುಸುರಿದು
ಮುಕುತಿಬೆಳೆಯು ಬಂದುದು ಪ

ಮಾಯೆಯ ಬಲು ಬಿಸಿಲುತಾಪ
ಕಾಯದೊಳಗೆ ಹೆಚ್ಚುತಿರಲು
ಹೇಯವೆನಿಸಿ ಜನನಮರಣ
ಮುಮುಕ್ಷುತ್ವ ಮೋಡಗವಿದು ೧

ಸುವಿಚಾರದ ಮಿಂಚು ಹೊಳೆದು
ಶ್ರುತಿಶಿರಗಳ ಗುಡುಗು ಹೊಡೆದು
ಶ್ರವಣದ ಸುಳಿಗಾಳಿ ಬೀಸಿ
ಭವತಾಪವ ಹರಿಸುತಿರಲು ೨

ವೈರಾಗ್ಯದ ರಂಟೆ ಹೊಡೆದು
ಶಮೆದಮೆಗಳ ಹರತೆಯಾಗಿ
ಪರಮಾರ್ಥದ ಬೀಜ ಬಿದ್ದ
ನರಜನ್ಮದ ಹೊಲದ ಮೇಲೆ ೩

ದೃಷ್ಟಿಯೊಳಗಿನಾನಂದ
ಸೃಷ್ಟಿಯಾಗಿ ತೋರಿ ಚಂದ
ಶ್ರೇಷ್ಠನಾದ ಶಂಕರಗುರು
ವರನ ಸಹಜಕರುಣೆಯಿಂದ ೪

## ೪೧೯

ಬೋಧಾ ಜ್ಞಾನದಾ ಬೋಧ
ಮೋದಾ ಶಾಂತಿಯಾ ಸ್ವಾದಾ ಪ

ಸ್ವರೂಪದಾ ಸುಖಸ್ವದಾ ಪ್ರಶಾಂತ ಗುರುಬೋಧಾ
ಮೋದಾ ಜ್ಞಾನದಾ ಬೋಧ ಅ.ಪ.

ಸುಲಭಸಾಧ್ಯ ಸುವಿಚಾರಾ
ವೇದಾಂತಶಾಸ್ತ್ರದ ಸಾರಾ
ತಾನೇ ಪರಮಾತ್ಮನು ಎನುವಾ
ಸ್ವಾನುಭವಾಮೃತಜಲಧಾರಾ
ಘೋರಾ ಸಂಸ್ಕೃತಿಯ ಪಾರಾ ೧

ಜೀವಭಾವವ ಮರೆಯಿಸುತಿರುವಾ
ಸಾವ ನೀಗುವಾ ಮಂತ್ರವಾ
ಸಾರಿ ಪೇಳ್ವ ಶಂಕರಾರ್ಯ
ಮೋದಾ ಶಾಂತಿಯಾ ಸ್ವಾದಾ ೨

## ೪೨೦

ಮನುಜಶರೀರವು ವರವೊ ದುರ್ಲಭವೊ ಪ

ಭವಸಾಗರವನು ದಾಂಟಲು ನೌಕೆಯಿದೊ
ಭವಬಾಧೆಯ ನೀಗಲು ಇದು ಸಾಧನವೊ
ಪಾವನಸ್ವರೂಪಜ್ಞಾನವನರಿಯಲು
ದೇವನೆ ತಾನೆನಿಸುವನೊ ಆ ನರನು ೧

ತಿಳಿ ನೀನೀಗಲೆ ನಾನಾರೆಂಬುದ ಮನುಜಾ
ಅಳಿವೀ ದೇಹದೊಳೇ ತಿಳಿಯಲುಬಹುದಿದನಾ
ಉಳಿದ ದೇಹಗಳು ಹಲವಾರಿರುತಿರೆ
ಫಲವೇನೈ ತಿಳಿವಿರದೇ ತಿಳಿ ಭರದೇ ೨

ಪಾಪಿ ಜನ್ಮವು ಎಂದು ಶಪಿಸಲು ಬೇಡಾ
ತಾಪನೀಗಲು ಇದೇ ದಾರಿಯೈ ನೋಡಾ
ಆ ಪರವಸ್ತುವೆ ತಾನಿಹೆನೆಂಬ
ತಾಪಸ ಶಂಕರನಡಿಯೇ ಭವ ಕಡಿಯೇ ೩

## ೪೨೧

ವಂದಿಪೆ ನಾ ಭಗವಾನ್ ಪೂರ್ಣಘನಾ
ನೀ ಮುಕುತಿನಿದಾನಾ ಜ್ಞಾನಘನಾ ಆನಂದಘನಾ

ನಿತ್ಯಾನಂದನು ನೀ ಚೈತನ್ಯ
ಮೂಲಪದ ಮಾಯಾರಹಿತ ಸದಾ
ಆ ನಿರ್ವಿಕಲ್ಪಾತ್ಮಾ ಸತ್ಯನು ನೀ
ಹೇ ಸರ್ವಾಂತರ್ಯಾಮೀ ಪ್ರೇಮಘನಾ ಆನಂದ

ಕಣ್ಣು ಮನಗಳಿಗೆ ನಿಲುಕದಲೇ
ನೀ ಸಾಕ್ಷಿಸ್ವರೂಪಾ ಇವುಗಳಿಗೇ
ಕಲ್ಪಿತವೈ ಮಾಯಾಮೋಹಿತವೈ
ಈ ಜಗವೆಲ್ಲಾ ನಿನ್ನೊಳ್ ಸತ್ಯಘನಾ ಆನಂದ

ಎಂತು ಬಣ್ಣಿಸಲೈ ನಿನ್ನನು ನಾ
ಈ ವಾಣಿಯಿಂ ದೂರಾ ನಿಜಸಾರಾ
ಯೋಗಿವರಾ ಗುರು ಶ್ರೀ ಶಂಕರಾ
ಹೇ ಸರ್ವಾತ್ಮಪೂರ್ಣಾನಂದಘನಾ ಆನಂದ

## ೪೨೨

ವಿಷಯ ಸುಖ ಕ್ಷಣಭಂಗುರ
ಕೊನೆಯಲಿಯಿದು ದುಃಖರೂಪ
ಪೂರ್ಣಶಾಂತಿ ದೊರಕದು ಈ ಪ

ಮೋಹದಿಂದ ಬಯಸುತಿರುವ
ಇಹಪರಲೋಕಗಳ ಸುಖವು
ನಾಶವಂತ ಕೊನೆಯಲೊಮ್ಮೆ
ಕ್ಲೇಶದಾಯಕವು ತಿಳಿಯೈ ೧

ಪರಮಸೌಖ್ಯ ಆತ್ಮರೂಪ
ಅರಿತುಕೊಂಡು ನಿನ್ನೊಳಗೆ
ಮರುಳಾಗದೆ ವಿಷಯಸುಖಕೆ
ಗುರುಶಂಕರನಡಿ ಸೇವಿಸು ೨

## ೪೨೩

ಹೃದಯಾಧಿವಾಸಾ ಚಿನ್ಮಯ ಪಾವನ ಅವನೆ ದೇವಾಧಿದೇವ
ಮೂರು ಕಾಲದ ಸಾಕ್ಷಿ ಪರಮಾತ್ಮನೇ
ಅವನೇ ಜಗದಾಧಿವಾಸ ಪ

ಆಕಾರದೂರ ಏಕಾಂತಪೂರ
ಏಕಾಂತಘನಪೂರ ತಾ ನಿರ್ವಿಕಾರ ಮನೋವಾಣಿದೂರ
ಮನೋವಾಣಿಗೆದೂರ
ಜಗಕೆಲ್ಲ ಆಧಾರ ತಾನಾಗಿಹ ಇವನೆ ಪರಮಾತ್ಮ ಈಶ
ಹೃದಯಾಧಿವಾಸ ೧

ಮನವೆಲ್ಲ ಉಡುಗಿ ಅನಿಸಿಕೆಯಡಗಿ
ಅನಿಸಿಕೆ ತಾನಡಗಿ ತನಿನಿದ್ರೆಯಲ್ಲಿ ಇವು ಎಲ್ಲ ಮುಳುಗಿ
ತಾನೇ ತಾನಾಗಿರ್ದ ಚಿನ್ಮಾತ್ರನೆ
ಅವನೆ ಆನಂದರೂಪ ಹೃದಯಾಧಿವಾಸ ೨

ಅವನೇ ನಾನೆಂದು ತಿಳಿ ಈಗ ನಿಂದು
ಜಗವೆಲ್ಲ ಕನಸೆಂದು ಪರಮಾರ್ಥ ಸತ್ಯ ಶ್ರೀನಾರಾಯಣ
ಇವನೇ ಗುರುಶಂಕರೇಶ ಹೃದಯಾಧಿವಾಸ ೩

## ಮಂಗಳ ಪದ್ಯಗಳು

### ೪೨೪

ನಾ ಬೆಳಗುವೆನಾರತೀಯಾ
ಗುರುಸಾರ್ವಭೌಮನಿಗೆ ಪ

ಅನುಭವರೂಪನಿಗೆ
ನಿಜ ಜ್ಞಾನವ ಬೋಧಿಪಗೆ
ಚಿನುಮಯ ರೂಪನಿಗೆ
ನಿಜ ಬ್ರಹ್ಮಾನಂದನಿಗೆ ೧

ಶಾಂತಿಯ ನೀಡುವಗೆ
ಬಲು ಭ್ರಾಂತಿಯ ನೀಗಿಪಗೆ
ಚಿಂತೆಯ ಕಳೆದವಗೆ
ಆದ್ಯಂತ ವಿಹೀನನಿಗೆ ೨

ಬಂಧವ ಹರಿಸಿದಗೆ
ಆನಂದದಿ ಬೋಧಿಪಗೆ
ವಂದಿಪೆ ದೇವನಿಗೆ
ಶ್ರೀ ಶಂಕರ ರೂಪನಿಗೆ ೩

## ೪೨೫

ಮಂಗಲಂ ಗುರುರಾಜಗೆ
ಮಂಗಲ ಪರಮಾನಂದಸ್ವರೂಪಗೆ ಪ

ಜೀವಪರಮರೈಕ್ಯವ ತಿಳುಹಿಸುವಾ
ದೇವನೆ ನೀನೆನ್ನುತ ಬೋಧಿಸುವಾ
ಸಾವು ಸಂಕಟಗಳ ಮೂಲವ ಕಡಿಯುವಾ
ಪಾವನಾತ್ಮ ಘನಜ್ಞಾನರೂಪಗೆ ೧

ವೇದವೇದಾಂತದ ಸಾರವ ತಿಳುಹಿ
ಶೋಧಿಸಿ ದೇಹತ್ರಯಗಳ ಕಳಹಿ
ಬಾಧರಹಿತ ಪರಮಾತ್ಮನ ಅರಿವನು
ಬೋಧಿಸಿ ಅನುಭವದಲಿ ನೆಲೆಸಿದಗೆ ೨

ತೋರಿಕೆ ಅನಿಸಿಕೆ ಎನಿಸುವ ದ್ವೈತವ
ಧೀರತನದಿ ಸುಳ್ಳೆಂದು ತಿಳಿಸುವಾ
ನಾರಾಯಣಗುರುವರನ ಕೃಪಾಪ್ರಿಯ
ಪೂರಣಬ್ರಹ್ಮಸ್ವರೂಪ ಶಂಕರಗೆ ೩

## ೪೨೬

ಮಂಗಲವಾ ಪಾಡುವೆನಾ
ಮಂಗಲಾಂಗ ಗುರುದೇವಗೆ
ಸಂಗರಹಿತ ಸಂಪೂರ್ಣಗೆ
ಕಂಗೊಳಿಸುವ ಪರಮಾತ್ಮಗೆ ಪ

ಬೋಧಿಸುತಲಿ ಪ್ರೇಮದಿಂದ
ಸಾಧನೆ ಸಾಧ್ಯಗಳ ಮರ್ಮ

ಭೇದಿಸುತಲಿ ಭವಜಾಲವ
ಮೋದವೀವ ಘನ ಮಹಿಮಗೆ ೧

ಬಲು ಶಾಸ್ತ್ರದ ತೊಡಕಿಲ್ಲದೆ
ಸುಲಭದಿಂದ ಬೋಧಿಸುವಾ
ತಿಳಿ ಆತ್ಮನೇ ನೀನೆನ್ನುತ
ಘನ ಶಾಂತಿಯ ನೀಡಿದವಗೆ ೨

ನಾರಾಯಣ ಗುರುದೇವನ
ಪರಮ ಪ್ರೀತಿ ಪಾತ್ರನೀತ
ಧರೆಯೊಳಗವತರಿಸಿದ ಶ್ರೀ
ಗುರುಶಂಕರದೇವನಿಗೆ ೩

## ಗಣೇಶ ಸ್ತುತಿ

### ೪೨೭

ಮಂಗಲಂ ಜಯ ಮಂಗಲಂ ಪ

ಗಜಮುಖದೆಸೆವೆ ಲಂಬೋದರಗೆ
ತ್ರಿಜಗವಂದಿತ ಮೋದಕ ಕರಗೆ
ರಜತಾದ್ರಿವಾಸನ ರಮಣಿಯಸುತನಿಗೆ
ಭಜಕರ ಪಾಲಿಪ ವಿಜಯನಿಗೆ ೧

ಮೂಷಿಕ ತೇಜಿಯನೇರಿದಗೆ
ದೇಶದಿ ಕೀರ್ತಿಯ ಬೀರಿದಗೆ
ಶೇಷಾಭರಣವೆತ್ತ ಶೂರ್ಪಕರ್ಣನಿಗೆ
ವಾಸೆಯಿಂದ ಭಕ್ತರ ಪೋಷಿಪಗೆ ಮಂಗಲಂ ೨

ಕಡುಕರುಣದಿ ಜಗವನು ಕಾಯ್ವಾ ಯೆ
ನ್ನೊಡೆಯ ಶ್ರೀ ವಿಘ್ನೇಶ್ವರ ದೇವಾ
ಇಡಗುಂಜಿಯೊಳಗಿದು ದೃಢದಿ ಲಕ್ಷ್ಮಣನಿಗೆ
ಗಡಣವಿದ್ಯವನಿತ್ತು ನುಡಿಸುವಗೆ ಮಂಗಲಂ ೩

## ದೇವ ಗುರುಸ್ತುತಿ

### ೪೨೮

ಅಂಗವೇ ಶ್ರೀ ಮಹಾಂಗಿರೀಶ ಲಿಂಗವಾದುದು
ಸಂಗ ಸುಖದ ದುರಿತವೆಲ್ಲ ಹಿಂಗಿ ಪೋದುದು ಪ

ನಿರ್ಮಲಾತ್ಮ ಗುರುಕಟಾಕ್ಷ ಮರ್ಮಸಿಕ್ಕಿತು
ಕರ್ಮ ಹರಿದು ಜ್ಞಾನಜ್ಯೋತಿ ಬೆಳಕು ಮಿಕ್ಕಿತು
ಧರ್ಮ ತತ್ವದಮೃತವೆಂಬ ಶರಧಿಯುಕ್ಕಿತು
ಪ್ರೇಮದಿಂದ ಪ್ರಕಟವಾದ ಬ್ರಹ್ಮ ದಕ್ಕಿತು ೧

ಮಾಯೆಯಿಂದ ಮಮತೆಯೆಲ್ಲ ಸತ್ಯವಾದುದು
ನ್ಯಾಯಪಥವ ತಿಳಿಯೆ ಸರ್ವ ಮಿಥ್ಯವಾದುದು
ಸಾಯುತೊಡನೆ ಹುಟ್ಟುವುದರ ಭೀತಿಪೋಪುದು
ಕಾಯದೊಳಗೆ ದಿವ್ಯಜ್ಯೋತಿ ಪಥ್ಯವಾದುದು ೨

ಪರಶಿವಾತ್ಮಲಿಂಗವೆನ್ನ ಮನಕೆ ಸಾರಿತು
ಬೆರೆದು ಸ್ವಯಂಜ್ಯೋತಿ ತುಂಬಿ ತುಳುಕಿ ಬೀರಿತು
ಪರಮಾನಂದರಸದ ಲಹರಿ ಉಕ್ಕಿ ಹರಿಯಿತು ೩

### ೪೨೯

ಅಂತರಂಗದ ಸುಖ ಹೇಳುವುದಲ್ಲಾ
ಸಂತೋಷವೆಂಬುದು ಶಿವನೊಬ್ಬ ಬಲ್ಲ ಪ

ಗುರುಕೊಟ್ಟ ಮಂತ್ರದ
ಪರರ್‍ಯಾರು ಅರಿಯದಂದದಲಿ ಈ ಪ್ರಾಣ
ಪರಮನೊಳಾಡುವುದು ಆತನ ದಿವ್ಯ

ಚರಣನೋಡುವುದು ಆಂತರ್ಯದ ಸ್ವಾನುಭವ
ಅರಿಯದ ಜನರಿಗೆ ೧

ಧ್ಯಾನಿಸಿ ನೋಡಲು ದೃಢವಿಡಿದಾಡಲು
ಜ್ಞಾನ ದೀಪದ ಜ್ಯೋತಿ ಗಗನ ವೇರಿದ ಪ್ರತಿ
ಭಾನುವುದಿಸಿದಂದದಿ ಪ್ರಕಾಶಮಾನ ಸದಾನಂದದಿ
ಅಂತರ್ಯದ ಸ್ವಾನುಭವ ಅರಿಯದ ಜನರಿಗೆ ೨

ಪರಶಿವಾತ್ಮಕ ಮೂರ್ತಿ ಪರಮನಾಗಿಹ ಅರ್ಥಿ
ಎರಕವಾಗಿಹ ಲಕ್ಷಾ ಎಣಿಕೆ ಇಲ್ಲದ ಮೋಕ್ಷಾ
ಶರಧಿಯೊಳಾಡುವುದು ಶಕ್ತಿಯ ಮರ್ಮ
ವರಕೃಪಮಾಡುವುದು ವಿಮಲಾನಂದ
ಗುರುಕಟಾಕ್ಷದ ಬಗೆ ಅರಿಯದ ಜನರಿಗೆ ೩

## ೪೩೦

ಅಂತರಾತ್ಮನ ಧ್ಯಾನವನ್ನು ಅಂತರಂಗದಿ ಮಾಡೋ ನೀನು
ಸಂತತ ನಿರ್ಮಲನಾಗಿ ನಲಿದಾಡು ಮನವೆ ಪ

ನರದೇಹಕ್ಕೆ ಬಂದು ನೀನು
ಇರುವಂಥಾ ಸಾರ್ಥಕವೇನು
ಗುರುಕರುಣಕವಚವ ತೊಟ್ಟು
ಕರ್ಮವ ಸುಟ್ಟು
ಮರೆತು ಮಾಯಾ ಮೋಹವೆಲ್ಲವ
ತರಿದು ಷಡ್ವೈರಿಗಳ ಶಿರವನು
ಸರಸ ಹೃದಯದಿ ಮೆರೆವ ಜ್ಯೊತಿಯ ಬೆಳ
ಗಿರುವ ಕೋಟಿಪ್ರಕಾಶದಂತಿಹ ೧

ಬಿಡದೆ ಶ್ರೀ ಗುರುವಿನ ಪಾದಾ
ಪಿಡಿದು ನಿತ್ಯಾನಂದ ಬೋಧಾ
ಕಡಲ ತೆರೆಯೊಳು ಮಿಂದು ಕಾಮನ ಕೊಂದು
ಅಡಿಗಡಿಗೆ ತತ್ವಾಮೃತರಸ
ಕುಡಿದು ಸರ್ವಾಂಗದಲಿ ಬೇಧಿಸಿ
ನಡುವಿರಳು ಶೀತ ಕಿರಣಕೋಟಿಯ
ಪಡೆಯಕಟ್ಟಿದ ತರಣಿಯಂತಿಹ ೨

ಮಂದಮತಿಯ ಕಳೆದು ಚಿದಾ
ನಂದನ ಶ್ರೀ ದಿವ್ಯಪಾದ ಹೊಂದಿ ಬ್ರಹ್ಮಾ
ನಂದರಸವಾ ಬಿಡದೆ ಸೇವಿಸುವ ಶಿವಾ
ನಂದವನು ಕೈಕೊಂಡು ವಿಮಲಾ
ನಂದ ದತ್ತಾತ್ರೇಯನೊಳಾಡುವಾ
ಎಂದಿಗೂ ಆಳವಿಲ್ಲದಾತ್ಮನ
ಚಂದವನು ನೋಡುತ್ತನಿನ್ನೊಳು ೩

## ೪೩೧

ಅಂಬಾ ತ್ರಿಪುರ ಸುಂದರೀ ಅದ್ವೈತಕಾರೀ
ಸಾಂಬೆ ಪರಬ್ರಹ್ಮಣಿ ಪ

ಶುಂಭಾಸುರ ಮರ್ದಿನೀ ಸಹಜಾನಂದೈಕ್ಯವಾಣಿ
ತುಂಬುರಗಾನ ಪ್ರಿಯೆ ಮಹಾಮಾಯೆ
ಸುಖದಾಯೆ ಸರಸಿಜದಳಾಯೆ ಅ.ಪ.

ತ್ರಿದಶ ವಂದಿತೆ ತ್ರಿಮೂರ್ತಿ ತ್ರೈಲೋಕ್ಯಗಾತ್ರಿ
ತ್ರಿಗುಣರಹಿತೆ ಪಾರ್ವತಿ ತ್ರಿಪುರ ಪ್ರಹಾರೆ
ದೇವೀ ತ್ರಿಶೂಲಧರ ಸಂಜೀವಿ
ತ್ರಿಗುಣ ಸೋಮ ಸೂರ್ಯಾಗ್ನಿ ನೇತ್ರೆ
ಶುಭಗಾತ್ರೆ ಸುಚರಿತ್ರೆ ಸನ್ಮುನಿಸ್ತೋತ್ರೆ ೧

ಪರಶಿವೇ ಪರಶಾಂಭವಿ
ಪರತರದೇವಿ ಪರಮಪಾವನ ಪ್ರಭಾವಿ
ಪರಮಾತ್ಮ ಸ್ವರೂಪಿಣಿ ಪರಮಾನಂದೆೈಕ್ಯವಾಣಿ
ಪರಿಪೂರ್ಣಭರಿತೆ ಶರ್ವಾಣಿ
ಶಿವರಾಣಿ ಫಣಿವೇಣಿ ನಿತ್ಯಕಲ್ಯಾಣಿ ೨

ವರಕೊಡಶಾದ್ರಿ ನಿವಾಸೆ ವರಸುಪ್ರಕಾಶೆ
ವರ ಸಿಂಹಾ ರೂಢೆ ಮಹೇಶೇ
ವರದೇ ಶ್ರೀ ಮೂಕಾಂಬಿಕೇ
ವಿನುತಾನಂದೈಕ್ಯರೂಪಿ ಗುರುವಿಮಲಾನಂದ ಸ್ವರೂಪಿ
ಸುಪ್ರತಾಪಿ ಸ್ತುತಿ ದೀಪಿ ಮಂತ್ರಕಲಾಪಿ ೩

## ೪೩೨

ಅಂಬಾ ಮೂಕಾಂಬಾ ಪಾಹಿ ಭಕ್ತಾವಲಂಬಾ
ಅಂಬಾ ಮೂಕಾಂಬಾ ಪಾಹಿ ಪ

ಶುಂಭ ದನುಜ ಸಂಹಾರಿಣಿ ತಾರಿಣೀ
ಶಾಂಭವಿ ಶೂಲಿನಿ ವರಗೌರೀ
ಅಂಬುಜಾಕ್ಷಿ ಅಸುರಾಸುರ ವಂದಿತೆ
ಸಾಂಬಶಿವೇ ಸಚರಾಚರ ಸಾಕ್ಷಿಣಿ ೧

ಕಾಮ ಜನನಿ ಕರುಣಾ ಜಲಧೇ
ಶ್ರೀ ಮಹಾವೈಷ್ಣವಿ ಶುಭ ಫಲದೇ
ಕಾಮೇಶ್ವರಿ ಕಮಲಾಸನ ಸನ್ನುತೇ
ಭೀಮ ಪರಾಕ್ರಮಿ ಭವಭಯ ಭಂಜಿನಿ ೨

ವರ ಕುಟಜಾಚಲಪುರ ನಿಲಯೇ
ಸುರಮುನಿ ಸೇವಿತೆ ಸಹೃದಯೇ
ಶರಣಾಗತ ಪರಿಪಾಲಿತೆ ಸುಲಲಿತೆ
ಗುರುವಿಮಲಾನಂದಭರಿತೆ ಮೂಕಾಂಬಿಕೆ ಶ್ರೀ ಶ್ರೀ ಶ್ರೀ ೩

## ೪೩೩

ಆನಂದಮಯನಾದೆ ನಾನು ದಿವ್ಯ
ಜ್ಞಾನಾಮೃತವನುಂಡು ಪೇಳಲಿನ್ನೇನು ಪ

ಶರೀರ ಭ್ರಾಂತಿಗಳನೆಲ್ಲ ಕಳೆದು ಕರ್ಮ
ದುರಿತ ಸಂಸಾರ ಆಶಾಪಾಶವಳಿದು
ನರನೊಳಗೆ ನರನಾಗಿ ಸುಳಿದು ಸರ್ವ
ಪರಿಪೂರ್ಣ ಭರಿತ ತಾನೆಂಬುದು ತಿಳಿದು ೧

ಗುರುಕಟಾಕ್ಷದ ನೆಲೆ ನೋಡಿ ತಿರುಗಿ
ಬರುವ ಹೋಗುವ ಭ್ರಮೆಗಳನೀಡಾಡಿ
ಶರಣರ ಸ್ತೋಮದಿ ಕೂಡಿ ಭವ
ಶರಧಿಯ ದಾಟಿ ಹಂಸಾತ್ಮಕನೊಳಾಡಿ ಆನಂದ ೨

ಗುರುಚರಣಗಳ ಧ್ಯಾನಿಸುತಾ ಒಡನೆ
ಎರಕವಾದಂತೆ ಬೇರೂರಿತು ಚಿತ್ತಾ
ವರವಿಮಲಾನಂದ ಗುರುದತ್ತಾತ್ರೇಯನ
ಕರುಣಾಸಮುದ್ರದೊಳ್ಬೆರೆದು ನಲಿವುತ್ತಾ ಆನಂದ ೩

## ೪೩೪

ಆನಂದಾ ಅದ್ವೈತಾ ಬಲ್ಲವರಿಗೆ ನಿತ್ಯಾನಂದ ಪ

ಆನಂದಾ ಅತಿ ಸಾಧುಗಳಲಿ ಸಹ
ಜಾನಂದಾ ಸುಖಸಮಾಧಿಯಲಿ ಬೋ
ಧಾನಂದಾ ಭಕ್ತ ವೃಂದದಲಿ
ಆನಂದ ಸುಖಮಯ ಸರ್ವಭರಿತ ಸಚ್ಚಿ
ದಾನಂದಾಮೃತ ರಸಪಾನದೊಳಿರುವ-
ದೊಂದಾನಂದಾ ಅದ್ವೈತ ೧

ಒಳಹೊರಗೊಂದಾಗಿರುವಾ ಹೊಳ
ಹೊಳದ ಹಂಬಲಿಸದೆ ಮೆರೆವಾ ಥಳ
ಥಳಿಸುವ ತನಿರಸಸುರಿವಾ
ಕಳೆಯಮಧ್ಯದಿ ನಲಿನಲಿದು ಬ್ರಹ್ಮಾನಂದ
ತಿಳಿದು ಬೋಧಜ್ಞರ ಬಳಿಯಲಿರುವುದೊಂದಾನಂದಾ ಅದ್ವೈತ ೨

ಪರಮ ಪುರುಷರ ಸ್ತೋಮದಲಿ ಪರಾ
ತ್ಪರ ತತ್ವ ವರವಿಚಾರದಲಿ ಹರಿ
ಹರರಿಗೊಂದಿಸುವ ಹಾದಿಯಲಿ
ಚರಿಸುತ್ತ ಚತುರ್ಥಮಂಟಪದ ಮಧ್ಯದಲಿ
ಇರುವಂಥಾ ಸದ್ಗುರು ಪರಶಿವಭರಿತ ವಿಮಲಾನಂದಾ ಅದ್ವೈತ ೩

## ೪೩೫

ಈಗಿದ್ದ ಇರವೇ ಮನುಜರಿಗೆ ಈಗಿದ್ದ ಇರವೇ ? ಪ

ಮಾಯಾಪ್ರಪಂಚದ ಬಲೆಯ ಪಾಶಕ್ಕೆ ಸಿಕ್ಕಿ
ಕಾಯದೊಳಿಹ ಪರಮಾತ್ಮನನರಿಯದೆ ಅ.ಪ.

ನರರ ಯೋನಿಗೆ ಬಂದು ನಡತೆ ಸಜ್ಜನರೆಂದು
ಬರಿಯ ಬನ್ನಣೆಯೊಳು ಬೆರೆತಿಹರಲ್ಲದೆ
ಶರೀರ ಸುಖವನ್ನೆಲ್ಲ ಮರೆತು ತನ್ನಾತ್ಮನೊಳಿರುವ
ಸುಖವು ತಾನು ಬಯಸಬೇಕಲ್ಲದೆ ಈಗಿದ್ದ ೧

ಮಂದಮತಿಗಳಾಗಿ ಮಮತೆಮಾರ್ಗಕೆ ತಾಗಿ
ಅಂದಣದೈಶ್ವರ್ಯ ಬಯಸುವವರಲ್ಲದೆ
ಹೊಂದಿಸಿ ಸಚ್ಚಿದಾನಂದ ಬ್ರಹ್ಮದಿಮನ
ಬಂದಾಗಿ ನಲಿಸಿ ವಿರಕ್ತಿಯ ಬಂದಿಯೊಳ್ಬಲಿಸಿ
ನಿಂದು ನಿಜದ ನಿರುಪಮನೆ ನಿತ್ಯಾತ್ಮನೆ
ಎಂದು ಕುಂದದೆ ಸಹಜಾನಂದನಾಗದ ಮೇಲೆ ಈಗಿದ್ದ ೨

ಪರಮಪುರುಷರಾದ ಪ್ರಹುಢ ಸಂತರ ಪಾದ
ಸ್ಮರಣೆಯ ನಿರುತ ಮಾಡಿರಬೇಕಲ್ಲದೆ
ಪರತತ್ವಮಯನಾದ ಗುರುಮಹಾರಾಯನ
ಕರುಣವ ಪಡೆದು ಕಣ್ಣಿನೊಳು ಶ್ರೀ
ಚರಣವ ಪಿಡಿದು ಬರಿಯಮಾತಲ್ಲವೆಂದರಿತು ಪೂರ್ಣ ಬ್ರಹ್ಮ
ಗುರುವಿಮಲಾನಂದ ಭರಿತನಾಗದ ಮೇಲೆ ಈಗಿದ್ದ ೩

## ೪೩೬

ಎಂದಿಗೆ ದೊರಕುವನು ಶ್ರೀಗುರುವನ
ಗೆಂದಗೆ ದೊರಕುವನು ಪ

ಮಂದಮತಿಯ ಕಡೆಗೊಂದಿಸಿ ಸಚ್ಚಿದಾ
ನಂದ ಬ್ರಹ್ಮನ ಕೃಪೆಯಿಂದ ಪಾಲಿಸಿದಾತಾ ಅ.ಪ.

ಕರುಣದಿ ಕರದು ತನ್ನಾ ತೊಡೆಯ ಮೇಲ್ಕು
ಳ್ಳಿರಿಸಿ ಶರಧಿಯೊಳೀಡಾಡಿ ಈಶ್ವರನ
ತೋರಿದ ಗುರು ಎಂದಿಗೆ ೧

ತನ್ನ ತಾ ತಿಳಿವವೊಲು ತತ್ವನಸಾರ
ವನ್ನು ಸಾಧುಗಳಿಂದಲಿ ಚೆನ್ನಾಗಿ ಅರಿತುಕೊಳ್ಳೆಂದು
ಅಮೃತಪಾನವನ್ನು ಮಾಡಿಸಿದ
ಪ್ರಸನ್ನವದನ ಗುರು ಎಂದಿಗೆ ೨

ಹುಟ್ಟಿಸಾಯದಂದದಿ ವಾಕ್ಯದ ಮದ್ದು
ಕೊಟ್ಟು ಜೀವನ್ಮುಕ್ತಿಯ ಪಟ್ಟವ
ಗಟ್ಟಿ ಫಣೆಗೆ ಮಂಗಲಾಕ್ಷತೆ
ಇಟ್ಟ ವಿಮಲಾನಂದ ಬಟ್ಟೆದೋರಿದ ಗುರು ೩

## ೪೩೭

ಎನ್ನ ಮೋಹನ ತುಪಾಕಿಯನು ಪಿಡಿದು ಹಸ್ತದಲಿ
ಚೆನ್ನಾಗಿ ಶೃಂಗರಿಸುವೆ ಪ

ಭಿನ್ನಭಾವನೆಯ ಕಳಿದುಳಿದು ಕೋವಿಗೆ ಮತ್ತೆ
ಇನ್ನು ಜೋಡಿಲ್ಲವೆಂದು ಇಂದು ಅ.ಪ.

ಪ್ರೇಮರಸವೆಂಬ ಜಲದಲಿ ತೊಳೆದು ಶುಚಿಮಾಡಿ
ನೇಮವೆಂದೆಂಬ ನಿರ್ಮಲವಾಗಿಹ
ಆಮಹಾಕನಕ ರಜತದ ಭೂಷಣವ ತೊಡಿಸಿ
ಕಾಮವನು ಸುಟ್ಟು ಮಸಿಮಾಡಿ ತುಂಬುವೆನದಕೆ ಎನ್ನ ೧

ಹಮ್ಮಮತೆಯೆಂಬ ಗುಂಡನು ಅದರಮೇಲಿರಿಸಿ
ಒಮ್ಮನಸು ಎಂಬ ಗಜದಿಂದ ಜಡಿದು
ಒಮ್ಮೆ ಗುರುವಾಕ್ಯರಂಜಿಕೆಯ ಕಿವಿಯೊಳಗರದು
ಬಿಮ್ಮನೇ ಬಿಗಿದು ಈಕ್ಷಿಸಿ ನೋಡುವೆ ಎನ್ನ ೨

ಮೆರೆವ ಸುಜ್ಞಾನ ಜ್ಯೋತಿಯ ಬತ್ತಿಯನು ಕೊಳಿಸಿ
ಭರದಿ ಬರುತಿಹ ಅಷ್ಟಮದ ಕರಿಗಳಾ
ತರಿದಾರು ವೈರಿವರ್ಗಕೆ ಕೆಡಹಿ ಗುರಿಯಿಂದ
ಗುರುವಿಮಲಾನಂದ ರಸಭರಿತನಾಗಿರುವಂಥ ೩

## ೪೩೮

ಕಾಶಿಯಿಂದ ಬಂದ ಬಾಗೀರಥಿಯು ತನ್ನ
ವಾಸಕ್ಕೆ ತೆರಳಿದಳು ಲೇಸಾಗಿ ತನ್ನ ಮನದ ಸಂಕಲ್ಪವು
ವಾಸಿಯಾಗಲು ತನ್ನಾಶೆ ಪೂರೈಸಿಸಿ ಪ

ಮದದಾನೆ ತನ್ನ ಕಾಲುಗಳ ಸಂಕೋಲೆಯ
ನೊದೆದು ಕಳೆವ ತೆರದಿ
ಪದುಳದಿ ಶ್ರೀಗುರು ಮುದದಿ ಬಿಡಿಸಿ ತನ್ನ
ಸದಮಲಾನಂದವ ಸತತ ಪಡೆವೆನೆಂದು ೧

ಮುತ್ತೈದೆತನದಿ ತೆರಳಿಹೋಗಬೇಕೆಂಬ
ಚಿತ್ತದಿವಿಸ್ಮರಣೆಗೈದು
ಪ್ರತ್ಯುಗಾತುಮ ಆತ್ಮಾರಾಮನ ಸಂಗಡ
ಚಿತ್ತೈಸಿದಳು ತನ್ನ ಉತ್ತಮ ಕಾಶಿಗೆ ೨

ಪತಿಯ ವಚನದ ಸಂಗತಿಗಳ ಕೇಳುತ
ಅತಿ ಹಿತ ತನಗಾಗಲು
ಮತಿಗೆ ಮಂಗಲವಾದ ಮುಕುತಿಯ ಸಾಧಿಸಿ
ನುತ ವಿಮಲಾನಂದ ಸತತ ಪಡುವೆನೆಂದು ೩

## ೪೩೯

ಗುಡಿಗುಡಿಯನು ಸೇದಿ ನೋಡೋ ನಿನ್ನ
ಒಡಲೊಳಗಿರುವ ರೋಗಗಳನೀಗಾಡೋ ಪ

ಬುರುಡೆ ಎಂಬುದು ಈ ಶರೀರಪಡೆ
ದಿರುವ ಸುಕೃತವೆ ಕೊಳವೆಯಾಕಾರಾ
ಹರಿನಾರಾಯಣನೆಂಬ ನೀರಾ ಇದ
ನರಿತು ನೀ ಸೇದಿಕೊ ಬಲು ಮೋಜುಗಾರಾ ಗುಡುಗುಡಿ ೧

ಮನವೆಂಬ ಸಂಚಿಯ ಬಚ್ಚಿ ದಿನ
ದಿನದಿ ಪತಾಕವೆಂಬ ಭಂಗಿಯ ಕೊಚ್ಚಿ
ತನುವಿನ ಚಿಲುಮೆಯೊಳ್ಬೆಚ್ಚಿ ಗುರು
ಧ್ಯಾನದ ಕೆಂಡದುರಿಯ ತಂದ್ಹಚ್ಚಿ ಗುಡುಗುಡಿ ೨

ಸದ್ಯದಿ ಅಮಲೇರುವುದು ದಾರಿದ್ರ್ಯ
ದುಃಖವ ಸುಟ್ಟು ಹೊಗೆ ಏಳುವುದು
ತೋರುವುದು ಗುರು ಬುದ್ಧಿಗೆ ಮಾರ್ಗ
ಸಿದ್ಧ ವಿಮಲಾನಂದ ಪದಕೆ ಕೊಡುವುದು ಗುಡುಗುಡಿ ೩

## ೪೪೦

ಗುರು ಕೃಪೆ ಯಾಗದ ನರಜನ್ಮ ವ್ಯರ್ಥಾ
ಅರಿತು ನೀ ಸಾಧಿಸು ಘನಪರಮಾರ್ಥಾ ಪ

ಭೇದವರ್ಜಿತನಾಗಿ ಸ್ವಾದ ಸೇವಿಸಬೇಕು
ಸಾದು ಸಜ್ಜನ ಪಾದ ತೀರ್ಥಾ ೧

ಭಕ್ತಿಭಾವಾರ್ಥ ವಿರಕ್ತಿಯಿಂದಾಗಬೇಕು
ಮುಕ್ತಿಮಾನಿನಿಗೆ ತಾಂ ಕರ್ತಾ ೨

ವರಸಚ್ಚಿದಾನಂದ ಬ್ರಹ್ಮದಿಂದೆಸೆವ
ಗುರುವಿಮಲಾನಂದ ಸಮರ್ಥಾ ೩

## ೪೪೧

ಗುರುಕೊಟ್ಟ ಭಾಗ್ಯ ವೈರಾಗ್ಯ ಇದ
ನರಿತು ಅರ್ಚಿಸಲು ಲಿಂಗೈಕ್ಯಕೆ ಯೋಗ್ಯ ಪ

ಘನವಾದ ವೈರಿ ಸಂಸಾರ ಮಾಯಾ
ವನಿತೆ ಇಕ್ಕಿದ ಮದ್ದು ದುಃಖದಾಕಾರಾ
ಮನವೆ ಶುದ್ಧಾತ್ಮವಿಚಾರಾ ನೀನು
ನೆನೆದು ಮರೆಯದಿರು ಗುರು ಉಪಕಾರಾ ೧

ನಗಿಸಿ ಅಳಿಸುವುದು ಕುಂದು ಭಕ್ತ
ರಘವ ನಿವಾರಿಸಿ ಸಲಹಬೇಕೆಂದು
ಮೃಗಧರ ರೂಪಿಲಿ ಬಂದು ಸ್ವಾಮಿ
ಸೊಗಸಾಗಿ ಶ್ರೀ ಗುರುಚಿತ್ತಕೆ ತಂದು ೨

ಜೋಡಿಲ್ಲದೈಶ್ವರ್ಯದಿಂದಾ ಹೋ
ಗಾಡಿಸೋ ಘೋರಸಂಸಾರದ ಬಂಧಾ
ನೋಡೋ ನಿತ್ಯಾತ್ಮನ ಚಂದಾ ನಲಿ
ದಾಡೋ ಎನ್ನನು ಗುರು ವಿಮಲಾನಂದಾ ೩

## ೪೪೨

ಗುರುವೆನ್ನ ತಾಯಿ ಸದ್ಗುರುವೆನ್ನ ತಂದೆ
ಗುರುಕೃಪೆ ಪಡೆದು ನಾ ಹೆಸರಿಗೆ ಬಂದೆ ಪ

ಗುರುವೆನ್ನ ಪ್ರಾಣಲಿಂಗಾ
ಗುರುವೆನ್ನ ಇಷ್ಟಲಿಂಗಾ
ಗುರುಪ್ರಕಾಶವು ಬೆಳಗುತಿರೆ ಸರ್ವಾಂಗಾ
ಗುರುಸ್ಮರಣೆ ಸುಖರಂಗಾ
ಗುರುಕರುಣಾ ಕೃಪಾಂಗಾ
ಗುರುವಿಂದಧಿಕ ಕಾಣೆ ಶಿವನಾಣೆ ಗುರುವೆನ್ನ ೧

ಗುರುವೆ ಈ ಪೃಥವಿಯು
ಗುರುವೆ ಆಕಾಶವು
ಗುರುವೆ ಸ್ಥಾವರ ಜಂಗಮವೆಲ್ಲವು
ಗುರುರೂಪವೆಂದು ಶ್ರೀ ಗುರು ಕರುಣದಂದರಿತು
ಗುರು ಸರ್ವರಿಗೆ ಸರಿಯಲ್ಲಾ ಶಿವಬಲ್ಲ ೨

ಗುರುವೆ ದೇವಾಂಗಾ ಶ್ರೀ
ಗುರುವೆ ಬಸವಲಿಂಗಾ
ಗುರು ಬ್ರಹ್ಮವಿಷ್ಣುರುದ್ರ ಸ್ವರೂಪ
ಗುರು ಧರಣಿಪಾಲಾ
ಗುರು ವಿಮಲಾನಂದ ಲೋಲಾ
ಗುರು ಸಿದ್ಧೇಶ್ವರಸ್ವಾಮಿ ಭಕ್ತ ಪ್ರೇಮಿ ೩

## ೪೪೩

ಗುರುವೆ ಸಂಸಾರವಿದು ಸ್ಥಿರವೇ ಬರಿದೆ ನಾ
ಮರೆವೆ ಧರವೇ ವಿಷಯಂಗಳಲಿ ವಿಶ್ವಾಸಾ ವಿರಕ್ತಿಗೆ ಮೋಸಾ
ಎಲ್ಲ ಉಪಾಧಿಯೊಳು ಸುಖವಿಲ್ಲ ಅನುಭವಿ ತಾಂ ಬಲ್ಲ
ವಲ್ಲೆನೆಂದರೆ ಎನಗದು ಬಿಡದಲ್ಲ
ಈ ನುಡಿ ಪುಸಿಯಲ್ಲ ಗುರುವೆ

ಆಗ ಈಗೆಂಬ ಶರೀರದ ಭೋಗ ತೀರಿಸಿಕೊಂಡು
ಹೋಗಬೇಕೆಂಬ ಚಿಂತೆ ಎನಗೆ ಮುಕ್ತಿಯಮನೆಗೆ ಗುರುವೆ ೧

ಆಶಾಪಾಶದಲಿ ಶರೀರದ ಘಾಸಿಯಾಗದಂತೆ ಪ್ರ
ಕಾಶ ಹಣವೇ ರೂಪಾಗಿ ಎನ್ನ ನೋಡೋ
ನಿನ್ನಂತೆ ಮಾಡೊ ಗುರುವೆ ೨

ಹಣವೆ ಮುಂದಿಲ್ಲ ಕೊಟ್ಟ ಋಣವೇ ತೀರಿಸಲಿಕ್ಕೆ
ಗುಣವೇ ನೀ ಕೊಟ್ಟದ್ದುಂಟು ಎನಗೆ ನಿರುತ
ನಾ ಬೆಳಗೆ ಗುರುವೆ ೩

ನಿನಗೆ ಎಣೆಯಾದ ವಸ್ತು ಎನಗೆ ಸಿಕ್ಕುವುದುಂಟೇ
ಬಾರಯ್ಯ ಬಲು ಕೃಪೆಯಿಂದ ಗುರು ವಿಮಲಾನಂದಾ ಗುರುವೆ ೪

## ೪೪೪

ದೀಪ ಬೆಳಗುವಾಗಾ ಉಣ್ಣುವರುಣ್ಣಿರೋ ಬೇಗ ಬೇಗಾ
ದೀಪ ಲೋಪವಾದಮೇಲೆ ಬರಿದಪ್ಪುದು ಭೋಜನಶಾಲೆ ಪ

ಚಿತ್ತಶುದ್ಧಿಎಂಬ ಎಳೆಬಾಳೆಎಲೆ ಎಡೆಮಾಡಿ
ನಿತ್ಯನಿರ್ಮಲವೆಂಬ ರಾಜಾನ್ನವ ನೀಡಿ

ಸತ್ಯಸಾಧುಸಂಗವೆಂಬ ಘೃತಸಾರಾನ್ನವ ನೀಡಿ
ಪ್ರತ್ಯುಗಾತಮ ಆತ್ಮನ ನಿರಂತರ ತೃಪ್ತಿಬಡಿಸಿ ನೋಡಿ ದೀಪ ೧

ಗುರುಕೃಪೆಯೆಂದೆಂಬ ಪರಡಿಯ ಪಾಯಸದಾಹಾರಾ
ನಿರುತಾನ್ನ ಉದಾನಮಾಡಲು ಷಡುರಸದುಪಚಾರಾ
ಹರಿಹರ ಭೇದಗಳಡಗಿದನು ಭವಾಮೃತ ಸಾರಾ
ಪರಉಪಕಾರಕೆ ಶರೀರವ ತೆರುವುದು
ಪೊಸದುಪ್ಪದಭಾರಾ ದೀಪ ೨

ಕೆಂದ ಆಕಳ ಕರೆದು ಕಾಸಿದ ಕ್ಷೀರವ ಕೈಕೊಂಡು
ತಂದೆ ತಾಯ್ಗಳ ಭಕುತಿ ಮಾಡಿದ ಮಸುರೋಗರ ಉಂಡು
ವಂದಿಸಿ ಶ್ರೀ ಗುರು ವಿಮಲಾನಂದನ ಸ್ವಂದವನೊಳಗೊಂಡು
ಹೊಂದಿದ ಮಾಯಾಕ್ಷುಧೆಯನು ಹಿಂದಿಸಿ
ತೇಗುತ ಮೆರದುಂಡು ೩

## ೪೪೫

ದೇಹಿ ತವ ಭಕ್ತಿ ದೇವಾದಿಶಕ್ತಿ ಮೋಹನಮಯ ಮೂರ್ತಿ ಧೃತ
ಹೇಮವರ್ಣ ಸರ್ವಾಂಗ ಶೋಭಿತೆ ಕಾಮಿತಾರ್ಥ ಉದಾರಿಣಿ
ಕಾಮಜನನಿ ಕಿರೀಟ ಕುಂಡಲ ಪಾಣಿ ಪಾತ್ರ ಸುಧಾರಿಣಿ
ಸೋಮ ಸೂರ್ಯ ಪ್ರಕಾಶೆ
ಸುರಮುನಿಸ್ತೋಮ ಹೃದಯ ಸಂಚಾರಿಣಿ
ತಾಮಸ ಕೃತ್ಯ ದೈತ್ಯವನ ಸಂಹಾರೆ ಕಾಲ ಕಠಾರಿ ಪರಶಿವೆ ೧

ಅಂಬುಜಾನನೆ ಸಕಲ ಕುಟುಂಬ ರಕ್ಷಕ ಮೋಹಿನಿ
ಶಂಭುದಾನವ ಶಿಕ್ಷಿತೆ ಶಿವ ಪ್ರತಿಬಿಂಬೆ ಸಿಂಹ ಸುವಾಹಿನಿ
ಕಂಬುಕಂಧರ ರತ್ನ ಭೂಷಿತೆ ತುಂಬರ ಪ್ರಿಯಗಾಯಿನಿ
ಅಂಬಿಕಾ ಶ್ರೀಯ ಅಮೃತಪೂರಿತ ಕುಂಭ ಕುಚಯುಗೆ
ಕುಮುದ ಲೋಚನೆ ೨

ವರದ ಅಭಯ ಕರಾಂಬುಜೇಕ್ಷಣೆ ವೀಣಾ ಪುಸ್ತಕ ಶೋಭಿತೇ
ಪರಮ ಪಾವನ ಚರಿತೆ ಪರಮೇಶ್ವರಿ ಪ್ರತಾಪ ವಿರಾಜಿತೆ
ಭರಿತ ಬಂಧ ಕಟಾದಿವಾಸಿನಿ ಭಕ್ತ ಸಜ್ಜನ ಪೂಜಿತೆ
ಗುರು ವಿಮಲಾನಂದ ದೇವಿ ಶ್ರೀ ಮಹಾಲಕ್ಷ್ಮೀ ಸಂತತ ೩

## ೪೪೬

ನಾನಿನ್ನ ಪಾದದ ಬಳಿಗೆ ಬಂದೆನು ಹೂವಾ
ಕೊಡಿಸೆ ಭಕ್ತರ ಒಡಂಬಡಿಸೆ
ಮನದ ಅಜ್ಞಾನವ ಬಿಡಿಸೆ ಮನಕೆ ಸಂತೋಷವ ಕೊಡಿಸೆ

ಬಸುರೊಳಗಿದ್ದಾಗ ಕಾಯ್ದವರ್‍ಯಾರು
ಮೊಲೆಯುಣ್ಣಿಸಿ ತೊಟ್ಟಿಲೊಳ್
ಶಿಶುವಾಗಿದ್ದಾಗ ಸಲಹಿದವರ್‍ಯಾರು
ಮಾಯೆ ನೀನೊಬ್ಬಳೆ ತಾಯೆ
ಭಕ್ತರ ಸಂತತ ಕಾಯೆ ಶಾಂತೇಶ್ವರಿ ಮಾಹಾಮಾಯೆ ನಾನಿನ್ನ ೧

ಬರವೋದ ಕಲಿಸಿದ್ಯಾಕೆ ನೀನು ಸಂಗೀತ
ಸಪ್ತಸ್ವರ ಭೇದವ ತಿಳಿಸಿದ್ಯಾಕೆ ನೀನು
ನಿನ್ನಿಂದ ಬಲ್ಲವರಿಲ್ಲ ಮತ್ತೊಬ್ಬರು ತಿಳುಹುವರಿಲ್ಲ ನಾ
ಪೇಳುವ ನುಡಿ ಪುಸಿಯಲ್ಲ ನಾನಿನ್ನ ೨

ವರಕೊಲ್ಲಾಪುರದ ಶ್ರೀ ದುರ್ಗಾಂಬಾ ನಾನಿನ್ನ ಪಾದದ
ಸ್ಮರಣೆ ಬಿಡೆನು ಶ್ರೀ ಮೂಕಾಂಬಾ ಅಡಿಗಡಿಗೆ ನಾ
ಶರಣೆಂಬೆ ಸಲಹುವ ಪುತ್ಥಳಿಗೊಂಬೆ ಶಾಂತೇಶ್ವರಿ
ಶ್ರೀ ಮೂಕಾಂಬೆ ನಾನಿನ್ನ ೩

## ೪೪೭

ನಿಜದ ನೆನಪು ನಿನಗಿರಲಿ ಮತ್ತೆ
ಅಜನ ಲಿಖಿತದಿ ಬಂದುದೆಲ್ಲಾ ಬರಲಿ ಪ

ಹುಟ್ಟಿಬಹಾಗ ತಂದಿಲ್ಲಾ ಶಿವ
ಕೊಟ್ಟ ಸರ್ವಸ್ವ ಸಂಗಡ ಬಹಾದಲಾ
ಬಟ್ಟೆ ಬೈಲಾಗುವುದೆಲ್ಲಾ ಮನ
ಮುಟ್ಟಿ ಭಜಿಸೊ ಗುರುನಾಥನ ಸೊಲ್ಲಾ ನಿಜದ ೧

ಸುಖದ ಸುದ್ದಿಯ ನಂಬಬೇಡಾ ಬಹು
ದುಃಖ ತಂದೊಡ್ಡುವುದಕೆ ತಡಮಾಡಾ ಸುಖ
ದುಃಖ ತನದೆಂದು ನೋಡಾ ನಿತ್ಯ
ಮುಕುತಿ ಮಾರ್ಗದಲಿ ಚಿತ್ತವ ನೀಡೋ ಗಾಡಾ ನಿಜದ ೨

ನಿನ್ನೊಳು ಶೋಧಿಸಿನೋಡು ಪ್ರ
ಸನ್ನವಾಗಿಹ ಪ್ರಕಾಶದಲಿ ಲೋಲಾಡು
ಭಿನ್ನಭಾವನೆಯನೀಡಾಡು ವ್ಯ
ತ್ಪನ್ನ ಶ್ರೀ ಗುರುವಿಮಲಾನಂದನ ಪಾಡು ನಿಜದ ೩

## ೪೪೮

ನಿನ್ನೊಳಗೆ ನೀ ತಿಳಿದುನೋಡು ನಿರ್ಮಲನಾಗಿ ಪ

ನಿನ್ನೊಳಗೆ ನೀ ತಿಳಿದುನೋಡು
ಚೆನ್ನಾಗಿ ಗುರುಭಕ್ತಿಯ ಮಾಡು
ಭಿನ್ನಪದಾರ್ಥಗಳನ್ನು ಬಯಸದೆ
ಅನನ್ಯಭಾವದಿ ನಿಜವನ್ನು ನಿತ್ಯಾತ್ಮನ

ನರದೇಹದಿಂದಧಿಕವಿಲ್ಲಾ
ಸ್ಥಿರವಾಗಿ ನಿಂದಿರುವುದಲ್ಲಾ
ಬರಿದೆ ಕೆಡಿಸುವುದು ಸಲ್ಲಾ
ಗುರುತಿಗೆ ಬೆರೆಸಲು ಬಲ್ಲಾ
ಗುರುನಾಥನಿಂದುಪದೇಶವಾ ಕೈಕೊಂಡು ಇ
ತರ ಪರಿಕರಂಗಳ ಆಶಾಪಾಶವಾ ವರ್ಜಿಸಿ ನಿನ್ನ
ದುರಿತ ದುಃಖ ವಿನಾಶವಾಮಾಡಲು ಭವ
ಶರಧಿಯ ದಾಟುವಾ ಆಯಾಸವಾ ನಿಲ್ಲುವದಿನ್ನು
ಕುರಿತುಮನದಲಿ ತಿಳಿದುನೋಡು ಕಾಂಡುವ
ಆರು ಅರಿಗಳ ವಿಚ್ಛೇಧನ ಮಾಡು ಅವಿದ್ಯೆಯನ್ನು
ಶರಗು ಹಿಡಿದು ಹೊರಗೆ ದೂಡು ಹಮ್ಮಿನಹಲ್ಲು
ಮುರಿದು ನಿನ್ನೊಳಗೆ ಕೂಡು
ಹರಿಚರಣದೊಳಾಡು ಗುರುಮಂತ್ರವನುಚ್ಚರಿಸಿ ಕರ್ಪೂರವನು
ಉರಿವ ಜ್ಯೋತಿಯಲಿ ಬೆರೆವಂತೆ
ಜಗದೊಳಿರುವುದೆಲ್ಲ ನಶ್ವರಸಂತೆ ನೋಡೆ
ಮರೆವದೆಲ್ಲ ನಿಮ್ಮಯ ಪಿಂತೆ ಇಲ್ಲಿ
ಬರುವದೆಲ್ಲ ಬಯಲಿನ ಭ್ರಾಂತಿ
ಅರಿತಮಹಾತ್ಮರ ಚರಣನರಸಿಜಕೆ
ಎರಗಿ ತತ್ವಾನಂದ ಭರಿತನೆಂದೆನಿಸುವ ನಿನ್ನೊಳಗೆ ೧

ವಾದಿಸಿ ಶುದ್ಧತತ್ವದ ಹಾದಿಯ ಬಲ್ಲವರಾದ
ಸಾದು ಸತ್ಪುರುಷರಪಾದ ಕೊಡಿ ಶ್ರೀ ಗುರುಪ್ರಸಾದ
ಸಾಧಿಸಿ ಸವಿಯನು ಬೇಡಿಕೊ
ಬ್ರಹ್ಮಾನಂದದ ಬೋಧೆಯಿಂದ ನೀ ಲೋಲಾಡಿಕೊ
ನಿತ್ಯನಿರ್ಮಲವಾದ ವಸ್ತು ನೀ ದೃಢಮಾಡಿಕೊ
ಅಂತರಾತ್ಮನ ಶೋಧಿಸಿ ಸಜ್ಜಾಗಿ ನೋಡಿಕೊ
ಅಕ್ಷರಮೇಲೆ ಹಾ ಧನ್ಯಧನ್ಯನೆನಿಸಿ ಮೆರೆವ ವರ್ಣಾಶ್ರಮದ
ಭೇದವಳಿದು ಮಾಯೆಯ ಜರಿವೆ

ನಿತ್ಯಾನಂದವಿನೋದಕೆ ಮಹಾತ್ಮರನು ಕರಿವೆ
ನೋಡಲು ದ್ವೈತವಾದ ಮಿಥ್ಯವೆಂಬುದನರಿವೆ
ಭೂಮಂಡಲದ ವೇದಸುಶಾಸ್ತ್ರಪುರಾಣಾಗಮಗಳಾದಿ
ಮಧ್ಯಾಂತ ಶ್ರೀ ಗುರುದೇವಾ
ಬಹುಆದರವಿಡಿದು ಶಿಷ್ಯರಕಾವಾ
ಸಂಪಾದಿಸಿಕೊಡುವಾ ಮುಕ್ತಿಯತಾವಾ
ನಿತ್ಯಾರಾಧಕರಿಗೆ ಸದ್ಗತಿಗಳನೀವಾ
ಶ್ರೀಧರವರಗಂಗಾಧರ ಕಮಲಜರಾದ
ತ್ರಿಮೂರ್ತಿಗಳಾದರೆಂತೆಂಬುದ ನಿನ್ನೊಳಗೆ ೨

ಚಿತ್ತಶುದ್ಧಿಯನ್ನೆ ಮಾಡಿ ಸತ್ಯಸದಾಚಾರ ಗೂಡಿ
ನಿತ್ಯನಿರ್ಮಲದೊಳಗಾಡಿ ಪ್ರತ್ಯುಗಾತುಮನ ನೋಡಿ
ಇತ್ತಣದ ಹಂಬಲವ ಬಿಡಬೇಕು ತನುಮನಧನ
ಜೊತ್ತಾಗಿ ಶ್ರೀ ಗುರುವಿಗೆ ಕೊಡಬೇಕು ಕರುಣದವಜ್ರ
ಕೆತ್ತಿದ ಕವಚವನು ತೊಡಬೇಕು
ಭಕ್ತಿವೈರಾಗ್ಯದುತ್ತರಕೆ ತಾನೊಡಂಬಡಬೇಕು ಇಂತಾಗಿ
ಬಿಡಬೇಕು ಇಂತಾಗಿ ಬಿಡದೆ
ಮತ್ತಿ ತಾತ್ವರ್ಥವ ತಿಳಿದು ಕಾಣುಕಾಣದರೊಳು
ಪ್ರತ್ಯಕ್ಷ ಹೊಳದಾಡುವ ಚಿದ್ಭಾನು ಪ್ರಕಾಶವನ್ನು
ಅತ್ಯಧಿಕತೆಯಿಂದಲೀವನು ಜ್ಞಾನಿಗಳೊಳು
ವಿಸ್ತಾರ ವಸ್ತು ವಿಚಾರವನು ಮಾಡಿ ನೋಡಿದರೆ
ಕತ್ತಲೆ ಬೆಳಕೆರಡಿಲ್ಲದು ಸ್ವಯದಲಿ
ಎತ್ತನೋಡಿದರು ಪ್ರಜ್ವಲಿಸುವುದು ತಾಂ
ಉತ್ತಮಾನಂದದಿ ಸಲಿಸುವುದು ಗುರು
ಭಕ್ತರ ನಿಜದಲಿ ನಿಲಿಸುವದು
ಸುತ್ತು ಮುತ್ತು ಸುಳಿದು ತಾನೆ ಬಯಸುವದು
ನೆತ್ತಿಯೊಳಗೆ ಹೊಳೆಯುತ್ತಿಹ ಜ್ಯೋತಿಯು
ಎತ್ತಿತೋರಿತು ವಿಮಲಾನಂದ ಬ್ರಹ್ಮನ ನಿನ್ನೊಳಗೆ ೩

## ೪೪೯

ನಿಜವೆಂದು ತಿಳಿದು ಪೂಜಿಸೋ ಗುರುಚರಣ
ತ್ಯಜಿಸೋ ನೀ ಮಾಯಾ ಪ್ರಪಂಚದ ಸ್ಮರಣಾ ಪ

ರಮಣೀಯರ್ಮೋಹವೆಂಬುದು ದೊಡ್ಡಶರಧಿ
ಭ್ರಮಿಸಿ ನೀ ಮುಳುಗುತ್ತೇಳುವೆ ವ್ಯರ್ಥಭರದಿ ನಿಜ

ಸತ್ತು ಹುಟ್ಟುವ ದೇಹ ಸಾಧ್ಯವ ಮಾಡಾ ಅ
ನಿತ್ಯ ಪ್ರಪಂಚ ದೊಳ್ಕೆಡಬೇಡ ಮೂಢಾ ನಿಜ

ನೀರ ಮೇಲಣ ಗುಳ್ಳೆಯಂತೆ ಶರೀರಾ
ಬಾರಿಬಾರಿಗೆ ಸತ್ತು ಜನಿಪ ವಿಚಾರ ನಿಜ

ಎಂದಿಗೂ ಮರಣತಪ್ಪದು ಕೇಳುಮರುಳೆ
ಚಂದ್ರಶೇಖರನಾ ಧ್ಯಾನಿಸು ಹಗಲಿರುಳೆ ನಿಜ

ಗುರುವಿಮಲಾನಂದ ಸ್ಮರಣೆಯ ಮಾಡೋ
ಜನನ ಮರಣದ ಭಯವ ನೀಗಾಡೋ ನಿಜ

## ೪೫೦

ನೆರೆನಂಬಿದೆನು ನಾನಿನ್ನ ಪಾದಾಂಬುಜವನು
ಕರುಣದಿ ಸಲಹೋ ಎನ್ನಾ ಪ

ಹರನದೊಡೆಯ ಗೌರಿ ವರನಾಗಿ ಮೆರೆದಿಹ
ಸ್ಮರಹರ ಕರ್ಪೂರ ಧವಳಾಂಗಾ
ರಿಪುಭಂಗಾ ದೇವತುಂಗಾ ಮೃಡೇಶ್ವರಲಿಂಗಾ

ದೇವರದೇವ ನೀನೆಂದು ರಾವಣ ಬಂದು
ದೇವಾ ನೀ ಸಲಹೋ ಇಂದು
ಭಾವಕಿ ಬೇಡಿಕೊಂಡರೆ ಭಾವಜೆಯವಗೆ ನೀ
ಭಾವಿಸಿ ವರವಿತ್ತ ಹರನೇ ಶಂಕರನೇ ಮೃಗಧರನೇ
ಪಾರ್ವತೀಶ್ವರನೇ ನೆರೆ

ಹರಿಧರಹರನೀನೆಂದು ಹರಿಯುತಾ ಬಂದು
ಹರನೆ ರಕ್ಷಿಸೋ ನೀ ಎಂದು ಕರದು
ಹರಿಮಿತ್ರನ ಕರುಣದಿ ವರವಿತ್ತ ಕರಿಗೊರಳನೆ
ನಾಗಭೂಷಾ ಅಘನಾಶಾ ಮುನಿತೋಷಾ
ಅಮಿತಸರ್ವೇಶಾ ನೆರೆ

ಪಡುಗಡಲೊಡೆಯನೆಂದು ಪಾಡುತಬಂದು
ಪೊಡವಿಯೊಳ್ ಸ್ತುತಿಪನೆಂದೂ
ಒಡೆಯ ಲಕ್ಷ್ಮಣನಿಗೆ ಒಡನೆ ಅಭಯವಿತ್ತ
ದೃಢ ಮೃಢೇಶ್ವರಲಿಂಗಾ ಮೋಹನಾಂಗಾ
ರಿಪುಭಂಗಾ ಹರನೆ ಭಸಿತಾಂಗಾ

## ೪೫೧

ನೋಡಯ್ಯಾ ನಿತ್ಯಾತ್ಮನನ್ನು
ನಿಜವಾಗಿ ನಿನ್ನೊಳಗೆ ನೀನು
ನೋಡಯ್ಯಾ ನಲಿನಲಿದಾಡಯ್ಯಾ
ಎರಡುದಿನಸಂಸಾರಾ
ಎರವಾಗಿ ತಂದ ಶರೀರಾ ಸ್ಥಿರವಲ್ಲ ಸ್ವಾಮಿ
ಗುರುಬಲ್ಲಾ ನೋಡಯ್ಯಾ ೧

ಶರೀರ ಅರ್ಥಪ್ರಾಣ ಮೂರು
ಗುರುಮೂರ್ತಿಗರ್ಪಿಸಿ ತೋರು
ದೃಢಭಾವಾ ಆತ್ಮಸುಖವೀವಾ ನೋಡಯ್ಯಾ ೨

ನರದೇಹಕ್ಕೆ ಬಂದು ನೀನು
ಇರುವಂಥಾ ಸಾರ್ಥಕವೇನು
ದೃಢ ಭಕ್ತಿಮಾಡಿ ಪಡೆ ಮುಕ್ತಿ ನೋಡಯ್ಯಾ ೩

ದೊರಕುವುದು ಪರಿಕರ ಸರ್ವಾ
ಗುರುಮೂರ್ತಿ ಸಿಕ್ಕುವುದಪೂರ್ವಾ
ಬಿಡಬೇಡಾ ವ್ಯರ್ಥ ಕೆಡಬೇಡಾ ನೋಡಯ್ಯಾ ೪

ಭಕ್ತಿಯಲಿ ಕೈವಿಡಿದು ಹೋಗು
ಭಜಿಸಿ ಜೀವನ್ಮುಕ್ತನಾಗು
ಸಾರಿದೆ ಮರ್ಮವ ತೋರಿದೆ ನೋಡಯ್ಯ ೫

ಯುಕ್ತಿಯಲಿ ಸಾಧಿಸಲು ಬೇಕು
ಇಷ್ಟೊಂದು ಸಿಕ್ಕಿದರೆ ಸಾಕು
ಚಂದದಿ ಗುರುವಿಮಲಾನಂದದಿ ನೋಡಯ್ಯಾ ೬

## ೪೫೨

ಪರಶಿವಾತ್ಮ ಲಿಂಗವೆನ್ನ ಕರತಳಾಮಳಕವಾಗಿ
ಶರೀರದೊಳಗೆ ಬೆಳಗುವುದು ಶ್ರೀ ಗುರು ವಚನದಿ ಕಂಡೆನು ಪ

ಏನು ಬೇಕು ಎನಗೆ ಇನ್ನು
ಮಾನವತ್ವ ಅಳಿದು ಸರ್ವ
ತಾನೆ ಅಂಗದಿರವೆಯಾಗಿ ಸ್ವಾನುಭವದ ಸುಖದೊಳು
ಧ್ಯಾನಿಸುತ್ತ ಒಳಹೊರಗಿಹ
ಭಾನುಕೋಟಿ ತೇಜವನ್ನು
ಮೌನಮುದ್ರೆಯಿಂದ ಗುರು ನಿಧಾನವಾಗಿ
ತೋರಿದಾ ಪರಶಿವಾತ್ಮ ೧

ಪಿಂಗಡಿಸಿದ ಷಟ್‌ಸ್ಥಳಗಳ
ಸಂಗವಿಡಿದು ಚರಿಸುತ್ತಿರಲು
ಲಿಂಗವೇ ಸರ್ವಾಂಗವಾಗಿ ಇಂಗಿತವ ತಿಳಿದವನು
ಮಂಗಲಾತ್ಮನಾದ ಶ್ರೀಗುರು
ಪುಂಗನು ಎನಗೊಲಿದು ದಿವ್ಯ
ಕಂಗೊಳಿತ್ತುಧರಣಿ ಗಗನ ಡಂಗದ ಘನಲಿಂಗವಾ ಪರಶಿವಾತ್ಮ ೨

ಒಂದರಂಕೆಯನ್ನು ಬರೆದು
ಹೊಂದಿದಷ್ಟು ಲೆಖ್ಖ ಬೆಳೆವ
ಅಂದದಂತೆ ಉಳಿದು ಅಳಿದು ನಿಂದ ನಿಜದ ನಿಲುವಿಗೆ
ಬಂಧು ವಿಮಲಾನಂದ ಶ್ರೀಗುರು
ಬಂದು ಎನ್ನ ಹೃದಯದಿ ಪರಶಿವಾತ್ಮ ೩

## ೪೫೩

ಪಾಪಿಯೆಂದೆನಲು ನಾ ತಗ್ಗೆ ಪುಣ್ಯ
ರೂಪಿಯೆಂದೆನಲು ನಾ ಹಿಗ್ಗೆ
ವ್ಯಾಪಿಸಿ ನೀ ಎನ್ನ ಕುಣಿಸಿದ ಮೇಲೆ ನಿ
ರ್ಲೇಪಿಯೆಂದರಿಯದೆ ಈ ಪರಿ ಜನರೆನ್ನ ಪ

ನುಡಿಸಿದಂತೆ ನಾ ನುಡಿವೆ ನೀ
ನಡೆಸಿದಂತೆ ನಾ ನಡೆವೆ
ಉಡಿಸಿದಂತೆ ನಾನುಡುವೆ ನೀ
ತೊಡಿಸಿದಂತೆ ನಾ ತೊಡುವೆ ಎ
ನ್ನೊಡೆಯ ಸೂತ್ರಧಾರ ನೀನೆಂದರಿಯದೆ
ಪೊಡವಿ ಜನರು ಬಾಯಿ ಬಡಿಕ ತನದೊಳೆನ್ನ ೧

ಬಿಂಬಕ್ಕೆ ಸ್ವತಂತ್ರವೇನು ತುತ್ತು
ಗೊಂಬಾತ ಉಂಬಾತ ನೀನು

ಗೊಂಬೆಯಂತಿರಲದಕೇನು ಬರಿಯ
ಸಂಭ್ರಮ ಶಬ್ದಕೆ ನಾನು
ಕಾಂಬ ಸೂತ್ರಧಾರಿ ನೀನೆಂದರಿಯದೆ
ಹಂಬಲಿಪರು ಬರಿ ಕುಂಭಿನಿ ಜನರೆನ್ನ ೨

ಭಾಗ್ಯವುಂಟೆಂದು ನಾ ಮೆರೆಯೆ ವೈ
ರಾಗ್ಯವುಂಟೆಂದು ನಾ ಜರಿಯೆ
ಯೋಗಿಗಳಿಗೆ ನಾ ಸರಿಯೇ ಯಾ
ವಾಗಲು ನಡಿಸಿದ ಪರಿಯೆ
ಈಗ ಕಾಯದ ಬರಿಯ ಡಂಬವ ಕಂಡು
ಭಾಗ್ಯವಂತನೆಂದು ಜನರು ಕೊಂಡಾಡಲು ೩

ಬರಿಯ ಸುಖವ ನಾ ತೊಟ್ಟೆ ಸರ್ವ
ಸಿರಿಯ ಹೆಡತಲೆಯೊಳಿಟ್ಟೆ
ಅರಿತರಿತು ಮಾಯದ ಲೊಟ್ಟೆ ಕಂಡು
ಬೆರಗಾಗಿ ನಂಬಿ ನಾ ಕೆಟ್ಟೆ
ಗುರು ವಿಮಲಾನಂದವರ ಮಾಂಗೀರೀಶನು
ಇರಿಸಿದ್ದಾಗೆ ನಾನಿರಬೇಕಲ್ಲದೆ ೪

## ೪೫೪

ಪ್ರಾಣಲಿಂಗ ಲಕ್ಷ್ಮಣನ ಮಂಗೀಶಾ ಪುಣ್ಯ
ಸ್ಥಾಣು ಸರ್ವಾತ್ಮಕ ನೀನೆ ಮಂಗೀಶಾ
ಮಾಣದೆನ್ನ ಕೈಪಿಡಿದು ಮಂಗೀಶಾ ಇನ್ನಾ
ರ್ಕಾಣೆ ನಿನಗೆ ಸಮನಾಗಿ ಮಂಗೀಶಾ ಪ

ಆದಿಗನಾಗಿ ಸಿದ್ಧ ಮಂಗೀಶಾ ನಿನ್ನ
ಶೋಧಿಸಿ ಕಂಡವರುಂಟೆ ಮಂಗೀಶಾ
ವೇದ ಉಪನಿಷದ ನೀನೇ ಮಂಗೀಶಾ ನಿನ್ನ
ಪಾದವ ನೆರೆನಂಬಿರುವೆ ಮಂಗೀಶಾ ೧

ರಾಮನ ವಂಶವನೊಲಿದು ಮಂಗೀಶಾ ಬಹು
ಪ್ರೇಮದಿಂದ ಸಲಹಿದಯ್ಯಾ ಮಂಗೀಶಾ
ನಾಮಕ್ಕೆ ಲಕ್ಷ್ಮಣ ಎನ್ನ ಮಂಗೀಶಾ ನೀನೇ
ಸ್ವಾಮಿಯೆಂದು ನಂಬಿದೆನು ಮಂಗೀಶಾ ೨

ನಿನ್ನ ಬಲದಿಂದ ಸರ್ವ ಮಂಗೀಶಾ ಸುಖ
ವನ್ನು ಪಡೆದೆನು ನಾನು ಮಂಗೀಶಾ
ಇನ್ನು ನಿನ್ನೊಳು ಕೂಡಿಸಿಕೊ ಮಂಗೀಶಾ ಮುಂದೆ
ಬೆನ್ನನು ರಕ್ಷಿಸಿ ಕಾಯೋ ಮಂಗೀಶ ೩

ಯಾರಿಗುಸುರಲಿ ನಾನು ಮಂಗೀಶಾ ಸರ್ವ
ಭಾರಕರ್ತೃ ನೀ ಸಲಹೋ ಮಂಗೀಶಾ
ದಾರಿಯ ತೋರಿಸೋ ಎನಗೆ ಮಂಗೀಶಾ ನಿನ್ನ
ಸೇರಿ ಬದುಕುವೆ ನಾನು ಮಂಗೀಶಾ ೪

ಏನೇನರಿಯೆನೆಲೊ ನಾನು ಮಂಗೀಶಾ ನಿನ್ನ
ಧ್ಯಾನಿಸಲೊಂದೆ ಬಲ್ಲೆ ಮಂಗೀಶಾ
ಹಾನಿ ವೃದ್ಧಿನಿನ್ನದು ಶ್ರೀ ಮಂಗೀಶಾ ಎನ್ನ
ಮಾನಾಭಿಮಾನದ ಕರ್ತೃ ಮಂಗೀಶಾ ೫

ಅರಿಕೆ ಇಲ್ಲದುಂಟೆ ನಿನಗೆ ಮಂಗೀಶಾ ದುಷ್ಟ
ಅರಿಗಳ ಮಾಯಾಜಾಲವು ಮಂಗೀಶಾ
ಸ್ಮರನ ದಹಿಸಿದಂತೆ ನೀನು ಮಂಗೀಶಾ ಅವರ
ನುರುಹಿ ತೋರೋ ಎನ್ನೊಡೆಯ ಮಂಗೀಶಾ ೬

ಬರದು ಬಿನ್ನವಿಸಿದೆ ನಾನು ಮಂಗೀಶಾ ಚಿತ್ತ
ವಿರಲಿ ಅಣುಗನ ಮೇಲೆ ಮಂಗೀಶಾ
ಸ್ಥಿರದಿ ಕುಶಸ್ಥಲವಾಸಿ ಮಂಗೀಶಾ ಶ್ರೀ
ಗುರು ವಿಮಲಾನಂದ ಚೆಲುವ ಮಂಗೀಶಾ ೭

## ೪೫೫

ಬತ್ತಿಗೆ ಹತ್ತದ ಜ್ಯೋತಿಯು ನಡು
ನೆತ್ತಿಯೊಳಿಂ ಬಿಟ್ಟು ಜತನ ಮಾಡಣ್ಣಾ ಪ

ತೈಲ್ಯವು ಸರಿಯಾಗದು ನೋಡು ಅಶುದ್ಧ
ಮೈಲಿಗೆಯಿದ್ದರೆ ಕಳದೀತು
ಕೈಲಾಸಪತಿಯ ಧ್ಯಾನವ ಮಾಡು ಬಟ್ಟ
ಬೈಲಲ್ಲಿ ಬೆಳಗಾಗುತಿದೆ ಮುಂದೆ ನೋಡು ೧

ಕತ್ತಲೆ ಬೆಳಕಲ್ಲಿ ಉಳಿಯದು ಮಾಯಾ
ಮೃತ್ಯುಪಾಶಗಳಲ್ಲಿ ಸುಳಿಯದು
ನಿತ್ಯ ನಿರ್ಮಲವೆಂಬ ಗೆಲವದು ಪರ
ವಸ್ತುವಿನೊಳಗೆ ಕೂಡಿರುವುದು ಅಣ್ಣಾ ೨

ನಿಂದಿಹ ನಿಜಕೆ ತಾ ನಿಲುವದು ಪರ
ದ್ವಂದ್ವಾಕಾರಗಳೆಲ್ಲ ಗೆಲುವದು
ಕುಂದು ದುಷ್ಕರ್ಮವ ಕೊಲುವದು ವಿಮಲಾ
ನಂದನ ಚರಣಕೆ ಸಲುವದು ಅಣ್ಣಾ ೩

## ೪೫೬

ಬಲ್ಲೆನೆಂದರೆ ನಾನೇನೇನರಿಯೆ
ಅರಿಯೆನಂದರೆ ಸ್ವಲ್ಪ ತಿಳಿದಷ್ಟು ಬಲ್ಲೆ ಪ

ಗುರುಚರಣದ ಸ್ಮರಣೆಯ ಮಾಡಿ ಬಲ್ಲೆ
ಪರ ಕಡಿಸಿ ಹೊಟ್ಟೆ ಹೊರವುದನರಿಯೆ
ಶರಣ ಜನರ ಕಂಡು ಎರಗಲು ಬಲ್ಲೆ
ಕೊರಳ ಕೊಯ್ವರ ಕಪಟವು ನಾನರಿಯೆ ೧

ಸಾಧು ಸಮಾಗಮ ಸುಖವೆಂದು ಬಲ್ಲೆ
ವಾದಿಸುವರ ಕೂಡ ಕಾದಾಡಲರಿಯೆ
ಬೋಧಾಮೃತರಸಸ್ವಾದವು ಬಲ್ಲೆ
ವೇದ ಶಾಸ್ತ್ರಂಗಳ ಓದಿ ನಾನರಿಯೆ ೨

ಶರೀರ ಸುಖವು ನಶ್ವರವೆಂದು ಬಲ್ಲೆ
ಪರಮಾತ್ಮ ತೊಲಗುವ ಪರಿಯ ನಾನರಿಯೆ
ಹರಿಹರರಿಗೆ ಭೇದವಿಲ್ಲೆಂದು ಬಲ್ಲೆ
ಗುರು ವಿಮಲಾನಂದಗೆ ಹಿಂಗಲರಿಯೆ ೩

## ೪೫೭

ಬಾರಕ್ಕಾ ನಾವಿಬ್ಬರಾಡುವಾ ಯೋಗ
ಸಾಧನವೆಂಬುದು ಮಾಡುವಾ
ತಾಮಸ ತನುಗುಣಗಳ ಬಿಟ್ಟು ಸುಜ್ಞಾನ
ಕ್ಷೀರ ಸಾಗರದೊಲಗಾಡುವಾ ಪ

ಕಳೆಗೂಡಿ ಒಳನೋಟ ನೋಡುವಾ ಅಲ್ಲಿ
ಒಳಸಭೆ ಪ್ರಭೆಯೊಳಗಾಡುವಾ
ಥಳಥಳಿಸುವ ಮೆರೆವ ಚಿದಾತ್ಮನ
ಬೆಳಕಿನೊಳ್ ಬೆಳಕಾಗಿ ಪರವಶವಾಗುವಾ ೧

ಅಂಬಾ ಚಂದನ ಗಂಧಿಯೇ ಶಾರ
ದಾಂಬಾ ಸುಪ್ರದವೇಣಿಯೇ
ಶಂಭು ಸದ್ಗುರು ಎನ್ನೊಳು ಕಡೆನೋಡೆ
ಕಂಬುಕಂಠಿನಿ ಚಲ್ವ ಕಮಲದಳಾಕ್ಷಿ ೨

ಎಂಟೆರಡು ಕದಗಳ ಕಟ್ಟುವಾ ಅಲ್ಲಿ
ಬಂಟರ ತಡೆಗಳ ಅಟ್ಟುವಾ

ಮಂಟಪವೆಂಬುದು ಮಹಾಲಿಂಗನದೆಡೆ
ಅಂತರಂಗದ ಕಾಂತೆಗಾಡುವಾ ೩

ಏರುವ ಮಂದರ ಗಿರಿಯಂತೆ ಅಲ್ಲಿ
ಭೋರೈಸುವ ಘಂಟಾ ಧ್ವನಿಯಂತೆ
ಸಾರ ಅಮೃತವುಂಡು ಕ್ಷೀರಸಾಗರಮಿಂದು
ತೋರುವ ಗುರು ವಿಮಲಾನಂದಾ ೪

## ೪೫೮

ಮಂಗೀಶಾ ಮಂಗೀಶಾ
ಮಮ ಪ್ರಾಣಲಿಂಗೇಶಾ ಶಿವಹರ ಪ

ಕುಟುಂಬ ರಕ್ಷಕ ನೀನು ಎನಗೆ
ಸಟೆಂಬ ಸ್ವತಂತ್ರವೇನು ಶಿವಹರ ೧

ರಾಮನ ಹೃದಯದಿ ನಲಿದೆ ನೀ ಬಲು
ಪ್ರೇಮದಿ ಲಕ್ಷ್ಮಣಗೊಲಿದೆ ಶಿವಹರ ೨

ಬೆಳೆಸಿದೆ ಈ ಸಂಸ್ಥಾನಾ ಇಂದಿಗೆ
ಉಳಿಸಿದೆ ಎನ್ನಭಿಮಾನಾ ಶಿವಹರ ೩

ಎನಗಿನ್ನಾವುದು ಬೇಕು ನಿನ್ನಯ
ನೆನಹಿನೊಳಿರುವದೆ ಸಾಕು ಶಿವಹರ ೪

ಕುಶಸ್ಥಲದೆಡೆಯಲಿ ನಿಂದಾ ಶ್ರೀಗುರು
ಪಶುಪತಿ ವಿಮಲಾನಂದಾ ಶಿವಹರ ೫

## ೪೫೯

ಮರ್ಮವ ತಿಳಿದವಗೆ ಈ ಕಾಯದ
ಕರ್ಮದ ಗೊಡವೆಯುಂಟೇ
ನಿರ್ಮಲಾತ್ಮಕಗೆ ಸಮರ್ಪಣೆಯೆಂಬ ಸ್ವ
ಧರ್ಮ ಮೂಲ ಮಂತ್ರ ಸೋಹಂವೆಂದೆಂಬ ಪ

ಜ್ಯೋತಿ ಹಸ್ತದೊಳಿರಲು ಕತ್ತಲೆಗೆ ಬ
ದ್ಯೋತವ ಬಯಸುವರೇ
ಪಾತಕ ಪುಣ್ಯ ಶುಭಾಶುಭವೆಂಬ ವಿ
ಘಾತಿಯಾಗುವ ಅವಧೂತ ಮಂತ್ರವೆಂಬ ೧

ಶರೀರಾತ್ಮಗ್ರಹವು ಪೂಜೆಗೆ ಸಹಜ
ಪರಿಪರಿ ವಿಷಯ ಭೋಗಾ
ನಿದ್ರೆ ಸಮಾಧಿ ಸಂಚಾರ ಪ್ರದಕ್ಷಣೆ
ನಿರುತ ಆಡುವ ವಾಣಿ ಸ್ತೋತ್ರಗಳೆಂದೆಂಬ ೨

ಬರಿದೆ ಕಾಯದ ಸುಖವು ಕರ್ಮಾ
ಕರ್ಮ ಪರಿಪೂರ್ಣಾತ್ಮಕಗರ್ಪಿಸಿ
ಗುರು ವಿಮಲಾನಂದಭರಿತನಾಗಿಹ ಮಂತ್ರೋ
ಚ್ಚರಣೆಯೊಳಿರುವುದು ದೊರಕೊಂಡನೆಂದೆಂಬ ೩

## ೪೬೦

ಮಾರಹರ ರಣಶೂರ ಶರಧಿ ಗಂ
ಭೀರ ದಯಾಸಾರ
ವಾರಿಜಾಕ್ಷ ಮುರಹರ ಸಖನಾಗಿಹ
ಚಾರುಮಹಿಮ ನಿಟಿಲಾಂಬಕ ಪರಶಿವ ಪ

ಸಿಂಧು ಮಥನದೊಳಗೆ ಕೈಲಾಸ
ದಿಂದ ಬಂದನಿಳೆಗೆ
ನಂದಿವಾಹನ ಗರಳವನೆಲ್ಲ ಭುಂಜಿಸಿ
ಕುಂದುಗೊರಳನಾಗಿಹ ತ್ರಿಪುರಾಂತಕ ಮಾರ ೧

ವ್ಯೋಮಕೇಶ ದೇವಾ ಸುಜನರ
ಸ್ತೋಮವನು ಕಾವಾ
ಕಾಮಿತಾರ್ಥ ವರಗಳನಿತ್ತು ಸಲಹುವ
ಸೋಮಶೇಖರ ಕರ್ಪೂರಧವಲಾಂಗಾ ೨

ಸುರನರೋರಗ ಪಾಲಾ ಸಜ್ಜನ
ಪೊರೆವ ಪುಣ್ಯಶೀಲಾ
ಗುರುವಿಮಲಾನಂದ ಭರಿತ ಕುಶಸ್ಥಳ
ಪುರನಿವಾಸ ಶ್ರೀ ಮಹಾಂಗಿರೀಶ ಮಹಾರುದ್ರ ೩

## ೪೬೧

ಮುದುಕನಾಗಿ ಬದುಕಿ ಫಲವೇನು ತನ್ನಯ ಪ್ರಾಣ
ಪದಕವಾ ಕಂಡರಿಯದನಕಾ ಪ

ಬದುಕಿ ಸಂಸಾರ ಸೆಲೆಯೊಳು
ಅದಕಿದಕೆಂದು ಓಡ್ಯಾಡಿ
ಮದಕೆ ಮಾಯೆಯೊಳು ಸಿಕ್ಕಿ
ಬದರಿಕೊಳ್ಳುತ್ತಿರುವಾ ಮನುಜಾ ಅ.ಪ.

ಸತ್ತು ಹುಟ್ಟು ಹುಟ್ಟು ಸಾವಿಗೆ ಅದಕೆ ತಕ್ಕ
ಉತ್ತಮ ಶ್ರೀ ಗುರುಮಂತ್ರವನ್ನು
ಚಿತ್ತದಿ ಧ್ಯಾನಿಸದೆ ಮುದಿ
ಕತ್ತೆಯಂತೆ ಧರೆಯೊಳಗೆ ವ್ಯರ್ಥವಾಗಿ ಜನಿಸಿ ಮದೋ
ನ್ಮತ್ತನಾಗಿ ಇರುವ ಮನುಜಾ ೧

ಗುರೂಪದೇಶವನ್ನು ಪಡೆಯದೆ ಸಂಸಾರವೆಂಬ
ಶರಧಿಯೊಳು ಈಸಾಡಿ ಬಳಲುತ್ತ
ಹರಿಯಧಿಕ ಹರನಧಿಕನೆಂದು ವಾದಿಸುತ್ತ
ಪರರ ಬರಿದೆ ನಿಂದಿಸಿ ಹೊಟ್ಟೆಯ
ಹೊರಕೊಳ್ಳುತ್ತಿರುವ ಮಂದ ಮನುಜಾ ೨

ಪರಿಪೂರ್ಣಾತ್ಮಕನನ್ನು ನೋಡದೆ
ಪರಾತ್ಪರ ಗುರು ವಿಮಲಾನಂದನೊಳಾಡದೆ
ಮರಗಳಲ್ಲಿ ಹಾರುವವಾ ನರನಂತೆ ಮನದೊಳು ಸಿಕ್ಕಿ
ನರಳುತ್ತ ಪ್ರಾಯವು ಹೋದ
ನರಿಯಂತೆ ಕೂಗುವ ಮನುಜಾ ೩

## ೪೬೨

ಯಾಕೆ ನೀ ಬರಿದೆ ಮೆಚ್ಚಿದೆ ಭವಹರಗೆ
ಲೋಕೇಶನೆನಿಪ ಶ್ರೀಗುರು ಸಿದ್ಧೇಶ್ವರಗೆ ಪ

ನೀ ಕಮಲಮುಖಿ ಆಋುವೈರಿಯ
ನೇಕ ಮೈಯ್ಯಾಳು ಸುತ್ತಿಕೊಂಡು ವಿ
ವೇಕವಿಲ್ಲದೆ ವಿಷವನುಂಡ ಪಿನಾಕಧರನಿಗೆ ಸೋಲುವರೆ ನೀ
ಜಗವ ಮೋಹಿಪ ಮಾನಿನೀ ಮಣಿಯೇ ಅ.ಪ.

ಶಿರದೊಳು ಶಶಿಯ ಕೆಂಜೆಡೆ ಇಹ ಜೋಗಿ
ಸ್ಮರನ ದಹಿಸಿ ಭಸ್ಮ ಹಣೆಗಿಟ್ಟ ಯೋಗಿ
ಇರುವರೆ ಸ್ಥಳವಿಲ್ಲದಂತೆ ತಾ ಪೋಗಿ
ಮೆರೆವ ಸ್ಮಶಾನ ಮಂದಿರಕನುವಾಗಿ
ಮರುಲು ಭೂತ ಪಿಶಾಚ ಯಕ್ಷರ
ನೆರವಿಯಲಿ ಕುಣಿಕುಣಿದು ಬ್ರಹ್ಮನ

ಶಿರವಿಡಿದು ತಿರಿದುಂಬ ಗೊರವಗೆ
ಬರಿದೆ ತಿಳಿಯದೆ ಜಗವ ಮೋಹಿಪ ಮಾನಿನೀ ಮಣಿಯೇ ೧

ಮಂಡೆಯೋಳ್ ಜಾನ್ಹವಿ ಶಶಿಯನ್ನೆ ಸೂಡಿ
ರುಂಡಮಾಲೆಯ ಕೊರಳೊಳಗಿಟ್ಟಪಚಾಡಿ
ಕುಂಡಲಿಗಳಾ ಧರಿಸಿರುವನ ನೋಡಿ
ಖಂಡ ಪರಶುವೆಂದು ಅವನ ಕೊಂಡಾಡಿ
ಧಿಂಡೆಯಾಗಿಹ ಪ್ರಾಯದವಳು ನೀ
ಕೆಂಡಗಣ್ಣಿನ ಕ್ರೂರರೂಪಿನ ಗಂಡನೆಂದು
ನೀನವನನೊಲಿದೆ ಪ್ರ
ಚಂಡೆ ಪಾರ್ವತಿ ಜಗವ ಮೋಹಿಪ ಮಾನಿನೀ ಮಣಿಯೇ ೨

ಕರದಿ ತ್ರಿಶೂಲ ಢಮರುಗಳ ಧರಿಸಿರುವಾ
ಕಂಚರ್ಮಾಂಬಕ ಪುಲಿದೊಗಲುಟ್ಟು ಮೆರೆವಾ
ಹಿರಿಯತನಕೆ ವೃಷಭವನೇರಿ ಬರುವಾ
ಶಿರಿಯ ಹೊಗಾಡಿ ಫಕೀರನಂತಿರುವಾ
ವಿರಚಿಸಿದ ಲೀಲಾವಿನೋದದ
ಪರತರ ಶ್ರೀ ಪ್ರಣವರೂಪನ
ಗುರುವಿಮಲಾನಂದ ತೊಟ್ಟಿದ ಗುರು ಸಿದ್ಧೇ
ಶ್ವರನೆಂದು ತಿಳಿಯದೆ ಜಗವ ಮೋಹಿಪ ಮಾನಿನೀಮಣಿಯೇ ೩

## ೪೬೩

ಯಾಚಕ ಜನ್ಮಾ ಯಾಕೆ ಬರೆದನೊ ಬ್ರಹ್ಮಾ
ನಾಚಿಕೆಯಾಗಿ ನಷ್ಟಾಗುವಂತೆ ಸ್ವಧರ್ಮಾ ಪ

ಒಡಲಾಶೆಗಾಗಿ ಹೊಲೆಯನ ಹೊಗಳಬೇಕು
ಕಡುಲೋಭಿಯಾದ ಅರಸನೋಲಗವೆ ಸಾಕು

ಬಡತನವೆಂದು ಪರರ ಸೇರುವದೆ ಸಾಕು
ಎಂದರೆನ್ನಯ ಒಡಲು ತುಂಬದು ಪರಾಕು ೧

ತ್ಯಾಗದಿ ಕರ್ಣಾ ಭೋಗದಿ ದೇವೇಂಧ್ರನೆಂದು ಕೊಂಡಾಡಲು
ಪೋಗಿ ಬಾ ನಾಳೆ ಎಂದು
ಎನುತ ಪೇಳಲಾಗಿ ಬೈದಾಡುತ ಬಂದು
ಬಳಲುತಿರಲಾಗ ಚಿತ್ತಕ್ಕೆ ತಂದು ೨

ಪೂರ್ವಜನ್ಮದ ಫಲದಿಂದೀ ಹುಟ್ಟುಸೇರಿದೆ
ಪರ್ವತವನ್ನು ಕಂಡು ಕೈತಿಕ್ಕಿ ಕೋರಿದೆ
ಬರಿದೆ ಇಂಥಾ ಗರ್ವದಿಂದುಕ್ಕಿ ಏರಿದೆ
ಗುರುವಿಮಲಾನಂದ ಸರ್ವೋತ್ತಮನ ನೆನೆಯ ಬಾರದೇ ೩

## ೪೬೪

ಯಾರಿಗುಸುರಲಿ ಸಾರತತ್ವ ವಿ
ಚಾರ ಭವದೂರಾ ಪ

ಧೀರ ಗುರುವಿನ ಚಾರು ಚರಣವ
ಸೇರಿ ಮುಕ್ತಿಯ ಸೂರೆವಿಡಿವುದಿನ್ಯಾರಿಗುಸುರಲಿ ಅ.ಪ.

ಶ್ರೀ ಗುರುನಾಥನ ಕಟಾಕ್ಷದಿ
ತ್ಯಾಗಿಸಿ ಸಂಸಾರದ ಗೊಡವೆಯ
ಯೋಗಿಯಂದದೊಳಿದ್ದು
ಆಗಮ ನಿಗಮಾರ್ಥಕೆ ಸಿಲುಕದ
ಯೋಗ ಘನವನೊಳಗೊಂಡಿಹ ಅಂಗದ
ಯೋಗಾನಂದದುಯ್ಯಾಲೆಯ ತೂಗಿ
ನೆಲೆಗೆ ನಿಂದಿಹ ನಿಜಸುಖವಿನ್ಯಾರಿಗುಸುರಲಿ ೧

ಉದರದ ನಾಭಿಯ ನೀಳದ ತುದಿ
ಹೃದಯ ವಾರಿಜದೊಳಗಿಪ್ಪ ಶಿವ
ಸದನ ಲಿಂಗವ ಕಂಡು
ಅದು ಇದು ಬೇರ್ಪಡಿಸದೆ ಹೃದಯದಿ
ಚದುರ ಸಾಧು ಸತ್ಪುರುಷರ ಮತದಲಿ
ಮುದದಿ ಮುಕ್ತಿ ಮಾನಿನಿಗೆ ಮಂಗಲ
ಮದುವೆಯಾದ ಮನಸಿನ ಮಹಾ ಗೆಲವಿನ್ನಾರಿಗುಸುರಲಿ ೨

ನೆತ್ತಿಯೊಳ್ ಹೊಳೆ ಹೊಳೆವ ಚಿದಾ
ದಿತ್ಯನ ಪ್ರಕಾಶವ ಕಂಡು
ಚಿತ್ತದಿ ನಲಿದಾಡಿ
ಉತ್ತಮಾನಂದಾತ್ಮರಸ ಸವಿ
ಯುತ್ತ ಚಪ್ಪರಿದು ಶರಣರ
ಮೊತ್ತದೊಡನೆ ಕುಣಿಕುಣಿದು ಬ್ರಹ್ಮನ
ಗೊತ್ತು ತಿಳಿದ ಗುರುತಿನ ವಿಸ್ತರವಿನ್ನಾರಿಗುಸುರಲಿ ೩

ಕುಂದುವ ಕಾಯದ ಸುಖಕೆಳೆಸದೆ
ಹೊಂದಿದ ಸರ್ವಾಂಗದ ಶೋಧಿಸಿ
ಒಂದೇ ದೇವನೊಳಾಡಿ
ವಂದಿಸಿ ಗುರುಹಿರಿಯರ ಚರಣಕೆ
ಹೊಂದಿ ಹೊಂದಿ ಓಲಾಡುವ ಅರಿಗಳ
ಬಂದಿಯೊಳಗೆ ಸಿಲುಕದೆ ಬ್ರಹ್ಮಾ
ನಂದರಸಾಮೃತ ಸವಿದಿಹ ಸುಖವಿನ್ನಾರಿಗುಸುರಲಿ ೪

ಹಲವು ಯೋನಿಯೊಳಗೆ ಹೊರಳ
ಕುಲ ಛಲ ಶೀಲವ ಮೂರಡಗಿಸಿ
ಸುಲಭ ವಂಶದೊಳುಂಡು
ಮಲಿನ ಮಾಯಾಮೋಹಕೆ ಸಿಲುಕದೆ
ಬಲೆಯ ಛೇದಿಸಿ ಮುಕ್ತಾಂಜ್ಯದ ಬಗೆ ಇನ್ನಾರಿಗುಸುರಲಿ ೫

## ೪೬೫

ರಕ್ಷಿಸೋ ವರದಯ್ಯನ ಕಣ್ಣಿಗೆ
ಸುಕ್ಷೇಮದಿ ದೃಷ್ಟಿಯಪ್ಪಂತೆ
ದಕ್ಷಿಣ ಕಾಶಿಯೆಂದೆನಿಪ ಕುಡುಮಪುರಾ
ಧ್ಯಕ್ಷನಾದ ಶ್ರೀ ಮಂಜುನಾಥ ದೇವಾ ಪ

ನಿನ್ನಡಿಸೇವೆಯ ಮಾಳ್ಪರಿಗೀಪರಿ
ಬನ್ನ ಬಡಿಸುವುದುಚಿತವೇ
ತನ್ನ ಮಕ್ಕಳು ತಪ್ಪಿ ನಡೆದರೆ ತಾಯ್ತಂದೆ
ಮುನ್ನ ಮರುತು ಸಲಹುವ ಪರಿಯಲಿ ಮುಂದೆ ೧

ಬುದ್ಧಿಯಾಗಿರಲೆಂದು ಮಾಡಿದರೇನು
ಉದ್ಧರಿಸುವದನು ಮಾನವೆ
ಸದ್ಯದಿ ದೃಷ್ಟಿಯಪ್ಪಂತೆ ನಿನ್ನೊಳ
ಗಿದ್ದ ಮಹಾತ್ಮರೊಂದಾಗಿ ಮೋಹದಿ ಬೇಗ ೨

ಮೋಡದ ರವಿ ಮೂಡುವಂದದಿ ದಯ
ಮಾಡುವ ಭಾರವು ನಿನ್ನದು
ರೂಢಿಯೊಳಧಿಕ ಶ್ರೀವರ ಮಂಜುನಾಥೇಶ
ಗಾಢದಿಂದಲಿ ವರದಯ್ಯ ಹೆಗಡೆಗೆ ೩

## ೪೬೬

ಶರಣು ಹೊಕ್ಕೆನು ಶಿವನ
ತೋರಯ್ಯಾ ಸದ್ಗುರುರಾಯಾ ಪ

ಅಂಗದ ಮೇಲೆಯು ಲಿಂಗದಂತಿಹುದೆಂದು
ಮಂಗಲಾತ್ಮನ ತಿಳಿಯುವದೀನ್ಯಾಯಾ ಸದ್ಗುರುರಾಯಾ ೧

ದುನಿಯಾಕೇ ಬೀಚಮೊತುಮ್ ಬಡೇ ಸಾಬ
ಮನಮೊರೆ ಸಾಬ ತುಮ್‌ಆಯಾ ಸದ್ಗುರುರಾಯಾ ೨

ಜಮ ನಮೋ ಸ್ಥಲಮೋ ಎಕದಿಸತಹೈ
ರಮತರಡೇ ಮೋರಾ ಪೀಯಾ ಸದ್ಗುರುರಾಯಾ ೩

ಪರಮಾತ್ಮಾ ಪಿವಳಾ ಕೀಂ ಧವಳಾ ಮೀ ನೇಣೇ
ಗುರುನಾಥಾ ಪಡೇನ ತುರ್ಝ್ಯಾ ಪಾಯಾಂ ಸದ್ಗುರುರಾಯಾ ೪

ವರ ಸಚ್ಚಿದಾನಂದ ಬ್ರಹ್ಮದಿಂದೆಸೆವ
ಗುರುವಿಮಲಾನಂದಾ ಪ್ರಿಯಾ ಸದ್ಗುರುರಾಯಾ ೫

## ೪೬೭

ಶ್ರೀ ಗುರುಮಹಾರಾಯಾ ದಮ್ಮಯ್ಯ ನಿನ್ನ ಪಾದಕೆ ಬಿದ್ದೆನು
ನಿರ್ಮಲ ನಿತ್ಯಾನಂದದೊಳಿಹಪರ ಬ್ರಹ್ಮವ
ತೋರಿಸೋ ಶ್ರೀ ಗುರುನಾಥಾ ಪ

ತೋರುವ ತೋರಿಕೆಗಳೆಲ್ಲವ ಹಿಂಗಿಸೋ ಷಡ್ವೈರಿಗಳಾಗಿಹ
ಚೋರರ ಬಾಧೆಯ ಬಲವನು ಭಂಗಿಸೋ ತತ್ವಾಮೃತ
ಸಾರ ನಿತ್ಯಸುಖದೊಳನ್ನ ನಿಲ್ಲಿಸೋ ೧

ನೋಡದಿರುವ ನೋಟವ ನೋಡಿಸೋ
ಅಮೃತಾನ್ನವ ಮುಂದಿಡೋ
ಜೋಡಾಗದ ಊಟವನ್ನುಣ್ಣಿಸೋ ನವನೂತನವಾಗಿಹ
ಆಡದಿರುವ ಆಟವಾಡಿಸೋ ನಿನ್ನರ್ಚನೆ ಪೂಜೆಯ
ಮಾಡುವಾನಂದವುದಯ ಮಾಡಿಸೋ ೨

ಚರಣತೀರ್ಥ ಪ್ರಸಾದವನು ಕೃಪೆಮಾಡೋ ಸಜ್ಜನರಾ
ಸ್ಮರಣೆಯ ಕರ್ಣಾಭರಣವ ನೀಡೋ ನಾನಾಮೃತದ
ಚರಣ ರಜಪ್ರಕಾಶದೊಳಿಡೋ ವಿಮಲಾನಂದ
ಕರುಣಾಕಟಾಕ್ಷದ ವಿಧಿ ನೋಡೋ ೩

## ४६८

ಶ್ರೀಗುರುವಿಟ್ಟಂತಿರಿರೋ ವ್ಯರ್ಥಸ್ಯ ಭ್ರಮೆಗೊಳ್ಳಬೇಡೋ ಪ

ಕೊಟ್ಟರೂಟವ ಮಾಡಿ ಕೊಡದಿದ್ದರವನ ಪಾಡಿ
ಸಿಟ್ಟಾಗಿ ಶಿವನ ಬೈಬೇಡೋ ೧

ಸಂತೆಯ ಕೂಟವಿದು ಸಟೆಯ ಸಂಸಾರವಿದು
ಅಂತರಾತ್ಮನ ಧ್ಯಾನಿಸುವನೇ ಸಾಧು . ೨

ಯಾರಿಗೆ ಯಾರಿಲ್ಲಾ ನರದೇಹ ಸ್ಥಿರವಲ್ಲಾ
ವಸ್ತು ಮೀರಿದ ಬಳಿಕ ಇರಲಿಲ್ಲಾ ೩

ಒಂದೇ ಜನ್ಮದ ನಂಟು ಸುಖದುಃಖಕ್ಕೊಂದೇ ಗಂಟು
ಸಂದೇಹವಿಲ್ಲ ಕೊಟ್ಟ ಋಣ ಉಂಟು ೪

ವರಮಂಗೀಶಾತ್ಮಾರಾಮಾ ಇರಿಸಿದಂತಿರುವ ನೇಮಾ
ಗುರು ವಿಮಲಾನಂದ ಸುಖಧಾಮಾ ೫

## ४६೯

ಶ್ರೀ ಗುರುವಿನ ಮನೆಯ ಮುಂದಣ ಬಾಗಿಲ ಕಾಯ್ದಿರುವೆ ಪ

ತ್ಯಾಗಿಸಿ ಸಂಸಾರಾ ಶ್ರೀ ಗುರುವಿನ ಯೋಗಾಸನವಹೆನು ಅ.ಪ.

ಗುರುವಿನ ಮನೆಯ ಮಜ್ಜನಮದಕವ
ಕೊಪ್ಪರಿಗೆಯಾಗಿಹೆ ನಾನು
ಗುರುವಿನ ಚರಣವ ತೊಳೆದ ತೀರ್ಥದ
ಜಲಹರಿಯಾಗಿಹೆ ನಾನು
ಗುರುವಿನ ಚರಣಾಲಂಕರಿಸುವ ಕೇತಕಿ ಗರಿಯಾಗಿದೆ ನಾನು
ಗುರು ಮಂತ್ರವನುಚ್ಚರಿಸಿ ಜಪಿಸುವ ಸರವಾಗಿಹೆ ನಾನು ೧

ಗುರುವಿನ ಕೊರಳೊಳಗಿಹ ರುದ್ರಾಕ್ಷದ ಸರವಾಗಿಹೆ ನಾನು
ಗುರುವರ ಫಣೆಯೊಳಗಿಡುವ ವಿಭೂತಿಯ
ಭರಣಿಯಾಗಿಹೆ ನಾನು
ಗುರುಬೋಧಾಮೃತ ಭರಿತವಾಗಿಹ ಘಟ ಪರಿಯಾಗಿಹೆ ನಾನು
ಗುರುವಿನ ಭುಂಜಿಸಿ ಮಿಕ್ಕ ಪ್ರಸಾದಕೆ ಗುರಿಯಾಗಿದೆ ನಾನು ೨

ಸುಗುಣ ಶ್ರೀಗುರು ಪದಯುಗಗಳಿಗೆ
ನಡೆವ ಹಾವಿಗೆಯಾಗಿಹೆ ನಾನು
ಮಿಗೆ ನಿರ್ಮಲದೊಳು ಪವಡಿಸುತ್ತಿಹ ಹಾಸಿಗೆಯಾಗಿಹೆ ನಾನು
ಬೊಗಳಲು ಸಾಕಿದ ನಾಯಿಯಂದದಿ
ಹೊರಜರುಲಿಯ ಸಾರಿಹೆ ನಾನು
ಜಗದೀಶ್ವರ ವಿಮಲಾನಂದ ಗುರುವಿಗೆ ಮಗನಾಗಿಹೆ ನಾನು ೩

## ೪೭೦

ಸಾವಾತ ನಾನಲ್ಲಾ ಸಾವು ಮೊದಲೆನಗಿಲ್ಲಾ
ಜೀವಗುಣವಳಿದಾತ್ಮ ಯೋಗಿ ತಾ ಬಲ್ಲಾ ಪ

ಧರೆಯೆನಿಸಿ ದೊರೆಯಾಜ್ಞೆಯೊಳಾಳುತಿಹೆ ನಾನು
ವರಮಂತ್ರಿಯಾಗಿ ವರ್ತಿಸುವವನೆ ನಾನು
ಕರಣಿಕರ ತೆರದಿ ಲೆಕ್ಕವ ನೋಡುತಿಹೆ ನಾನು
ಪರಿವಾರವಾಗಿ ಓಲೈಸುವವನೆ ನಾನು ೧

ಕರಿತುರಗ ರೂಪಿನಲಿ ಎನಗೆ ವಾಹನ ನಾನು
ಹೊರುವಾತ ನಾನು ಹೊತ್ತಂತಿರುವೆ ನಾನು
ಹರಿನಾಮ ಹರನಾನು ನರನಾನು ಸರ್ವವೀ
ಪರಿಯೊಳಗೆ ಮೆರೆದು ವಿಸ್ತರಿಪೆ ನಾನು ೨

ಅಣುರೇಣು ತೃಣಕಾಷ್ಠ ಭರಿತನಾಗಿಹೆ ನಾನು
ಗಣನೆಯಿಲ್ಲದ ಗುಣವ ತೋರ್ಪೆ ನಾನು
ಉಣಲಿಕ್ಕುವವ ನಾನು ಉಂಡು ತೃಪ್ತಿಪೆ ನಾನು
ರಣನಾನು ರಣವ ಗೆಲುವಾತ ನಾನು ೩

ಭೂಮಿಯಾಗಿಹೆ ನಾನು ಬೆಳೆವ ಬೆಳೆಯೇ ನಾನು
ಸೋಮ ಸೂರ್ಯಾಗ್ನಿ ವಾಯುಗಳೆ ನಾನು
ನಾಮರೂಪಾತೀತ ವಸ್ತುವಾಗಿಹೆ ನಾನು
ಕಾಮಿನಿಯರಾಗಿ ಕಾಮಿಸುವವನೆ ನಾನು ೪

ಒಲಿವಾತನೇ ನಾನು ಒಲಿದರಗಲೆ ನಾನು
ಕೊಲಿಸಿಕೊಂಬುವೆ ನಾನು ಕೊಲುವಾತ ನಾನು
ಸುಲಭದಿಂದಲಿ ಜ್ಞಾನ ಫಲವಿಕ್ಕುವವ ನಾನು
ಚೆಲುವ ವಿಮಲಾನಂದ ಗುರುರಾಯ ನಾನು ೫

## ೪೭೧

ಸಾರಿ ಹೇಳಿದೆ ಮೂರು ಬಾರಿ ಮನ
ಬಾರದಿದ್ದವರು ದೂರಿದರೆನ್ನ ದೂರಿ ಪ

ನರದೇಹವಿದು ನಂಬಬೇಡಿ ಭವ
ಶರಧಿಯ ದಾಟಲುಪಾಯವ ಮಾಡಿ
ಎರವಿನ ತನುವನು ನೋಡಿ ಶ್ರೀ
ಗುರುವಿನ ಚರಣಕ್ಕೆ ಶೆರಗೊಡ್ಡಿ ಬೇಡಿ ೧

ಗುರುವಿನಿಂದಧಿಕ ದೈವವಿಲ್ಲಾ ಇದ
ನರಿಯದೆ ಕೆಡುವರು ಪ್ರಾಣಿಗಳೆಲ್ಲಾ
ಅರಿತ ಸುಜ್ಞಾನಿಯೆ ಬಲ್ಲಾ ಉಪ
ಕರಿಸಿ ಪೇಳುವೆನು ಕೇಳಿರೋ ಎನ್ನ ಸೊಲ್ಲಾ ೨

ಸರಸಿಜೋದ್ಭವನ ಕೈಮಾಟಾ ಚೆಲ್ವ
ಗಿರಿಜಾರಮಣನ ಸೂತ್ರದ ಗೊಂಬೆಯಾಟಾ
ಬರಿದೆ ವಿಷ್ಣು ಮಾಯಾಕಾಟಾ ಶ್ರೀ
ಗುರುವಿಮಲಾನಂದ ಹೇಳಿದ ಪಾಠಾ ೩

## ೪೭೨

ಹುಡುಕಿ ನೋಡೆಲೋ ನಿನ್ಯಾರೆಂದು ಧೃಢಚಿತ್ತಕೆ ತಂದು ಪ

ಎಲು ಚರ್ಮ ಮಾಂಸ ತುಂಬಿದ ಗೂಡು
ಮಲಮೂತ್ರದ ಬೀಡು
ಹೊಲೆಯ ಸಂಸಾರದೊಳೀಡು ಗುರುಚರಣಕೆ ಕೂಡು ೧

ಏಸು ದುರ್ಗಂಧದೊಳು ನೀ ಬೆಳಿದೆ ಸೂತಕದಿಂದಿಳಿದೆ
ಆಶಾಪಾಶದಲಿ ದಿನವನು ಕಳೆದೆ ಮಾಯೆಯೊಳು ಸಳಿದೆ ೨

ಅಂತರಾತ್ಮನ ನೆಲೆಯ ಹುಡುಕು ಇದಕ್ಯಾತಕೆ ತುಡುಕು
ಶಾಂತ ಶ್ರೀ ವಿಮಲಾನಂದನ ಹುಡುಕು ಅಜ್ಞಾನವ ಬಿಡುಕು ೩

## ೪೭೩

ಹೂವಾ ಕೊಟ್ಟಳು ಮಹಾದೇವಿ ಮೂಕಾಂಬಾ
ಭೂಪವರ ಬಸವ ನೃಪನ ಭಾವಭಕ್ತಿಗೆ ಒಲಿದು ಪ

ತನ್ನ ಮಗನೆಂಬ ತಾತ್ಪರ್ಯದಲಿ ಕೈವಿಡಿದು
ಮನ್ನಿಸುವೆನೆನುತ ಮೋಹದಲಿ ಕರೆದು

ಅನ್ಯ ವೈರಿಗಳ ಜಯಿಸೆಂದು ಅಭಯವನಿತ್ತು
ಚೆನ್ನಾಗಿ ಸಾಮ್ರಜ್ಯ ಪದವಿಯನನುಭವಿಸೆನುತಾ ೧

ದೃಢಭಕ್ತಿವಿಡಿದು ತನ್ನಡಿಗಳನು ಪೂಜಿಸಲು
ಒಡನೊಡನೆ ಬಂದು ಭೂಮಿಪನ ನೋಡಿ
ಪಡುಗಡಲ ಒಡೆಯ ಬಾರೆಂದು ನಂಬಿಗೆಯನ್ನು
ಕೊಡುವ ತೆರದಲಿ ವಿಶ್ವದೊಡತಿ ತನ್ನಯ ಬಲದ ೨

ಇಂದು ರವಿಗಳು ಇರುವ ಪರಿಯಂತ ನೃಪನೇನಿಸಿ
ಚಂದದಿಂದಲಿ ವಿಮಲಾನಂದವಾಗಿ
ಎಂದೆಂದು ಸ್ಥಿರದಿ ಬಾಳೆಂದು ಬಸವೇಂದ್ರನಿಗೆ
ಇಂದೀವರಾಕ್ಷಿ ಕೊಲ್ಲೂರ ಮೂಕಾಂಬಾ ೩

## ೪೭೪

ಹೆಚ್ಚುಕಡಿಮೆಯೆಂದು ಹೆಣಗಾಡಬೇಡಿ
ಸಚ್ಚಿದಾನಂದ ಬ್ರಹ್ಮನ ಗುಟ್ಟು ನೋಡಿ ಪ

ಪರಮಾತ್ಮ ಕಾಯದೊಳಿರುತಿರ್ಪತನಕಾ
ಪರಿಪರಿ ಹೆಸರಿಂದ ಕರಿವರು ಅನಕಾ
ಶರೀರ ಭೋಗವ ತೀರಿಸಿಕೊಂಡು ಹೋಹಾಗೆ
ಲ್ಲರಿಗೊಂದೆ ಪೆಸರಿಂದ ಕರೆಯುವರಾಗಾ ೧

ಅರಸು ಮಂತ್ರಿ ಕರಣೀಕ ತಳವಾರಾ
ಮೆರೆವ ಪಾಠಕ ಕವಿ ಶಾಸ್ತ್ರಿ ಉದಾರಾ
ಪರಿಯ ನಾಮಗಳಿಂದ ಉಪಾಧಿಯೋಗಾ
ಪರಮಾತ್ಮ ತೊಲಗಲು ಹೆಣವೆಂಬರಾಗಾ ೨

ಪರಮಾತ್ಮನಾಟದ ಲೀಲೆ ಇದೆಲ್ಲಾ
ಗುರುಪುತ್ರನಾದ ಮಹಾತ್ಮನೆ ಬಲ್ಲಾ
ಗುರು ವಿಮಲಾನಂದ ಶರಧಿಯೊಳಾಡಿ
ಹಿರಿದು ಕಿರಿದು ಯಾವಲ್ಯುಂಟೆಂದು ನೋಡಿ ೩

## ಮಂಗಳ ಪದ್ಯಗಳು

### ೪೭೫

ಜಯ ಜಯ ಶ್ರೀ ಮಹಾಕಾಳಿ ಗೋಕರ್ಣೆ
ಮಹಾಬಲ ಪೂಣ್ಯವಧು
ಭಯವಿರಹಿತ ಭವನಾಶಿನಿ ಸುಲಲಿತೆ
ಭಕ್ತ ಜಿಹ್ವಾಗ್ರ ಮಧು ಪ

ಪರಮೇಶ್ವರಿ ಪರಿಪೂರ್ಣಾಂಬಿಕ ನಿಜ
ಪರಮಾನಂದ ಪರೇ
ಪರತರವಸ್ತು ಪರಾತ್ಪರ ಶಾಂಭವಿ
ಸುರಮುನಿ ಅಭಯಕರೇ ಜಯಜಯ ೧

ವೀಣಾ ಪುಸ್ತಕಧಾರಿಣೆ ಅಗಣಿತ
ಪಾನಪಾತ್ರಪ್ರಿಯೇ
ವಾಣಿನಿತ್ಯಕಲ್ಯಾಣಿ ವಂದಿತಗುಣ
ಶ್ರೇಣಿ ಮುನೀ ಸಾಹ್ಯೇ ಜಯಜಯ ೨

ಹರಿಮೋಹಿನಿ ಹರಿವಾಹಿನಿ ಗಿರಿಸುತೆ
ಹರಿಣಾಂಕಿಣಿ ಭವ್ಯಮುಖಿ
ಹರಿಹರ ಅಜತ್ರಯ ಶಕ್ತಿ ಸ್ವರೂಪಿಣಿ
ಹರಿಸಖಿ ಪ್ರಾಣಸಖೇ ಜಯಜಯ ೩

ಸರ್ವಗುಣನಿಲಯೇ ಸರ್ವಾತ್ಮಕಿ
ಸರ್ವಯಂತ್ರರೂಪೇ
ಶರ್ವಾಣಿ ಸರ್ವೇಶ್ವರಿ ಸದಾಶಿವೇ
ಸರ್ವ ಮಂತ್ರರೂಪೇ ಜಯಜಯ ೪

ಮೂಲಾಧಾರೇ ಮುಕುಂದಾರ್ಚಿತ ಪದ
ಬಾಲಾ ತ್ರಿಪುರಹರೇ
ಮಾಲಿನಿ ಮಂತ್ರಾತ್ಮಕಿ ಮಹಾದೇವಿ ತ್ರಿ
ಶೂಲಿನಿ ಶಶಿಶಿಖರೇ ಜಯಜಯ ೫

ನಿತ್ಯಾರ್ಚನಿ ಸುಖಭೋಗಿನಿ ಸುಲಲಿತೇ
ನಿತ್ಯಾನಂದಮಯೇ
ನಿತ್ಯಾನಿತ್ಯ ಸ್ವರೂಪಿಣಿ ನಿರ್ಗುಣೆ
ಸತ್ಯ ಸಾಧು ಹೃದಯೇ ಜಯಜಯ ೬

ಶಂಭಾಸುರಮಹಿಷಾ ಸುರಮೋಕ್ಷಕ
ದಂಬ ಮುಕುಟಧರೇ
ಅಂಬಾ ಶ್ರೀ ಮಹಾಕಾಳಿ
ವಿಮಲಾನಂದ ಸುಖ ಶರೀರೇ ಜಯ ಜಯ ೭

ಇತಿ ಶ್ರೀ ಮಹಾಕಾಳ್ಯಷ್ಟಕ ಸ್ತೋತ್ರಂ
ತ್ರಿಕಾಲಪಠತೆ ನಿತ್ಯಂ ನಿತ್ಯಂ
ನತಿಸುತಧನ ಪೌತ್ರಾದಿ ಕೃತಾರ್ಥಂ
ಭವತಿ ಸತ್ಯಂ ಸತ್ಯಂ ಜಯಜಯ ೮

## ೪೭೬

ಜಯದೇವ ಜಯದೇವ ಜಯಮಹಾಂಗಿರೀಶಾ
ಸ್ವಯಂಜ್ಯೋತಿ ಬೆಳಗುವೆ ಸಚ್ಚಿತ್ಸುಖತೋಷಾ ಪ

ಸರ್ವರಲಿ ನೋಡಿದರೂ ನೀನಲ್ಲದೆ ಇಲ್ಲಾ
ಉರ್ವಿಯಾಕಾಶ ದಶದಿಕ್ಕುಗಳೆಲ್ಲಾ
ಸರ್ವೇಶ್ವರವೆಂಬದು ಸರ್ವಾಂಗದೆಲ್ಲಾ
ಪಾರ್ವತೀಶ್ವರನೆಂಬುದು ಬಲ್ಲವನೆ ಬಲ್ಲಾ ಜಯದೇವ ೧

ಸಕಲ ಸುಖದುಃಖವೆಂಬುದು ನಿನ್ನ ಲೀಲೆ
ಅಖಿಲ ಅಂಡಗಳೆಂಬ ಭೋಜನಶಾಲೆ
ಭಕುತಿ ಭಾಗ್ಯೆಂಬ ಜ್ಞಾನದ ದೀಪಜ್ವಾಲೆ
ಪ್ರಕಟಿಸುವಂತೆ ಎತ್ತುವೆ ನಿನ್ನ ಮೇಲೆ ಜಯದೇವ ೨

ಪರಿಶುದ್ಧಾತ್ಮಕದೇವಾ ನಿರುತ ನಿರ್ದೋಶಾ
ಸಕಲಜನರ ಹೃದಯಕಮಲ ನಿವಾಸಾ
ದುರಿತದಾರಿದ್ರ್ಯ ಭವದುಃಖವಿನಾಶಾ
ಗುರು ವಿಮಲಾನಂದ ಶ್ರೀ ಮಹಾಂಗಿರೀಶಾ ೩

# ಅನುಬಂಧ–೧

## ಕಠಿಣ ಶಬ್ದಗಳ ಅರ್ಥ

### ಅ

ಅಂಘ್ರಿ – ಪಾದ
ಅಂಡ – ವಿಶ್ವ
ಅಂಸ – ಹೆಗಲು
ಅಗರು – ಸುಗಂಧದ್ರವ್ಯ
ಅಗಳ – ಅಗಳ ಭಂಜನೆ
ಅಘ – ಪಾಪ
ಅಜ – ಬ್ರಹ್ಮ
ಅಜದಿತ – ವಿಷ್ಣು
ಅಭ್ಯು – ಅಡಿಗೆಮಾಡು
ಅಣಿ – ಸಿದ್ಧತೆ
ಅಧೋಕ್ಷಜ – ವಿಷ್ಣು
ಅಭ್ಯು – ಅಡಿಗೆಮಾಡು
ಅಣಿ – ಸಿದ್ಧತೆ
ಅಧೋಕ್ಷಜ – ವಿಷ್ಣು
ಅನುಕಟ್ಟಿ – ಸರಿಯಾಗಿಕಟ್ಟಿ
ಅರ್ಭಕತ್ವ – ಮಗುತನ
ಅವಿನಾಶ – ನಾಶವಿಲ್ಲದ್ದು
ಅಸಿ – ಖಡ್ಗ
ಅಹಂ – ನಾನು

### ಆ

ಆದ್ಯ – ಬಲಿಷ್ಠ
ಆನನ – ಮುಖ
ಆರಾನುನಿಗ್ರಹ – ಇಂದ್ರಿಯ ಸುಖ ನಿಗ್ರಹಿಸಿದವ
ಆನಂದಮಯ – ಭಗವಂತ ಸದಾಕಾಲದಲ್ಲಿಯೂ ಆನಂದಮಯನಾಗಿರುತ್ತಾನೆ

### ಇ

ಇಂದೀವರ – ಲಕ್ಷ್ಮೀಯೊಡನಿರುವವನು
ಇಂದ್ರದ್ಯುಮ್ನ – ಶ್ರೀಕೃಷ್ಣನಿಂದ ಹತನಾದ ಒಬ್ಬ ಕ್ಷತ್ರೀಯ
ಇನ – ಸೂರ್ಯ

### ಉ

ಉತ್ತಾನಪಾದ – ಸ್ವಯಂಭು ಮನುವಿನ ಕಿರಿಯಮಗ

ಉಪಾಧಿ - ತೊಂದರೆ
ಉರ - ಎದೆ
ಉರಗ - ಸರ್ಪ

**ಋ**

ಋಕ್ಷಿರಸುತ - ಕೌಶಿಕ

**ಎ**

ಎಂಟು ಮೈಯವನು - ಭವ, ಶರ್ವ, ಈಶಾನ, ಪಶುಪತಿ, ಭೀಮ, ಉಗ್ರ, ಮಹಾದೇವ, ರುದ್ರ, ಈ ಹೆಸರಿನ ಶಿವನ ಮೂರ್ತಿಗಳು.

**ಏ**

ಏಣನಯನೆ - ಜಿಂಕೆಯ ಕಣ್ಣಿನಂತೆ ಚಂಚಲ ಕಣ್ಣುಳ್ಳವಳು.

**ಕ**

ಕಂದರ - ಕುತ್ತಿಗೆ
ಕಂಬು - ಶಂಖ
ಕನಕಾಸುರ - ಹಿರಣ್ಯಕಶಪು
ಕಾಲಹತ್ಯವಾದ - ಕಾಲಾಗ್ನಿ
ಕಾಷ್ಠ - ಕಟ್ಟಿಗೆ
ಕಿಂಕಿಣಿ - ಗೆಜ್ಜೆ
ಕಿನ್ನರ - ಕುಬೇರನ ಪ್ರಜೆ ಮನುಷ್ಯ ದೇಹ ಮತ್ತು ಕುದುರೆಯ ಮುಖವುಳ್ಳ ದೇವತೆ.
ಕಿಂಪುರುಷ - ಹಿಮಾಲಯದ ಉತ್ತರ ದಿಕ್ಕಿನಲ್ಲಿದ್ದ ಒಂದು ಖಂಡ ಅಗ್ನೀಂದ್ರ ರಾಜನ ಮಕ್ಕಳಲ್ಲೊಬ್ಬ
ಕುಕ್ಕುಟ - ಕೋಳಿ
ಕುಕ್ಷಿ - ಹೊಟ್ಟೆ

**ಖ**

ಖರದೂಷಣ - ರಾವಣನ ಬಲತಾಯಿ ಮಕ್ಕಳು ಶೂರ್ಪಣನ ಸೋದರ

**ಗ**

ಗಂಧವಾಹ - ವಾಯು
ಗದ್ಯಾಣ - ನಾಣ್ಯ
ಗುರು - ಗಾಸಿ
ಗುರು ವಾಸುದೇವಾರ್ಯ - ನಾರಾಯಣದಾಸರ ತಂದೆ ತಿಮ್ಮಪ್ಪದಾಸರು ಅವರ ಪಿತಾಮಹ ವಾಸುದೇವಾರ್ಯರು.
ಗೋಧತತ್ವ - ರಹಸ್ಯಮಯ ಅದ್ವೈತ ತತ್ವ

ಗೋವರ್ಧನ – ಯಮುನಾತೀರದ ಪರ್ವತ ಗೋಪಾಲಕರ ಗುಂಪುಗಳಿಗೆ ಹುಲ್ಲನ್ನು ಒದಗಿಸುವ ಪರ್ವತ. ಶ್ರೀ ಕೃಷ್ಣ ಈ ಪರ್ವತವನ್ನು ಹಿಡಿದು ಗೋವುಗಳನ್ನು ರಕ್ಷಿಸಿದನು.

## ಚ

ಚಂಚರಿತ – ದುಂಬಿ
ಚಂದ್ರಜೂಟ – ಈಶ್ವರ
ಚಾರು – ಮನೋಹರ
ಚಿದಂಬರ – ಮನೋಹರ
ಚುಳಕ – ಬೊಗಸೆ

## ಜ

ಜಂಭವೈರಿ – ಇಂದ್ರ
ಜಾಂಭವ – ಕರಡಿಗಳ ರಾಜ
ಜಗರ – ಎಚ್ಚರದ ಸ್ಥಿತಿ
ಜಲಧಿ – ಸಮುದ್ರ
ಜಾಹ್ನವಿ – ಗಂಗೆಯ ಮತ್ತೊಂದು ಹೆಸರು
ಜೀಮೂತಿ – ಶ್ರಾವಂತಿ
ಜಿಜ್ಞಾಸು – ವಿಚಾರ ಮಾಡುವಾತ
ಜೂಟ – ಜಡೆ

## ಠ

ಠಾಣ – ಸ್ಥಳ

## ಡ

ಡಿಂಗಡಿಗ – ಸೇವಕ

## ಢ

ಢಾಳಿ – ಕಾಂತಿ

## ತ

ತನುಮೂರರ ಸಕ್ಷಿ – ಪರಮಾತ್ಮ
ತಂಬೂರ – ಕಶ್ಯಪ ಮತ್ತು ಅರಿಷ್ಟೆಯರ ಮಗನಾದ ಗಂಧರ್ವ
ತರಂಗ – ಅಲೆ
ತಿಮಿರ – ಕತ್ತಲೆ
ತೇಜ – ತೇಜಸ್ಸು
ತ್ರ್ಯಕ್ಷ – ಮೂರುಕಣ್ಣುಳ್ಳವನು (ಸೂರ್ಯ, ಚಂದ್ರ, ಅಗ್ನಿ)
ತ್ರಿಪುರ – ಕಬ್ಬಿಣಬಳ್ಳಿ, ಚಿನ್ನದ ಸರ
ತ್ರಿವಳಿ – ಹೊಕ್ಕಳ ಕಳಗಿನ ಕೂದಲು
ತ್ರೈವಾಣಿ – ವೇದವಾಣಿ

## ದ, ಧ

ದಾನನಾಂತಕ – ಕೃಷ್ಣ
ದ್ವಿಜ – ಬ್ರಾಹ್ಮಣ
ದ್ವಿಪ – ಆನೆ
ದುಗ್ಗಾಣಿ – ಎರಡುಆಣೆ

ದುರಿತ - ಪಾಪ

ದೂರ್ವಾಸ - ಅತ್ರಿಯಮಗ, ಕುಂತಿಗೆ ಬಾಲ್ಯದಲ್ಲಿ ಮಂತ್ರಗಳನ್ನು ಉಪದೇಶಿಸಿದವನು

ಧೃವ - ಉತ್ತಾನಪಾದನ ಮಗ

## ನ

ನರ ಅರ್ಜುನ - ನಾರಾಯಣನ ಸೋದರ

ನಾಳಿಕಾನನ - ಕಮಲಮುಖ

ನಿಕಾಯ - ಗುಂಪು

ನಿಕುರಾಂಬಿ - ಗುಂಪು

ನಿಗಮ - ಶಾಸ್ತ್ರ

ನಿರ್ಗುಣಮೂರ್ತಿ - ಪರಶಿವ

ನೀರಜಭವ - ಬ್ರಹ್ಮ

ನೀರಜಾಕ್ಷ - ವಿಷ್ಣು

ನೆಗಳು - ಮೊಸಳೆ

## ಪ

ಪಕ್ಷೀಂದ್ರ - ಗುರುಡ

ಪನ್ನಗ - ಸತ್ಯ

ಪರಾನಂದ - ಪರಮಾತ್ಮ

ಪರೀಕ್ಷಿತ - ಚಂದ್ರವಂಶದ ಅನುಶುಷನಮಗ

ಪಶುಪತಿ - ಶಿವ

ಪಿತೃಗ - ದುಂಬಿ

ಪುಂಗ - ಶ್ರೇಷ್ಠ

ಪುರಹರ - ತ್ರಿಪುರಗಳನ್ನು ಕಟ್ಟಿವವ

ಪುತ್ಥಳಿ - ಸ್ವರ್ಣಗೊಂಬೆ

ಪುರಹರ - ಶಿವ

ಪೆಂಡಾರ - ದರೋಡೆಕಾರ

## ಫ

ಫಣಿ - ಸರ್ಪ

## ಬ

ಬ್ರಹ್ಮಾನಂದ - ಆನಂದದ ಪರಾಕಾಷ್ಠೆ, ಅಲೌಕಿಕ ಆನಂದ

ಬಾಲರಾಜಾಂಕಿತ - ಬಾಲಚಂದ್ರನಿಂದ ಶೋಭಿಸುವ

ಬುಧ - ನವಗ್ರಹಗಳಲ್ಲೊಂದು ಚಂದ್ರನಿಂದ ಬೃಹಸ್ಪತಿಯ ಪತ್ನಿಯಾದ ತಾರೆಯಲ್ಲಿ ಜನಿಸಿದವ

## ಭ

ಭವ - ಸಂಸಾರ

ಭಾನು - ಸೂರ್ಯ

ಭಾನಿತ - ಪ್ರಕಾಶ

ಭುಜಗಭೂಷ - ಸರ್ಪಭೂಷಿತಶಿವ

ಭೂತಿಪಾನಿತ – ವಿಭೂತಿಯಿಂದ ಕಂಗೊಳಿಸುವವ
ಬೃಂಗಾಲಕ – ದುಂಬಿಯಂತೆ ಮುಂಗುರುಳು

## ಮ

ಮಕರಮಂಡಲ – ಕಿವಿಗೆ ಧರಿಸಬಹುದಾದ ಆಭರಣ
ಮಹಿತಿ – ಸೂರ್ಯ
ಮಾತಂಗಿ – ಶಿವ
ಮಾರ – ಮನ್ಮಥ
ಮರಹರ – ಶಿವ
ಮಿಳ್ಳೆ – ಹೊರಹೊಮ್ಮಟೆ
ಮಿಥ್ಯ – ಸುಳ್ಳು
ಮುಕ್ತಫಲಹಾರ – ಮುತ್ತಿನಹಾರ
ಮೂರುಕಾಲ – ಜಾಗೃತ ಸ್ವಪ್ನ ಸುಶುಪ್ತಿ (ಭೂತ ವರ್ತಮಾನ ಭವಿಷ್ಯತ)

## ಯ

ಯುಗ್ಮ – ಜೋಡಿ

## ರ

ರಾಜನುರಾಶಿ – ರಾಜಸಿಂಹ
ರಿವುದನಾಗ್ನಿ – ಶತೃರೂಪದ ಕಾಡುಗಿಚ್ಚು

## ಲ

ಲಾಕ್ಷಾನಿವಾಸ – ಅರಗಿನಮನೆ

## ವ

ವಡ್ಯಾಣ – ಸೊಂಟದ ಆಭರಣ
ವರೂತ – ರಥ
ವಾರಿಜ – ಕಮಲ
ವಾಸುಕಿ – ಸರ್ಪ
ವಾಲ್ಮಿಕಿ – ವಾಲ್ಮೀಕದಿಂದ ಹುಟ್ಟಿದವನು
ವೃಷಭ – ಬಸವ
ವೇಣಿ – ಜಡೆ

## ಶ

ಶಶಿಧರ – ಚಂದ್ರ
ಶಾಕಿಣಿ – ಹೆಣವನ್ನು ತಿನ್ನಲು ಬರುವ ರಕ್ಕಸಿ
ಶುಂಡಾಲ – ಆನೆ
ಶುಂಭ – ಒಬ್ಬರಾಕ್ಷಸ, ನಿಶುಂಭ ಇವನ ತಮ್ಮ
ಶ್ರೀವತ್ಸಲಾಂಛನ – ವಿಷ್ಣು ಧರಿಸುವ ಆಭರಣ
ಶ್ರೀ ಚಕ್ರಪುರ – ಮೈಸೂರಿಗಿರುವ ಮತ್ತೊಂದು ಹೆಸರು ಚಾಮುಂಡೇಶ್ವರಿ ನೆಲೆಸಿರುವ ಸ್ಥಳ

## ಷ

ಷಡ್ ವೈರಿಗಳು - ಕಾಮಕ್ರೋಧ, ಮದ, ಲೋಭ, ಮೋಹ ಮತ್ತು ಮತ್ಸರ

ಷಡ್ ಸ್ಥಳ - ಜಂಗಮ, ಪ್ರಾಣಲಿಂಗಿ, ಪ್ರಸಾದಿ, ಭಕ್ತ

## ಸ

ಸನಕ - ಮಹಾವಿಷ್ಣುವಿನ ಭಕ್ತರು

ಸಚ್ಚಿದಾನಂದ - ಆನಂದ ಸ್ವರೂಪನಾದ ಪರಮಾತ್ಮ

ಸಮಾಧಿ - ಅಷ್ಟಾಂಗ ಯೋಗದಲ್ಲಿ ಕೊನೆಯ ಮೆಟ್ಟಿಲು

ಸಾಂಬ - ಶ್ರೀ ಕೃಷ್ಣನ ಮಗ ತಾಯಿ ಜಾಂಬವತಿ

ಸಾಮಜತವನ - ಗಜಮುಖ

ಸಾರಸದಳ - ಕಮಲದೆಸುಳು

ಸಾರಸಭವ - ಬ್ರಹ್ಮ

ಸಾರಸನುಹಿತೆ - ಲಕ್ಷ್ಮಿ

ಸಾಯುಜ್ಯ - ಮೋಕ್ಷ

ಸಿಂಧು - ವಿಶಾಲ

ಸುರುಚಿ - ಉತ್ಥಾನಪಾದನ ಕಿರಿಯ ಹೆಂಡತಿ

ಸುಘೋಷಣ - ಮಾದ್ರಿಪುತ್ರನಾದ ನಕುಲನ ಶಂಖ

ಸೂನು - ಮಗ

ಸ್ತಾವರ - ಸ್ಥಿರ

ಸ್ತಾಣ - ಶಿವ

## ಹ

ಹೊಗರು - ಶಾಂತಿ

# ಅನುಬಂಧ–೨

## ಟಿಪ್ಪಣಿಗಳು

**(ಸಂಖ್ಯೆಗಳು ಕೀರ್ತನೆ ಸಂಖ್ಯೆಯನ್ನು ಸೂಚಿಸುತ್ತವೆ)**

## ಕವಿಪರಮದೇವ

### ೧೦

**ಕೇದಿಗೆ ಸರವು** : ಸಾಗರ ತಾಲೂಕು ಕೇದಿಗೆ ಸರದ ಗಣೇಶನ ಬಗ್ಗೆ ರಚಿಸಿದ ಪದ್ಯ.

### ೧೩

**ಮಂಡಲಮನೆ** : ಸಾಗರ ತಾಲ್ಲೂಕು ಮಂಡಲಮನೆ ಗಣಪತಿಯನ್ನು ಕುರಿತು ರಚಿಸಿದ ಪದ್ಯ

### ೨೧

**ಇಕ್ಕೇರಿ** : ಇಕ್ಕೇರಿ ಅಘೋರೇಶ್ವರನ ಬಗ್ಗೆ ರಚಿಸಿದ ಪದ್ಯ ಐತಿಹಾಸಿಕ ಸ್ಥಳವಾದ ಇಕ್ಕೇರಿ ಟಂಕಸಾಲೆ ಗಣಪತಿ ದೇವರ ಪರಿಚಾರಕನಾಗಿ ಪರಮದೇವ ಕೆಲಸ ಮಾಡಿದರು.

### ೨೧

**ಕೋಣೆ ಲಕ್ಷ್ಮೀನಾರಾಯಣ** : ಪರಮದೇವ ಕವಿಯು ತಮ್ಮ ಹೆಚ್ಚಿನ ಜೀವಿತ. ಕಾಲವನ್ನು ಕಳೆದುದು ಭೀಮನ ಕೋಣೆಯಲ್ಲಿಯೇ.

**ಭೀಮನ ಕೋಣೆ ಲಕ್ಷ್ಮಿ ನಾರಾಯಣ** : ಅಲ್ಲಿಯ ಆರಾಧ್ಯದೈವ ಲಕ್ಷ್ಮೀನಾರಾಯಣ.

### ೨೫

**ಹೊಸಗುಂದ** : ಹೊಯ್ಸಳ ಸಾಂತರಸರಾಳಿದ ನಾಡು ಅಂದಿನ ರಾಜಧಾನಿ.

### ೨೫

**ನಂದಿತಳೆ** : ಸಾಗರ ತಾಲ್ಲೂಕಿನಲ್ಲಿದೆ.

೨೬

**ಕೆಳದಿ** : ಕಳದಿ ರಾಮೇಶ್ವರನನ್ನು ಕುರಿತು ಬರೆದ ಪದ್ಯ.

೩೩

**ಉಡುಪಿ** : ಉಡುಪಿ ಶ್ರೀಕೃಷ್ಣನ ಮೇಲೆ ರಚಿಸಿದ ಪದ್ಯ

೩೮

**ಹೊನ್ನೆಸರಹು** : ಸಾಗರ ತಾ ಹೊನ್ನೆಸರಹುವಿನಲ್ಲಿರುವ ವೇಣುಗೋಪಾಲನನ್ನು ಕುರಿತು ಬರೆದ ಪದ್ಯ

೩೯

**ಕೊಲ್ಲೂರು** : ಮನೆದೇವರು ಕೊಲ್ಲೂರು ಮೂಕಾಂಬಿಕೆಯ ಬಗ್ಗೆ ಮೂರು ಪದ್ಯಗಳನ್ನು ರಚಿಸಿದ್ದಾನೆ.

೪೨

**ಚಿಪ್ಪಳಿ** : ಚಿಪ್ಪಳಿಗೋಪಾಲಕೃಷ್ಣನನ್ನು ಪರಮದೇವರು ಪೂಜಿಸುತ್ತಿದ್ದರು. ಅವನ ಕುರಿತು ಬರೆದ ಪದ್ಯ.

೪೨

**ವರವರದಪುರ** : ವರದಹಳ್ಳಿ ಶ್ರೀ ಶ್ರೀಧರರ ಕ್ಷೇತ್ರ ಇಲ್ಲಿಯದುರ್ಗಾಂಬಾ ಮತ್ತು ಶಂಕರನನ್ನು ಕುರಿತು ರಚಿಸಿದ ಪದ್ಯ.

೪೯

**ಗೌತಮಪುರ** : ಗೌತಮಪುರ (ಗೌಜ) ಗೌತಮೇಶ್ವರನನ್ನು ಕುರಿತು ಬರೆದ ಪದ್ಯ.

೬೩

**ಗೆಣಸಿನಕುಣಿ** : ಸಾಗರ ತಾ. ಗೆಣಸಿನಕುಣಿ ಊರಿನ ಆರಾಧ್ಯದೈವ ವೆಂಕಟರಮಣನನ್ನು ಕುರಿತು ರಚಿಸಿದ ಪದ್ಯ.

೭೧

ವರದಾಮೂಲದ ಶಂಭುಲಿಂಗೇಶನ ಮೇಲಿನ ಪದ್ಯ.

೭೭

**ದಂಡು** : ೧೭೯೧ ರಲ್ಲಿ ಮರಾಠಿಗರ ದಂಡು ಬಂದು ಇಕ್ಕೇರಿ ಪೂರ್ಣವಾಗಿ ಕೊಳ್ಳೆ ಹೊಡದದ್ದನ್ನು ಗಮನಿಸಿರುವ ಕವಿ ತನ್ನ ಪದ್ಯದಲ್ಲಿ ಅದನ್ನು ಹೇಳಿದ್ದಾನೆ.

೯೮

**ಐತಿಹಾಸಕ** : ಅಂದಿನ ದಿನಗಳಲ್ಲಿ ಸಣ್ಣ ಪಟ್ಟ ಪಾಳೆಯ ಪಟ್ಟುಗಳಿಂದ ಪ್ರಜೆಗಳು ಪಡುತ್ತಿದ್ದ ಪಾಡಿನ ಚಿತ್ರಣ.

೧೦೮

ಪ್ರಜೆಗಳು, ಅಧಿಕಾರಿಗಳ ನಡುವಿನ ಸಂಬಂಧದ ಚಿತ್ರಣ

೧೦೯

ಪುಂಡರಿಂದ ಪ್ರಜೆಗಳಿಗೆ ಆಗುತ್ತಿದ್ದ ತೊಂದರೆ ವಿವರಣೆ

೧೧೪

ಬರಗಾಲ ಆದ್ದರಿಂದ ಪ್ರಜೆಗಳ ಪಡುತ್ತಿದ್ದತೊಂದರೆಯ ವಿವರಣೆ.

೧೧೯

ದಂಡು ಬಂದು ಪ್ರಜೆಗಳು ಪಡುವ ಪಾಡಿನ ಚಿತ್ರಣ ಕರ್ಕಿಕೇಶವದಾಸರು

## ಕರ್ಕಿ ಕೇಶವದಾಸರು

**ಕರ್ಕಿ** : ಉತ್ತರಕನ್ನಡ ಜಿಲ್ಲೆಯ ಹೊನ್ನಾವರ ತಾಲ್ಲೂಕಿನಲ್ಲಿದೆ. ಕೇಶವದಾಸನ ಆರಾಧ್ಯ ದೈವ ಕೇಶವನ ದೇವಾಲಯ ಅಲ್ಲಿದೆ.

೨೪೦

**ಕರಿಕಾನೇಶ್ವರಿ** : ಹೊನ್ನಾವರ ತಾ ಕರ್ಕಿ ಸಮೀಪ ಕರಿಕಾನೇಶ್ವರಿ ಇದೆ, ಇಲ್ಲಿಯ ಆರಾಧ್ಯದೈವ ಕರಿಕಾನೇಶ್ವರಿ. – ಬೇಟೆರಾಯದೀಕ್ಷಿತರು:

## ಬೇಟೆರಾಯ ದೀಕ್ಷಿತರು

### ೨೪೩

**ವಿಘ್ನೇಶ್ವರನ ಸ್ತೋತ್ರ** : ಆಶೀರ್ವಾದ, ಉಡುಗೊರೆ, ಚಂಡಾಡುವ ಹಾಡು ಮೊದಲಾದ ಸಂಪ್ರದಾಯದ ಹಾಡುಗಳು ಹೆಚ್ಚಾಗಿವೆ.

## ಭಟಕಳ ಅಪ್ಪಯ್ಯ

### ೪೨೭

ಇಡಗುಂಜಿ ಗಣಪತಿಯ ಮೇಲೆ ರಚಿಸಿದ ಪದ್ಯ.

### ೪೨೮

ಮಂಗೇಶದೇವಾಲಯ ಗೋವೆಯಲ್ಲಿದೆ. ಅವನ ಮೇಲೆ ರಚಿಸಿದ ಪದ್ಯ.

### ೪೩೧

ಕೊಡಚಾದ್ರಿ – ಮೂಕಾಂಬಿಕೆಯ ಮೇಲೆ ರಚಿಸಿದ ಪದ್ಯ

### ೪೩೬

ಶ್ರೀಗುರುವು ಮೊದಲ ಬಾರಿಗೆ ಕೊಟ್ಟ ದರ್ಶನದ ನೆನಪು ಮಾಡಿ ರಚಿಸಿದ ಪದ್ಯ.

### ೪೩೭

ನಗರ (ಹಳೆನಗರ) ಶಿವಮೊಗ್ಗ ಜಿಲ್ಲೆಯ, ಕೆಳದಿ ಅರಸರ ಮೂರನೇ ರಾಜಧಾನಿ, ಅರಮನೆ ಬಾಗಿಲು ಕಾಯುವವನಿಗೆ ಅವನ ಕೈಯಲ್ಲಿಯ ತುಪಾಕಿಯ ಮೇಲೆ ಕಟ್ಟಿಕೊಟ್ಟ ಹಾಡು.

### ೪೩೮

ಪುಣ್ಯ ಸ್ತ್ರೀ ಪಂಚತ್ವವನ್ನೈದಾಗ ರಚಿಸಿದ ಹಾಡು.

### ೪೩೯

ನಗರದ ಅರಮನೆ ಬಾಗಿಲಿನ ರಕ್ಷಕನಿಗೆ ಅವನ ಗುಡಿಗುಡಿಯ ವಿಷಯವಾಗಿ ಬರೆದು ಕೊಟ್ಟ ಪದ.

### ೪೪೨

ಸ್ಥಾವರ ಜಂಗಮ ಪ್ರಾಣಲಿಂಗದ ಬಗ್ಗೆ.

### ೪೪೫

ಕುಲದೇವತೆ ಮಹಾಲಕ್ಷ್ಮೀಯ ಮೇಲೆ ರಚಿಸಿದ ಹಾಡು

### ೪೪೬

ಕೊಲ್ಲೂರು ಮೂಕಾಂಬಿಕೆಯ ಮೇಲೆ ರಚಿಸಿದ ಹಾಡು

### ೪೪೭

ಸಾಗರದ ಅಮಲದಾರರ ಓಲಗದಲ್ಲಿ ರಚಿಸಿದ ಸಂಗೀತ ಸೇವೆ ಹಾಡು.

### ೪೪೮

ಸಕಲ ವೇದಾಂತದ ಸಾರಭೂತವಾದ ವಿವೇಕಪದ ರಚಿಸಿದ ಹಾಡು.

### ೪೫೦

ಅಪ್ಪಯ್ಯನವರ ಪರಿಚಾರಕನಾದ ನಂದನೆಂಬುವನು ಮೃಡೇಶ್ವರದೇವರ ಮುಂದೆ ಮಾಡಿದ ಸಂಗೀತ ಸೇವೆಯ ಹಾಡು.

### ೪೫೧

ಪರಊರಿನ ಸ್ತ್ರೀಯರು ಅಪ್ಪಯ್ಯನನ್ನು ನೋಡಲು ಬಂದಾಗ ರಚಿಸಿದ ಹಾಡು.

### ೪೮೪

ಕುಲದೇವರಾದ ಶ್ರೀಪಾಲ ಸ್ಥಲ ಮಂಗೇಶನ ಬಳಿಗೆ ಹೋಗುವ ಯಾತ್ರಾಸ್ತರ ಹತ್ತಿರ ಅಪ್ಪಯ್ಯನವರು ಆ ದೇವರಿಗೆ ಬರೆದು ಕಳಿಸಿದ ಪತ್ರರೂಪದ ಹಾಡು.

### ೪೬೧

ಈ ಹಾಡು ಬಹಳ ನ್ಯೂನತೆಯಿಂದ ಕೂಡಿರುವುರಿಂದ ಅಪ್ಪಯ್ಯನವರ ಕೃತಿ ಎಂದು ಹೇಳಲಾಗದು ಎಂದು ಈ ಪುಸ್ತಕದ ಸಂಪಾದಕರು ತಿಳಿಸಿರುತ್ತಾರೆ.

### ೪೬೨

ಗಿರಿಜಾಕಲ್ಯಾಣದ ಕಥೆಯಲ್ಲಿ ಈಶ್ವರನು ವಟುವೇಶವನು ತಾಳಿ ತನ್ನನು ಕುರಿತು ತಪಸ್ಸು ಮಾಡುವ ಪಾರ್ವತಿಗೆ ಶಿವದೂಷಣೆಯ ಹಾಡು.

### ೪೬೩

ಯಾಚಕರ ಕಷ್ಟಗಳನ್ನು ನೋಡಿ ಸಹಿಸಲಾಗದೆ ಬರದಿದ್ದು.

### ೪೬೫

ಧರ್ಮಸ್ಥಳದ ಹೆಗ್ಗಡೆಗೆ ಪುನದೃಷ್ಟಿಯಾಗಬೇಕೆಂದು ದೇವರಿಗೆ ಬರೆದ ಹಾಡು

### ೪೬೬

ಕನ್ನಡ, ಮರಾಠಿ, ಹಿಂದೂಸ್ತಾನಿ, ಬಾಷೆಗಳನ್ನಾಡುವ ಮೂರು ಜನರು ಅರಿಕೆ ಮಾಡಿಕೊಂಡಂತೆ ಆ ಮೂರು ಭಾಷೆಗಳಲ್ಲಿ ಹೇಳಿದ ಒಂದೇ ಹಾಡು.

### ೪೭೩

ನಗರದ ಬಸವನೃಪಗೆ ಶ್ರೀ ಕೊಲ್ಲೂರು ಮೂಕಾಂಬೆದೇವಿಯು ಹೂವಿನ ಪ್ರಸಾದ ದಯಪಾಲಿಸಿದಾಗ ಹೇಳಿದ ಹಾಡು.

### ೪೭೫

ಗೋಕರ್ಣದ ಮಹಾಂಕಾಳಿಯ ಮೇಲೆ ಸಂಸ್ಕೃತವಲ್ಲಿ ರಚಿಸಿದ ಅಷ್ಟಕ.

### ೪೭೬

ಮಂಗೇಶ ದೇವರ ಮೇಲೆ ರಚಿಸಿದ ಆರತಿಹಾಡು.

# ಅನುಬಂಧ – ೩

## ಅಂಕಿತ ನಾಮ ಸೂಚಿ

## ಗ



## ಚ



## ತ



## ಧ

## ಬ



## ಮ

### ಶ



### ಸ



### ಹ

# ಅನುಬಂಧ ೪

## ಕೀರ್ತನೆಗಳ ಅಕಾರಾದಿ

ಕೀರ್ತನೆಗಳ ಅಕಾರಾದಿಯನ್ನು ಹೇಳುವ ಸಂದರ್ಭದಲ್ಲಿ ಕೀರ್ತನೆಗಳ ಸಂಖ್ಯೆಯನ್ನೂ ಕಂಸದಲ್ಲಿ ಕೀರ್ತನೆಕಾರರ ಹೆಸರಿನ ಮೊದಲ ಅಕ್ಷರವನ್ನು ಕೊಡಲಾಗಿದೆ.

**ಪ** : ಪರಮದೇವ. ; **ಕ** : ಕರ್ಕಿ ಕೇಶವದಾಸ. ; **ಬೇ** : ಬೇಟೆರಾಯ ದೀಕ್ಷಿತ ;

**ಶ** : ಶಂಕರಭಟ್ಟ ಅಗ್ನಿಹೋತ್ರಿ : **ಅ** : ಅಪ್ಪಯ್ಯ (ಭಟಕಳ)

| ಕ್ರಮ. ಸಂಖ್ಯೆ | ಕೀರ್ತನೆಯ ಪ್ರಾರಂಭದ ಸಾಲು | ಕೀರ್ತನೆ ಸಂಖ್ಯೆ |
|---|---|---|
| | **ಅ** | |
| ೧. | ಅಂಗವೇ ಶ್ರೀಮಹಾಂಗಿರೀಶ ಲಿಂಗವಾದುದು (ಅ) | ೪೨೮ |
| ೨. | ಅಂತರಂಗದ ಸುಖ ಹೇಳುವುದಲ್ಲಾ (ಅ) | ೪೨೯ |
| ೩. | ಅಂತರಾತ್ಮನ ಧ್ಯಾನವನ್ನು ಅಂತರಂಗದಿ ಮೊಡೊ ನೀನು (ಅ) | ೪೩೦ |
| ೪. | ಅಂಬಾ ತ್ರಿಪುರ ಸುಂದರೀ ಅದ್ವೈತ ಕಾರೀಗೆ (ಅ) | ೪೩೧ |
| ೫. | ಅಂಬಾ ಮೂಕಾಂಬಾ ಪಾಹಿ (ಅ) | ೪೩೨ |
| ೬. | ಅಂಬುಧಿ ಶಯನ ಪೀತಾಂಬರಧರ ಕಮಲಾಂಬಿಕೆ (ಪ) | ೧೯ |
| ೭. | ಅಗಸುತೆ ನಾಗಭೂಷಣ ಪ್ರೀತೆ (ಪ) | ೨೦ |
| ೮. | ಅಜಸುರ ಸನ್ನುತ ಸುಜನ ನಂದಿತ ಹರೇ (ಬೆ) | ೨೪೪ |
| ೯. | ಅಜ್ಞಾನ ಹೋಮದಾ ಅಗ್ನಿ ಹೋತ್ರಿಯು ತಾನು (ಶ) | ೩೫೮ |
| ೧೦. | ಅಜ್ಞಾನಿ ಜೀವನಿಗೆ ಅಭಿಮಾನ ಬಹಳ (ಶ) | ೩೫೯ |
| ೧೧. | ಅನ್ಯರನು ಬೇಡೆನು ಚನ್ನಕೇಶವ (ಕ) | ೧೪೮ |
| ೧೨. | ಅರ್ಥವಿಲ್ಲದ ನರನು ವ್ಯರ್ಥ ಬಹುಕಾಲ (ಪ್ರ) | ೮೨ |

| ಕ್ರಮ. ಸಂಖ್ಯೆ | ಕೀರ್ತನೆಯ ಪ್ರಾರಂಭದ ಸಾಲು | ಕೀರ್ತನೆ ಸಂಖ್ಯೆ |
|---|---|---|
| ೩೭. | ಇದೇ ಪರಮಾರ್ಥ ಪ್ರಾಪ್ತಿಗೆ (ಶ) | ೩೭೧ |
| ೩೮. | ಇದೇ ಪುರುಷಾರ್ಥ ಮನುಜ (ಶ) | ೩೭೨ |
| ೩೯. | ಇದೇ ಪೂರ್ಣಪದಾ ತಿಳಿ ಜೀವಾ(ಶ) | ೩೭೩ |
| ೪೦. | ಇದೇ ಭಕ್ತವರ್ಯನ ಲಕ್ಷಣ ಪಾವನವಿದು ಕಣ (ಶ) | ೩೭೪ |
| ೪೧. | ಇದೇ ನೋಡು ನಿನ್ನ ನಿಜವಾದ ಸ್ವರೂಪ ಜೀವ (ಶ) | ೩೭೦ |
| ೪೨. | ಇನ್ನಾದರೂ ದಯಬಾರವೇ (ಶ) | ೨೨೨ |
| ೪೩. | ಇನ್ನೇತರೊಳಗಾದೆ ಎನಗಿಲ್ಲವೋ (ಪ) | ೭೮ |
| ೪೪. | ಇವರಿಂದಲೇ ಕಟ್ಟಿತು ಜಗವು (ಪ) | ೮೬ |
| | **ಈ** | |
| ೪೫. | ಈಗಳೂ ಆಗಳೋ ಇನ್ನಾವಗಳೋ (ಪ) | ೮೭ |
| ೪೬. | ಈಗಿದ್ದ ಇರುವೇ ಮನುಜರಿಗೆ ಈಗಿದ್ದ ಇರವೇ (ಅ) | ೪೩೫ |
| ೪೭. | ಈ ದೇಹಾಭಿಮಾನವೇ ಸಂಸಾರಮೂಲ (ಶ) | ೩೭೫ |
| ೪೮. | ಈ ಪುರುಷರಿಗೆ ಮರುಳು ಪ್ರವಾ ಒಳ್ಳೆ ತಿನ್ನು (ಪ) | ೨೨ |
| ೪೯. | ಈವಿಬುಧರ ಸಂಘವೇ ಮಹಾಪ್ರಮೋದ ದುರ್ಲಭ (ಶ) | ೩೭೬ |
| ೫೦. | ಈಸಲಾರೆ ಗುರುವೇ ಸಂಸಾರಶರಧಿಯ | ೧೪೩ |
| ೫೧. | ಈ ಸಾಧನೆಯ ಈ ಧರ್ಮಗಳ ಗುರಿಯೊಂದೇ (ಶ) | ೩೭೭ |
| ೫೨. | ಈ ಸೊಬಗನಿನ್ನಾವ ದೇವರೊಳು ಕಾಣೆ (ಬೇ) | ೨೪೭ |
| | **ಎ** | |
| ೫೩. | ಎಂತು ಪೊಗಳಲಿ ನಿನ್ನ (ಶ) | ೩೭೮ |
| ೫೪. | ಎಂದಿಗಾದರೂ ಭವ ಬಂಧನ ಹರಿಯದು (ಪ) | ೨೩ |
| ೫೫. | ಎಂದಿಗೂ ಮರುಳಾಗೆನೊ ಸಂಸಾರಕ್ಕೆ (ಕ) | ೨೨೩ |
| ೫೬. | ಎಂದಿಗೆ ದೂರಕುವನು ಶ್ರೀಗುರುವನ (ಅ) | ೪೩೬ |
| ೫೭. | ರಂಗನಾಥ ಪಾಲಿಸೆನ್ನ ಮಂಗಳಾಂಗ ಶ್ರೀಶ ಬೇಗ (ಶ) | ೨೭೯ |
| ೫೮. | ಎನ್ನ ಮೋಹನ ತುಪಾಕಿಯನು (ಅ) | ೪೩೭ |
| ೫೯. | ಎಲ್ಲಿ ನೋಡಿದರಲ್ಲಿ ಚೆನ್ನಕೇಶವನು (ಪ) | ೧೪೯ |
| ೬೦. | ಎಲ್ಲಿ ಹುಟ್ಟಿದರೇನು ಎಲ್ಲಿ ಮಡಿದರೇನು (ಪ) | ೨೪ |

| ಕ್ರಮ. ಸಂಖ್ಯೆ | ಕೀರ್ತನೆಯ ಪ್ರಾರಂಭದ ಸಾಲು | ಕೀರ್ತನೆ ಸಂಖ್ಯೆ |
|---|---|---|
| ೨೯೧. | ಬಾಗುವೇ ಶ್ರೀ ಗುರೋ (ಶ) | ೩೪೭ |
| ೨೯೨. | ಬಾ ಬಾ ಬಾ ಗುರು ದತ್ತಾತ್ರೇಯ ನೀ ಕರಣಾ ಮಯಾ (ಶ) | ೩೪೫ |
| ೨೯೩. | ಬಾಲಗೋಪಾಲ ಬಾಲುಜಾಣನೇ ಗೋಪಮ್ಮ (ಶ) | ೫೨ |
| ೨೯೪. | ಬಾರಕ್ಕೆ ನಾವಿಬ್ಬರಾಡುವ ಯೋಗ (ಅ) | ೪೫೭ |
| ೨೯೫. | ಬಾರ್‍ಯ ಶ್ರೀ ಚನ್ನಕೇಶವ (ಕ) | ೧೮೩ |
| ೨೯೬. | ಬಾರೋ ನೀರದ ನೀಲ ಸುಂದರ (ಬೇ) | ೩೦೮ |
| ೨೯೭. | ಬಾರೋ ಬಾರೋ ಚನ್ನಕೇಶವನೇ (ಕ) | ೧೮೪ |
| ೨೯೮. | ಬಾರೋ ಯಾದವ ಕುಲಚಂದ್ರ (ಬೇ) | ೨೭೨ |
| ೨೯೯. | ಬಾರೋ ವೆಂಕಟರಮಣ ಭವದುರಿತ ಸಂಹರಣ (ಪ) | ೫೩ |
| ೩೦೦. | ಬಾರೋ ಶ್ರೀರಂಗ (ಕ) | ೧೮೫ |
| ೩೦೧. | ಬಾಳು ಸೌಖ್ಯದಿಂ ತನಯನೆ ಬಾಳು ಸೌಖ್ಯದಿಂ (ಬೇ) | ೩೦೯ |
| ೩೦೨. | ಬಾಳು ಸೌಖ್ಯದಿಂ ತನುಜೆಯ (ಬೇ) | ೩೧೦ |
| ೩೦೩. | ಬಿಡು ಬಿಡು ಮನುಜಾ ಜಢದಭಿಮಾನ (ಶ) | ೪೧೫ |
| ೩೦೪. | ಬಿತ್ತಿರೋ ಬೀಜವ ಗಜನಿಗೆ (ಪ) | ೧೧೬ |
| ೩೦೫. | ಬಿನ್ನವೆನ್ನಣಿಸದಿರು (ಕ) | ೨೧೬ |
| ೩೦೬. | ಬಿಡದೆ ರಕ್ಷಿಸೋ ಎನ್ನನು ಜಗದೊಡೆಯ ನಂಬಿದೆ (ಪ) | ೮೦ |
| ೩೦೭. | ಬಿಡೋ ಭ್ರಾಂತಿ ಜೀವಾ ಬಿಡೋ ಕಾವ್ಯಸೇವಾ (ಶ) | ೪೧೬ |
| ೩೦೮. | ಬೆಳಗಿರೆ ಆರತಿಯ (ಪ) | ೧೭ |
| ೩೦೯. | ಬೇಗ ತಿಳಿೂ ಶುದ್ಧ ಮನದಿ (ಶ) | ೪೧೭ |
| ೩೧೦. | ಬೇಡುವ್ರೋ ರಂಗ ಹೆಂಗಳ್ ತಳಿ (ಪ) | ೫೪ |
| ೩೧೧. | ಬೇಡುವೆ ನಾ ಯಾದವಾ (ಶ) | ೩೪೮ |
| ೩೧೨. | ಬೇಡುವೆ ನಿಮ್ಮ ಪಾದಕೆ ಕರಗಳ ನೀಡಿ (ಪ) | ೧೮ |
| ೩೧೩. | ಭೋಧಿಸು ಗುರುವರನೆ (ಶ) | ೩೪೯ |
| ೩೧೪. | ಭೋಧದ ಘನಮಳೆಯುಸುರಿದು | ೪೧೮ |
| ೩೧೫. | ಬೋಧಾ ಜ್ಞಾನದಾ ಬೋಧ (ಶ) | ೪೧೯ |
| ೩೧೬. | ಭಕ್ತಿಯೆಂಬ ಬೀಜ (ಕ) | ೨೩೮ |
| ೩೧೭. | ಭಕ್ತಿಯನು ಪಾಲಿಸುತ (ಕ) | ೧೮೬ |

## ಯ

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ
ಹರಿದಾಸ ಸಾಹಿತ್ಯ ಒಂದು ಪ್ರಮುಖ ಮಜಲು
ಹರಿದಾಸರು ರಚಿಸಿರುವ ವಿಪುಲ ಕೀರ್ತನೆಗಳು
ಕರ್ನಾಟಕ ಸಾಂಸ್ಕೃತಿಕ ತವನಿಧಿಗಳಾಗಿವೆ
ದಾಸಸಾಹಿತ್ಯದಲ್ಲಿ ಕಂಡುಬರುವ
ಭಾಷಿಕ ಹಾಗೂ ಸಾಹಿತ್ಯಕ ಸೊಬಗು,
ಆಧ್ಯಾತ್ಮಿಕ ಬೆಡಗು, ಸಂಗೀತದ ಮೆರುಗು ಅನನ್ಯ.
ದಾಸ ಸಾಹಿತ್ಯವು ಜ್ಞಾನ, ಮನೋಲ್ಲಾಸ
ಮತ್ತು ಜೀವ ಸಂಸ್ಕಾರಗಳ ತ್ರಿವೇಣಿ ಸಂಗಮ.
ಇಂಥ ದಾಸ ಸಾಹಿತ್ಯವನ್ನು
ಸಮಗ್ರವಾಗಿ ಸಂಗ್ರಹಿಸಿ, ಸಂಪಾದಿಸಿ,
ಬಹುಮಾಧ್ಯಮದಲ್ಲಿ ಹಾಗೂ ಸುಲಭ ಬೆಲೆಯಲ್ಲಿ
ಕನ್ನಡ ಜನತೆಗೆ ನೀಡುವ ಮಹತ್ವದ ಆಶಯವೇ
**ಸಮಗ್ರ ದಾಸ ಸಾಹಿತ್ಯ ಯೋಜನೆ**



ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಕನ್ನಡ ಭವನ ಜೆ.ಸಿ. ರಸ್ತೆ
ಬೆಂಗಳೂರು